ಶ್ರೀಶೇಷಾಚಲ ಗ್ರಂಥಮಾಲೆ, ಆನಂದವನ

# ನನ್ನ ಗೃಹಿಣಿ



ಭಿ. ಪ. ಕಾಳೆ.

ಪ್ರಕಾಶಕ:
ಯ. ಗು. ಕುಲಕರ್ಣಿ,
ಸಂಪಾದಕ, ಸ. ಚ. ಆನಂದವನ,



ಬೆಲೆ ೧೦ ಆಣೆ

# ಲೇಖಕನ ಹೃದ್ಗತಿ.



ಈ ಚಿಕ್ಕ ಪುಸ್ತಕವು "Vicar of Wakefield" ಮತ್ತು "**वाईकर भटजी**" ಎಂಬ ಪುಸ್ತಕಗಳ ನಿರೀಕ್ಷಣದಿಂದ ಬರೆಯಲ್ಪಟ್ಟಿರುತ್ತದೆ. ಈ ಪುಸ್ತಕ ವಾಚನದಿಂದ ಸಾಂಸಾರಿಕರ ಮನರಂಜನವಾಗುವದಲ್ಲದೆ, ತಕ್ಕ ಬೋಧವೂ ಆಗಬಹುದಾಗಿದೆ. ಸಂಸಾರಿಕರಿಗೆ ಕಾಲ್ಪನಿಕಸಾಮಾಜಿಕ ಸಂಕಟಗಳ ಇಲ್ಲವೆ ಕಾಲ್ಪನಿಕ ಸುಖ-ದುಃಖ ಇವುಗಳಿಗಿಂತ ಇಂಥ ಕೇವಲ ಸಂಸಾರಕ್ಕೆ ಸಂಬಂಧಿಸಿದ ವಿಷಯಗಳ ಕಥೆ-ಕಾದಂಬರಿಗಳ ವಾಚನ-ಮನನದಿಂದಲೇ ಹೆಚ್ಚು ಉಪಯೋಗವಾಗುವದೆಂದು ತಿಳಿದು ಈ ಪುಸ್ತಕವನ್ನು ಬರೆದಿರುತ್ತೇನೆ.

ಈ ಪುಸ್ತಕವು ಸದ್ಬೋಧ ಚಂದ್ರಿಕೆಯಲ್ಲಿ ಭಾಗಶಃ ಪ್ರಕಟವಾಗಹತ್ತಿದ ಕಾಲದಲಿ ಎಷ್ಟೋ ಜನ ಕನ್ನಡ ವಾಚಕರು ಈ ಪುಸ್ತಕದ ಬಗ್ಗೆ ಪ್ರಶಂಶಾಪರ ಉದ್ಗಾರಗಳನ್ನು ಹೊರಡಿಸಿರುವರು. ಅದರಿಂದ ಈ ಪುಸ್ತಕವು ಬಹು ಜನ ಸಮಾಜದ ಪ್ರೀತಿಗೆ ಪಾತ್ರವಾಗಬಹುದೆಂದು ನಂಬಿರುತ್ತೇನೆ.

ಇನ್ನು ಇದರಲ್ಲಿಯ ಹಲ-ಕೆಲವು ದೋಷಗಳು ಬರವಣಿಗೆಯಲ್ಲಿ ಹಾಗು ಮುದ್ರಣದಲ್ಲಿ ಉಳಿದಿರುತ್ತವೆ. ಅವುಗಳನ್ನು ಮುಂದಿನ ಆವೃತ್ತಿಯಲ್ಲಿ ಸರಿಪಡಿಸಲಾಗುವದು.

ಆನಂದವನ
೧೬-೨-೧೯೩೬

ಕನ್ನಡಿಗರ ಸೇವಕ,
**ಲೇಖಕ--ಕಾಳೆ.**

# ನನ್ನ ಗೃಹಿಣಿ.

## ೧ ಗೃಹಿಣೀ ಗೃಹಮುಚ್ಯತೇ!



“ಸಂಸಾರದಲ್ಲಿ ಮನುಷ್ಯನಿಗೆ ಸುಖಕ್ಕಿಂತ ದುಃಖವೇ ಹೆಚ್ಚು’ ಎಂಬ ಉದ್ಗಾರವು ಪ್ರತಿಯೊಬ್ಬನ ಬಾಯಿಂದ ಹೊರಡುತ್ತಿರುವದೇನೋ ನಿಜ; ಆದರೆ ಇಂತಹ ದುಃಖಮಯ ಹಾಗು ಕ್ಲೇಶದಾಯಕವಾದ ಸಂಸಾರವನ್ನು ಕಂಡೂ ಕಂಡು ತ್ಯಾಗ ಮಾಡುವಂತಹ ಭಗವದ್ಭಕ್ತರೆಷ್ಟು ಜನರಿರುವರೆಂಬದನ್ನು ಎಣಿಕೆ ಹಾಕ ಹೋದರೆ ಸಿಗುವದಿಲ್ಲ. ಅಂತಹರು ತೀರ ದುರ್ಮಿಳರೆಂದೇ ಹೇಳಬೇಕಾಗುತ್ತದೆ. ಆದರೂ ಒಳ್ಳೇ ಸೋಜಿಗದ ಸಂಗತಿಯೇನಂದರೆ, ಎಷ್ಟೋ ಜನರು ಬರಿಯ ಬಾಯಿಂದ ಮಾತ್ರ “ಈ ಸಂಸಾರವು ಕ್ಲೇಶದಾಯಕವು; ದುಃಖಮಯವು” ಎಂದೆನ್ನುತ್ತ, ತಮ್ಮ ಕೃತಿಗಳಿಂದ ಅದೇ ಸಂಸಾರವನ್ನು ತಬ್ಬಿಕೊಳ್ಳಲಿಕ್ಕೆ ಹೆಚ್ಚಾಗಿ ಆತುರರಾಗಿರುತ್ತಾರೆ. ಸಂಸಾರದಲ್ಲಿ ಇಂಥ ವ್ಯಕ್ತಿಗಳೇ ಹೆಚ್ಚಾಗಿರುವವು. ಘಳಿಘಳಿಗೆ ಈ ಸಂಸಾರಸಾಗರದೊಳಗಿನ ಅಖಂಡ ದುಃಖಗಳ ಮತ್ತು ಯಾತನೆಗಳ ವಿಷಯವಾಗಿ ತಿರಸ್ಕಾರದ ಉದ್ಗಾರಗಳನ್ನು ಪಶ್ಚಾತ್ತಾಪದ್ಯೋತಕ ಮುಖಮುದ್ರೆಯಿಂದ ಹೊರಹೊರಡಿಸುವವರೂ, ಪರಕ್ಷಣದಲ್ಲಿ ಅದೇ ಈ ಸಂಸಾರದ ಲಿಗಾಡನ್ನು ಪ್ರತ್ಯಕ್ಷ ತಮ್ಮ ಹುಟ್ಟಿಯ ಮಕ್ಕಳ ಕೊರಳಿಗೆ ಸುತ್ತುವವರೆಯವರೂ ಮನೆ ಮನೆಗೂ ಕಂಡು ಬರುತ್ತಾರೆ. ಇದರ ಮೇಲಿಂದ ಯೋಚಿಸಲು, ‘ಸಂಸಾರವು ಕ್ಲೇಶಮಯವೆಂದು ಎಲ್ಲ ಕಡೆಯಿಂದಲೂ ಕೇಳಬರುವ ಆಕ್ರೋಶದ ಕೂಗು, ಕೇವಲ ಮಿಥ್ಯವೂ ನಿರರ್ಥಕವೂ ಆದದ್ದೆಂದು ಅನಿಸದಿರದು.

ಅದು ಏನಿದ್ದರೂ ಹೇಗಿದ್ದರೂ ಶಬ್ದದಿಂದ ಸಂಸಾರದ ಧಿಃಕಾರ, ಕೃತಿಯಿಂದ ಅದೇ ಸಂಸಾರದಲ್ಲಿ ಅಪ್ರತಿಬಂಧವಾದ ಪ್ರೀತಿ ಈ ಪರಸ್ಪರ ವಿರುದ್ಧವಾದ ಪ್ರಕಾರಗಳು ಪ್ರತಿಯೊಂದು ಮನೆಯಲ್ಲಿ ಕಂಡು ಬರುತ್ತವೆಂಬದು ಮಾತ್ರ ನಿಜವು. ನಾನು ಸಂಸಾರ ಸಾಗರದಲ್ಲಿ ಬಹಳ ದೂರದ ವರೆಗೆ ಈಸಿ ಬಂದವನಾಗಿದ್ದೇನೆ; ಇದರಿಂದ ನನಗೆ ಸಂಸಾರ ವಿಷಯಕ ಎಷ್ಟೋ ಸಂಗತಿಗಳು ಗೊತ್ತಾಗಿದ್ದು, ನಾನು

ಅವುಗಳ ಅನುಭವವನ್ನೂ ಪಡೆದಿರುತ್ತೇನೆ. ನನ್ನ ಸಂಸಾರ ಯಾತ್ರೆಯ ಕಥನವು ಬೋಧಪ್ರದವಾಗಿರದಿದ್ದರೂ ಮನೋರಮವಾಗಿರುವದೆಂದು ಬಹು ಜನ ವಾಚಕರಿಗೆ ಅನಿಸಬಹುದಾಗಿದೆ. ಈ ನನ್ನ ಸಂಸಾರದ ಸಂಗತಿಯನ್ನು ಹೇಳಹತ್ತಿದ ಹಾಗೆ ನನಗೂ ಕೆಲಮಟ್ಟಿಗೆ ಮನೋರಂಜನವಾಗಬಹುದಾಗಿದೆ. ತಗ್ಗು-ದಿನ್ನೆಗಳುಳ್ಳ ಗುಡ್ಡುಗಾಡು ಪ್ರದೇಶದಲ್ಲಿ ಕಲ್ಲು, ಮುಳ್ಳುಗಳನ್ನು ತುಳಿಯುತ್ತ ಬಹು ಕಷ್ಟದಿಂದ ಮಾರ್ಗಕ್ರಮಿಸಿ ವಿಸ್ತೀರ್ಣವಾದ ಬೈಲು ಪ್ರದೇಶದಲ್ಲಿ ಹೋಗಿ ನಿಂತುಕೊಂಡ ಮೇಲೆ ಹಿಂದಿರುಗಿ ನೋಡಿದರೆ, ತಾನು ಕ್ರಮಿಸಿ ಬಂದ ದಾರಿಯನ್ನೂ ಕಷ್ಟದಾಯಕವಾದ ಪ್ರದೇಶಗಳನ್ನೂ ಕಂಡು, ದಣಿದು ಕಂಗೆಟ್ಟ ಜೀವಕ್ಕೆ ಹೇಗೆ ಒಂದು ಬಗೆಯ ಆಹ್ಲಾದವೆನಿಸುವದೋ, ಅದೇ ಬಗೆಯ ಆಹ್ಲಾದವು ಈ ನನ್ನ ಸಂಸಾರದ ಕಥನವನ್ನು ನಾನು ವಾಚಕರ ಮುಂದಿರಿಸುವದರಿಂದ ನನಗನಿಸಬಹುದಾಗಿದೆ.

ಖುದ್ದ ನನ್ನ ಇಚ್ಛೆ-ನಿರಿಚ್ಛೆಗಳ ಕಡೆಗೆ ವಿಶೇಷ ಲಕ್ಷ್ಯಗೊಡದೆ ನಾನು ಚಿಕ್ಕವನಿರುವಾಗಲೇ-ನನ್ನ ಅಜ್ಞಾನಪಣೆಯಲ್ಲಿಯೇ-ನನ್ನ ಪರಮಪೂಜ್ಯ ತೀರ್ಥರೂಪರವರು ತಮಗೆ ಸರಿದೋರಿದ ಮೇರೆಗೆ ಒಬ್ಬ ಕನ್ಯೆಯನ್ನು ತೆಗೆದು ಅವಳೊಡನೆ ನನ್ನ ಲಗ್ನ ಮಾಡಿ ಬಿಟ್ಟರು. ನನ್ನ ತೀರ್ಥರೂಪರವರೇ ಅವರು! ಅವರು ನನಗೆ ಹಾಕಿ ಕೊಟ್ಟ ಈ ಸಂಸಾರದ ''ಮೂಲಕ್ಕರವು'' ನನ್ನ ಕಲ್ಯಾಣಕ್ಕಾಗಿಯೂ ಸುಖಕ್ಕಾಗಿಯೂ ಇತ್ತೆಂಬುದು ಸ್ಪಷ್ಟನೇ ಆಗಿತ್ತು. ಆಧುನಿಕ ಕಾಲದಂತೆ ನನ್ನ ಧರ್ಮಪತ್ನಿಯನ್ನು-ನನ್ನ ಗೃಹಿಣಿಯನ್ನು-ನಾನು ಖುದ್ದಾಗಿ ಆರಿಸದೆ, ನನ್ನ ಯಜಮಾನರೇ ಆರಿಸಿದರೆಂಬುದು ನಿಜವಿದ್ದರೂ, ಅವರ ಆ ಆಯ್ಕೆಯ ವಿಷಯವಾಗಿ ನನ್ನ ಕಲ್ಪನೆಯು ಇದುವರೆಗೆ ಎಂದೂ ವಿಕಲ್ಪ ಭಾವನೆಯುಳ್ಳದ್ದಾಗಿರುವದಿಲ್ಲ.

ತಾರುಣ್ಯದೊಳಗಿನ ಹುಂಬ ಹಾಗು ಅಪಕ್ವ ವಿಚಾರ, ಅನನುಭವಿಕತ್ವದ ಅಸಂಖ್ಯಾಕ ಪ್ರಮಾದ ಇವುಗಳಿಗಿಂತ ವೃದ್ಧಾಪ್ಯದೊಳಗಿನ ಪ್ರೋಕ್ತ ವಿಚಾರವೂ ಪುತ್ರವಾತ್ಸಲ್ಯದ ಸಂಪೂರ್ಣ ಕಳಕಳಿಯೂ ಇವುಗಳ ಉಪಯೋಗವು ಜನ್ಮದ ಗಂಟು ಹಾಕುವ ಕೆಲಸದಲ್ಲಿ ಹೆಚ್ಚಾಗುವವೆಂಬುದನ್ನು ಯಾರೂ ಅಲ್ಲಗಳೆಯಲಾರರು. ಅಂತೆಯೇ 'ನನ್ನ ಗೃಹಿಣಿ'ಯ ಆಯ್ಕೆಯನ್ನು ನನ್ನ ತಾಯಿ-ತಂದೆಗಳು ಮಾಡಿದುದು ಒಳ್ಳೇದಾಯಿತೆಂದು ನನಗೆ ಈಗಲೂ ಅನಿಸುತ್ತದೆ. ಆಜನ್ಮದ ಒಳಿತು-ಕೇಡು ಪ್ರಸಂಗಗಳಲ್ಲಿ ಸುಖ-ದುಃಖಗಳ ನಿಜವಾದ ಭಾಗಿದಾರಳನ್ನು ಆರಿಸುವ ಪ್ರಸಂಗವು ಬಹು ದೊಡ್ಡ ಜಬಾಬುದಾರಿಯ ಹಾಗು ಯೋಚನೆಯ ವಿಷಯವೆಂಬ ಮಾತು ನಿಜವು ಮಾನವನ ಬುದ್ಧಿವಂತಿಕೆಗಿಂತ ನಿಯಮಾನಿಯಮಗಳ ಈಶ್ವರೀ ಸೂತ್ರವೇ ಇಂಥ ಪ್ರಸಂಗದಲ್ಲಿ ಹೆಚ್ಚು ಮಹತ್ವದ್ದೂ ಕಾರ್ಯಕ್ಷಮವಾದದ್ದೂ ಇರುತ್ತದೆಂದು ನನಗನಿಸುತ್ತದೆ. ಮನುಷ್ಯ ಪ್ರಾಣಿಯು ಕೇವಲ ಪ್ರಸಂಗಾನುರೋಧದಿಂದ ಸಿದ್ಧವಾಗತಕ್ಕ ಜೀನಸು; ಮತ್ತು ಅತನ ಸ್ವಭಾವದ ಆವಿಷ್ಕರಣವಾದರೂ ಪ್ರಸಂಗದಲ್ಲಿಯೇ ಆಗುತ್ತಿರುತ್ತದೆ. ಮನಷ್ಯನ ಸ್ವಭಾವ, ಗುಣ, ಮನೋಧರ್ಮ

ಗಳನ್ನು ಪರೀಕ್ಷಿಸಿ ತಿಳಿಯುವುದು ಸುಲಭ ಕಾರ್ಯವಾಗಿಲ್ಲ; ಮತ್ತು ಆ ಜ್ಞಾನವು ಕಾಲಗತಿಯಿಂದಲೂ ಶಕ್ಯವಾಗಲಾರದು. ಈ ಸೃಷ್ಟಿಯೊಳಗಿನ ಪಲವು ವಸ್ತು ಗಳೂ ಪ್ರಸಂಗಗಳೂ ಕೇವಲ ಕಲ್ಪನಾತೀತಗಳಾಗಿರುತ್ತವೆ. ಈಶ್ವರನ ಕೌತುಕದ ಜ್ಞಾನವು ನಮ್ಮ ಮಾನವರಿಗೆ ಮುಂಗಡವಾಗಿ ಆಗುತ್ತಿರುವದಿಲ್ಲ; ಅಥವಾ ಆ ಜಗನ್ನಿ ಯಾಮಕನ ಇಚ್ಛೆಯ ಸೂಚನೆಯು ಈ ಮನುಷ್ಯ ಪ್ರಾಣಿಗೆ ಮುಂಗಡವಾಗಿ ಎಂದಿಗೂ ಆಗುವದಿಲ್ಲ. ಇದರಂತೆಯೇ ವಿವಾಹಸಂಬಂಧದೊಳಗಿನ ಸುಖ-ದುಃಖ ಗಳ ಗಣಿತವು ಮಾನವೀ ದಕ್ಷತೆಗೆ ಮೀರಿದ್ದೆಂದು ನನಗಂತೂ ಅನಿಸುತ್ತಿರುತ್ತದೆ.

ಪತಿ-ಪತ್ನಿಯರ ಸಂಬಂಧವು ಕಲ್ಯಾಣದಾಯಕವೂ ಸುಖಪ್ರದವೂ ಆಗಬೇ-ಕೆಂಬ ಇಚ್ಛೆ ಹಾಗು ತದನುರೂಪ ದಕ್ಷತೆ ಇವುಗಳನ್ನು ನಾವೆಲ್ಲರೂ ವಹಿಸುತ್ತಿರುವು ದೇನೋ ನಿಜ; ಆದರೆ ಹಾಗೆ ಆಗಗೊಡುವದೂ ಆಗುವುದೂ ಮಾತ್ರ ನಮ್ಮ ಮಾನ ವರ ಸ್ವಾಧೀನದ ಮಾತಾಗಿಲ್ಲ. ಆದರೂ ನನ್ನ ತಂದೆ-ತಾಯಿಗಳು ನನಗೆ ತೆಗೆದ ಹಾಗು ಅವಳೊಡನೆ ನನ್ನ ಲಗ್ನ ಮಾಡಿದ ಕನ್ಯೆಯು ನನಗನುರೂಪಳಾಗಿಯೇ ದೊರೆತಳು; ಮತ್ತು ಅವಳ ಸಂಬಂಧವು ನನಗೆ ಸದಾ ಸುಖಪ್ರದವೇ ಆಯಿತು. ಅದರಿಂದ ನನ್ನ ಅಜ್ಞಾನದೆಸೆಯಲ್ಲಿ ಹಾಗು ನನ್ನ ಇಚ್ಛೆ-ನಿರಿಚ್ಛೆಗಳ ಕಡೆಗೆ ಎಳ್ಳಷ್ಟಾ ದರೂ ಲಕ್ಷ್ಯಗೊಡದೆ ಆಜೀವ ಸಂಗಡಿಗಳೆಂದು ನನ್ನ ಯಜಮಾನರು ನನಗೆ ಆರಿಸಿ ಕೊಟ್ಟ ನನ್ನ ಗೃಹಿಣಿಯ ಬಗ್ಗೆ ತಕರಾರು ಮಾಡಲಿಕ್ಕೆ ಅಥವಾ ನನ್ನ ತಂದೆ-ತಾಯಿ ಗಳ ಆಯ್ಕೆಗೆ ಹೆಸರಿಡಲಿಕ್ಕೆ ನನಗೆ ಅನುವೇ ದೊರೆಯಲಿಲ್ಲ.

ನನ್ನ ಗೃಹಿಣಿಯ ರೂಪ, ನನ್ನವಳ ಬುದ್ಧಿವಂತಿಕೆ ಹಾಗು ಅವಳ ಬೇರೆ ಸದ್ಗುಣ ಇತ್ಯಾದಿಗಳ ವಿಷಯದಲ್ಲಿ ಹೆರವರ ಮತವನ್ನು ತಿಳಿಯುವದು ನನಗನವಶ್ಯ ಕವು; ಯಾಕಂದರೆ ನಾನು ಅವೆಲ್ಲವುಗಳ ಬಗ್ಗೆ ಯಾವಾಗಲೂ ಸಂತುಷ್ಟನೇ ಆಗಿ ದ್ದೇನೆ. ಎರಡೂ ಹೊತ್ತಿನ ಕೇವಲ ಸಾದಾ ಆದರೆ ಸುಮಿಷ್ಟ ಮತ್ತು ಸ್ವಚ್ಛವಾದ ಅಡುಗೆ, ಮಕ್ಕಳು-ಮರಿಗಳ ಪಾಲನ-ಪೋಷಣ, ಬರ-ಹೋಗುವ ಅತಿಥಿ-ಅಭ್ಯಾ ಗತರ ವ್ಯವಸ್ಥಿತವಾದ ಆದರ-ಸತ್ಕಾರ, ಬಡತನದ ಬಾಳುವೆಯೊಳಗಿನ ಅಚ್ಚುಕಟ್ಟಿನ ಮಿತವ್ಯಯ, ನೆರೆಹೊರೆಯವರ ವೈಭವವನ್ನು ಕಂಡು ಅದರಂತೆ ತಾನೂ ಆಗ ಬೇಕೆಂಬ ಇಲ್ಲವೆ ಇರಬೇಕೆಂಬ ಹುಚ್ಚು ವಿಚಾರದ ಹಾಗು ತ್ರಾಸದಾಯಕ ತಿಳುವಳಿಕೆಯ ಅಭಾವ ಇತ್ಯಾದಿಗಳಿಂದ ನನ್ನ ಗೃಹಿಣಿಯ ವಿಷಯದ ನನ್ನ ಪ್ರೇಮವು ದಿನಮೇಕ ರೀತಿಯಿಂದ ವೃದ್ಧಿಂಗತವೇ ಆಗುತ್ತಿದೆ. ಜನ್ಮದ ಗಂಟೇ ಬಿದ್ದಿದ್ದೆ; ಅಂದಮೇಲೆ ಅವಳ ಸ್ವಭಾವದೊಳಗಿನ ಒಂದೆರಡು ನ್ಯೂನಾತಿರೇಕಗಳನ್ನು ಕಣ್ಣುಮುಚ್ಚಿಕೊಂಡು ಸಹಿಸಲೇ ಬೇಕಲ್ಲವೆ? ಈ ವಿಷಯದ ವಿಚಾರವು ಹಾಗು ಬೇರೆ ಯವರ ಕುಟುಂಬದೊಳಗಿನ ಗೃಹಿಣಿಯರನ್ನು ನನ್ನ ಗೃಹಿಣಿಯೊಡನೆ ನಾನು ನನ್ನ ಮನಸ್ಸಿನಲ್ಲಿಯೇ ಒರೆ ಹಚ್ಚುವದು ಮುಂತಾದವುಗಳ ಬಗ್ಗೆ ಸಮಾಲೋಚಿಸಿದರೆ, ನನ್ನ ಗೃಹಿಣಿಯು ನನಗೆ ಬಹು ಚೆನ್ನಾಗಿ ತೋರುವಳು. ಅವಳಲ್ಲಿ ಯಾವ ಸದ್ಗುಣ

ಗಳಿರುವವೆಂಬುದನ್ನು ನಾನು ಚೆನ್ನಾಗಿ ನಿರೀಕ್ಷಿಸಿ ಅವುಗಳ ಬಗ್ಗೆ ಕೌತುಕ ಪಡುವೆನು. ಅವಳಲ್ಲಿ ಇಂಥ ಗುಣಗಳಿವೆ-ಇಂಥ ಗುಣಗಳಿಲ್ಲ, ಎಂಬ ಬಗ್ಗೆ ನಾನು ಎಂದೂ ಹೆಚ್ಚಾಗಿ ಆಲೋಚಿಸಿರುವದಿಲ್ಲ. ಆಕೆಯ ನೈಸರ್ಗಿಕ ಸದ್ಗುಣದ ಕಡೆಗೇ ನನ್ನ ಲಕ್ಷ್ಯವು ವಿಶೇಷವಾಗಿರುವದು. ಅವಳಲ್ಲಿಲ್ಲದ ಗುಣಗಳ ಬಗ್ಗೆ ಖೇದಪಡುತ್ತ ನಾನೆಂದೂ ಕುಳಿತಿರುವದಿಲ್ಲ; ಆದರೆ ಆ ಸದ್ಗುಣಗಳು ಅವಳಲ್ಲಿ ಹೇಗೆ ನೆಲೆಗೊಂಡಾವೆಂಬ ಬಗ್ಗೆ ಮಾತ್ರ ಯೋಚಿಸಿ, ನಾನು ಆ ಪ್ರಯತ್ನಕ್ಕೆ ಹತ್ತುತ್ತಿದ್ದೆನು. ಆ ಸದ್ಗುಣಗಳು ಇಂಥಿಂಥವರಲ್ಲಿ ಹೀಗೆ ಹೀಗೆ ನೆಲೆಗೊಂಡಿರುತ್ತವೆ; ಅವರಿಂದ ಇಂಥಿಂಥ ಕೆಲಸಗಳಾಗುತ್ತವ, ಎಂದು ನಾನು ಸೌಮ್ಯ ರೀತಿಯಿಂದ ನಾವೀರ್ವರೂ ಸಂತೋಷದಿಂದಿರುವಾಗ ಅನ್ನಬೇಕು; ಅದರಿಂದ ಆ ಸದ್ಗುಣಗಳು ತನ್ನಲ್ಲಿರುತ್ತವೆಂಬುದನ್ನು ತೋರಿಸುವ ಸ್ಫೂರ್ತಿಯು ಅವಳಿಗೆ ಸಹಜವಾಗಿ ಉಂಟಾಗಿ, ಅವುಗಳನ್ನು ತೋರ್ಪಡಿಸುವ ಪ್ರಯತ್ನಗಳಿಂದ ಆ ಸದ್ಗುಣಗಳೆಲ್ಲ ಅವಳಲ್ಲಿ ಚೆನ್ನಾಗಿ ನೆಲೆಗೊಂಡು ಬಿಡಬೇಕು!

ಇನ್ನು ಒಮ್ಮೊಮ್ಮೆ ದುರಾಗ್ರಹದ ಮೂಲಕ ಅವಳು ನಮ್ಮ ಒಡತನದ ಬಗ್ಗೆ ಸ್ವಲ್ಪವೂ ಆಲೋಚಿಸದೆ, ಯಾವುದೊಂದು ಛಲವನ್ನು ಹಿಡಿಯುತ್ತಿದ್ದಳು; ಆದರೆ ನಾನು ಆಗ ಅತ್ತಕಡೆಗೆ ಹೆಚ್ಚು ಲಕ್ಷ್ಯಗೊಡುತ್ತಿರಲಿಲ್ಲ ಅವಳಲ್ಲಯ ಇತರ ಸದ್ಗುಣಗಳ ಕಡೆಗೆ ನೋಡಿದರೆ ಇಲ್ಲವೆ ಹೇಳಿ ಕೇಳಿ ಹೆಣ್ಣು ಜಾತಿಯೇ ಅದು, ಎಂಬ ವಿಚಾರವು ಮನಸ್ಸಿನಲ್ಲಿ ಬಂದಿತೆಂದರೆ, ಅವಳಲ್ಲಿಯ ಅಜ್ಞಾನಮೂಲಕವಾದ ಯಾವುದೊಂದು ಶುಷ್ಕ ಛಲದ ಬಗ್ಗೆ ನನಗೆ ಕೊಂಚವೂ ಸೆಡಕೆನಿಸುತ್ತಿರಲಿಲ್ಲ. ನಮ್ಮಾಕೆಯ ಆ ಸುಪ್ರಸನ್ನವಾದ ಮುಖಮುದ್ರೆ, ಆ ಗೃಹದಾಕ್ಷಿಣ್ಯ, ಆ ಸರ್ವಸಾಧಾರಣವಾದ ಸುಜನತ್ವ ಇವುಗಳೆಲ್ಲ ನನ್ನ ಸುಖಪ್ರಪಂಚದ ಮುಖ್ಯ ಸಾಧನಗಳೆಂದು ನನ್ನ ಸಂಪೂರ್ಣ ಖಾತ್ರಿಯಾಗಿಬಿಟ್ಟಿದೆ. ಒಟ್ಟಿನ ಮೇಲೆ ನನ್ನ ಗೃಹಿಣಿಯ ವಿಷಯವಾಗಿ ನನ್ನ ಮನಸ್ಸಿನಲ್ಲಿ ಪೂಜ್ಯಭಾವ, ನಿಜವಾದ ಪ್ರೇಮ ಹಾಗೂ ಸದಭಿಮಾನಗಳು ಸಂಪೂರ್ಣವಾಗಿ ನೆಲೆಗೊಂಡಿರುತ್ತವೆ; ಅಲ್ಲದೆ ಸರ್ವಸಾಧಾರಣ ನಿಯಮಕ್ಕನುಗುಣವಾಗಿ ನಮ್ಮ ದಂಪತಿಗಳಲ್ಲಿಯ ಪ್ರೇಮವು ವಯೋಮಾನದಿಂದ ದಿನದಿನಕ್ಕೆ ಹೆಚ್ಚುತ್ತಿದೆಯೇ ಹೊರತು, ಯಾವ ಕಾರಣದಿಂದಲೂ ಕಡಿಮೆಯಾಗಿರುವದಿಲ್ಲ

ನಮ್ಮೀರ್ವರಲ್ಲಿ ಯಾವುದೊಂದು ವಾದವುಂಟಾಗಿ ಅದು ವಿಕೋಪಕ್ಕೆ ಹೋಗಬೇಕು; ಹಾಗು ಅದರಿಂದ ಕುಟುಂಬದಲ್ಲಿ ಅಲ್ಪ ಕಾಲದ ವರೆಗಾದರೂ ಚಿಂತೆ, ಕ್ಲೇಶ, ಖೇದ ಇಲ್ಲವೆ ಬೇಜಾರಗಳುಂಟಾಗಿ ಎಲ್ಲರಿಗೂ ತೊಂದರೆಯಾಗಬೇಕು, ಇಂಥ ಪ್ರಸಂಗಗಳು ಇತ್ತೀಚೆಗೆ ಉಂಟಾದದ್ದು ನನ್ನ ನೆನಪಿನಲ್ಲಿ ಕೂಡ ಇರುವದಿಲ್ಲ. ನಮ್ಮ ಹೆಂಗಸರಲ್ಲಿ ವಸ್ತ್ರ-ಒಡವೆಗಳ ಹುಚ್ಚುತನವು ಅತಿಶಯವಾದರೆ ಅವರು ಅಸಂತುಷ್ಟತೆಯಿಂದ ಸದಾ ಚಡಪಡಿಸುತ್ತ, ತಮ್ಮೊಡನೆ ಬೇರೆಯವರ ಆನಂದವನ್ನೂ ನಿರ್ನಾಮಗೊಳಿಸುವ ರೀತಿಯು ಉಂಟಾಗುತ್ತಿರುತ್ತದೆ; ಆದರೆ ನನ್ನ ಗೃಹಿಣಿ ಸ್ಥಿತಿಯು ಹಾಗಿರಲಿಲ್ಲವಾದ್ದರಿಂದ ನಾನು ಬಹು ದೊಡ್ಡ ಭಾಗ್ಯವಂತನೆಂದೇ ಹೇಳ

ಬೇಕಾಗುವದು. ತುಂಗಭದ್ರಾತೀರದ ಪವಿತ್ರವಾದ ವಾಸಸ್ಥಳವು, ಸಂಪೂರ್ಣ ಸ್ವಾತಂತ್ರ್ಯತೆ, ಚಿಕ್ಕದಾದರೂ ಸುರಮ್ಯವಾದ ಮನೆ, ಕಾಯಿ-ಪಲ್ಯೆಗಳ ಹಾಗು ಹೂ-ತುಳಸಿಗಳ ಬೆಳವಣಿಗೆಗೆ ತಕ್ಕವಾದ ಚಿಕ್ಕ ಹಿತ್ತಲ-ಮುಂಚೆಗಳು, ಹೆಚ್ಚಾಗಿ ಶ್ರಮಪಡದೆ ಮನೆಯಲ್ಲಿಯೇ ಕುಳಿತು ನಡೆದಿರುವ ಅಯಾಚಿತವಾದ ದ್ರವ್ಯಾರ್ಜನೆ, ಆಟಗುಳಿಗಳೂ, ಸಶಕ್ತರೂ ಆದ ಚಿಕ್ಕಮಕ್ಕಳ ತರತರದ ಲೀಲೆಗಳು ಹಾಗು ನನ್ನ ಗೃಹಿಣಿಯ ಮೇಲಿನ ನನ್ನ ಸ್ನೇಹವು ಮತ್ತು ಏಕನಿಷ್ಠವಾದ ಪ್ರೇಮ ಇವುಗಳ ಮೂಲಕ ನನ್ನವಳಿಗೆ ಒಳ್ಳೇ ಸಂತೋಷವೆನಿಸುತ್ತಿತ್ತು; ಮತ್ತು ಆಕೆಯು ಸದಾ ಆನಂದಿತವಾದ ಮುಖಮುದ್ರೆಯ ಮೇಲಿಂದ ಈಗಿದ್ದ ಸೌಖ್ಯವು ತನಗೆ ಕೊನೆಯವರೆಗೂ ಇರಬೇಕೆಂಬಂತೆ ತೋರುತ್ತಿತ್ತು.

ಇಳಿಹೊತ್ತಿನಲ್ಲಿ ಹಾಳುಹರಟೆಯ ಕೊಚ್ಚುವ ನೆವದಿಂದಲೂ ನನ್ನ ಬಳಿಯ ಉತ್ತಮವಾದ ನಸ್ಯದ ಒಂದೆರಡು ಚಿಮುಟಿಗೆಗಳೇನಾದರೂ ದೊರೆಯುವವೇನೆಂಬ ಆಶೆಯಿಂದಲೂ ನಮ್ಮೂರೊಳಗಿನ ಕೆಲಜನ ಗೊಡ್ಡು ವೈದಿಕರು ನನ್ನ ಬಳಿಗೆ ದಿನಾಲು ಬರುತ್ತಿದ್ದರು; ಮತ್ತು ಅವರೊಡನೆ ಹರಟೆ ಹೊಡೆಯುವದರೊಳಗೆ ಸಹಜವಾಗಿ ಸಂಜೆಯಾಗಿ ಹೋಗುತ್ತಿತ್ತು; ಆದರೆ ಆ ಹಾಳು ಹರಟೆಗಳ ಇಲ್ಲವೆ ಪರಾನ್ನಪುಷ್ಟತೆಯಿಂದ ಹೊಟ್ಟೆಬೆಳೆದು ಅಕರಾಳ-ವಿಕರಾಳರಾಗಿ ತೋರುವ ಆ ಬ್ರಾಹ್ಮಣರ ಬಗ್ಗೆ ಅವಳಿಗೆ ಎಂದೂ ಬೇಸರವುಂಟಾಗುತ್ತಿರಲಿಲ್ಲ; ಇಷ್ಟೇ ಅಲ್ಲ, ನಮ್ಮ-ನಮ್ಮೊಳಗೆ ನಡೆವ ಆ ಹಾಳು ಹರಟೆಗಳ ವಿಷಯವಾಗಿ ಅವಳಿಗೊಂದು ಬಗೆಯ ಕೌತುಕವೇ ಅನಿಸುತ್ತಿತ್ತು. ವ್ಯಂಜನ ಪದಾರ್ಥಗಳನ್ನು ಮನಸೋಕ್ತ ತಿಂದದ್ದರಿಂದ ಇಲ್ಲವೆ ಜಪಾನ್ನವನ್ನು ಮಿತಿಮೀರಿ ಸೇವಿಸಿದ್ದರಿಂದ ಆ ಹಾರುವರಿಗೆ ನೀರಡಿಕೆಯಾಗಲು, ಅವರು ತಮ್ಮ ಟೊಂಕಕ್ಕೆ ಬಿಗಿದ ಪಂಚೆಗಳನ್ನು ಸಡಿಲಿಸಿ ತಮ್ಮ ಹೊಟ್ಟೆಗಳನ್ನು ಅತ್ತಿತ್ತ ಉಲುಕಾಡಿಸಹತ್ತುವರು. ಆಗ ನನ್ನ ಗೃಹಿಣಿಯು ನಮ್ಮ ಚಿಕ್ಕ ಹುಡುಗಿಗೆ ಪರಕಾರವನ್ನುಡಿಸಿ ಚೆನ್ನಾಗಿ ಮೋರೆ-ಮೂಗುಗಳನ್ನೊರಿಸಿ ಅವಳ ಕೈಯಲ್ಲಿ ಸ್ವಚ್ಛ ನೀರಿನಿಂದ ತುಂಬಿದ ಝಳಝಳವಾದ ತಂಬಿಗೆ-ಥಾಲಿಗಳನ್ನು ಕೊಟ್ಟು ತಾನೂ ಅವಳ ಜೊತೆಗೆ ಕೆಲ ಹೆಜ್ಜೆ ನಡೆದು ಬಂದು, "ಹೋಗು; ಆಗೋ, ಅಲ್ಲಿ ಒಯ್ದು ಇಡು"ಎಂದು ಹೇಳಿ, ಆ ಹುಡುಗಿಯನ್ನು ನಮ್ಮ ಪಡಸಾಲೆಯ ಮೇಲೆ ಕಳುಹಿಸುತ್ತಿದ್ದಳು; ಹಾಗು ಇನ್ನು ತನ್ನ ಹುಡುಗಿಯ ಸ್ವರೂಪದ ಬಗ್ಗೆ ಅಥವಾ ಬುದ್ಧಿವಂತಿಕೆಯ ಬಗ್ಗೆ ಕೂಡಿದವರಲ್ಲಾರಾದರೂ ಮನಸೋಕ್ತ ವಾಹವ್ವಾ! ಎಂದೆನ್ನುವದನ್ನು ಕೇಳಿ ಸಂತೋಷಪಟ್ಟು ಧನ್ಯಳಾಗಬೇಕೆಂದು ಅವಳು ನಡಮನೆಯ ಬಾಗಿಲ ಮರೆಗೇ ನಿಂತುಕೊಳ್ಳುತ್ತಿದ್ದಳು; ಆದರೆ ಬಂದವರಲ್ಲಿ ಅಂತಹ ಜಾಣಾಕ್ಷರಿರದಿದ್ದರೆ, ಆ ನೀರು ತಂದಿಟ್ಟ ಬಾಲಿಕೆಯ ವಿಷಯವಾಗಿ ಯಾರೂ ಏನೊಂದೂ ಪ್ರಶಂಶಾಪರ ಉದ್ಗಾರಗಳನ್ನು ಹೊರಹೊರಡಿಸುತ್ತಿರಲಿಲ್ಲ; ಅಥವಾ ಯಾವನೊಬ್ಬನು ಅಂದರೆ, "ಏನರೀ ಗುರುಭಟ್ಟರೇ, ಈ ಗಿರಿಯ ಮಾಟದ ತಂಬಿಗೆಯನ್ನೆಲ್ಲಿಂದ ತಂದಿರಿ? ಇದರ ಮಾಟವು ಬಹು ಸುಂದರ

ವಾಗಿದೆ. ಇದಕ್ಕೆ ಏನಿಲ್ಲೆಂದರೂ ಎರಡು ರೂಪಾಯಿ ಬಿದ್ದಿರಬಹುದು. ನಾನೂ ಇಂಥ ದೊಂದು ಕೊಂಡುಕೊಳ್ಳಬೇಕೆಂದಿರುವೆನು" ಎಂದೆನ್ನಬೇಕು; ಇಲ್ಲವೆ "ಇಂದು ನೀರು ಎಷ್ಟು ಸಿಹಿಯಾಗಿವೆಯಲ್ಲ! ಅದಕ್ಕೆ 'ತುಂಗಾಪಾನಂ ಗಂಗಾಸ್ನಾನಂ' ಎಂಬ ನಾಣ್ಣುಡಿಯುಂಟಾಗಿರಬಹುದಾಗಿದೆ" ಹೀಗೆನ್ನಬೇಕು. ಇದರಿಂದ ನನ್ನವಳು ವ್ಯರ್ಥ ಮನೋರಥಳಾಗದೇನು ಮಾಡಿಯಾಳು? ಆದರೆ ಅವಕ್ಕೆ ನಾನಾದರೂ ಏನು ಮಾಡಲಿ? ಆದರೂ ಆ ನನ್ನ ಸ್ನೇಹಿತರ ಆಗಮನದಿಂದ ಅವಳಿಗೆಂದೂ ತಿರಸ್ಕಾರವುಂಟಾಗಲಿಲ್ಲ. ಇದರ ಮೇಲಿಂದ ನನ್ನ ಮಿತ್ರರ ವಿಷಯವಾಗಿ ಅಂದರೆ, ಅರ್ಥಾತ್ ನನ್ನ ವಿಷಯವಾಗಿ ಅವಳಲ್ಲಿ ಎಷ್ಟು ಪೂಜ್ಯಭಾವವಿರುವದೆಂಬದು ಚೆನ್ನಾಗಿ ವ್ಯಕ್ತವಾಗುತ್ತದೆ

ನನ್ನ ವಾಸಸ್ಥಳವು ತುಂಗಾತೀರದೊಳಗಿನ ಸರ್ಪಪುರಿಯು. ಒಳ್ಳೇ ರಮ್ಯವಾದ ಹಾಗು ರಹದಾರಿಯ ಸ್ಥಳವು. ಅದರಿಂದ ನಮ್ಮ ಮನೆಗೆ ಅಥಿತಿ-ಅಭ್ಯಾಗತರ, ಆಪ್ತೇಷ್ಟರ, ಬಂಧುಬಳಗದವರ ರಹದಾರಿಯು ಹೆಚ್ಚಾಗಿದ್ದಿತು. ನಾವು ಹುಟ್ಟಾ ವೈದಿಕರು; ಅದರಿಂದ ನಮ್ಮ ಮನೆಗೆ ಬರಹೋಗುವವರಲ್ಲಿ ವೈದಿಕ ಬ್ರಾಹ್ಮಣರೇ ವಿಶೇಷ. ಇನ್ನು ವೈದಿಕ ಅತಿಥಿಗಳೆಂದರೆ ತೀರಿತು! ಅವರ ಜಪ-ಜಾಪ್ಯ, ನೇಮ-ನಿಷ್ಠೆಗಳು ಅಧಿಕ! ಮನೆಯಲ್ಲಿದ್ದವರು ಅವುಗಳನ್ನೆಲ್ಲ ಸಂಬಾಳಿಸಿಕೊಳ್ಳಬೇಕಾಗುತ್ತದೆ. ನಮ್ಮಲ್ಲಿಗೆ ಬಂದ ಅತಿಥಿಗಳಲ್ಲಿ ಎಲ್ಲರೂ ಪರಕೀಯರೇ ಎಂತಲ್ಲ; ಎಷ್ಟೋ ಜನರು ಆಪ್ತರೂ ದಾಯಾದಿಗಳೂ ಆಗಿರುತ್ತಿದ್ದರು. ಅವರು ತಮ್ಮಲ್ಲಿಂದ ಇತ್ತಕಡೆಗೆ ಬಂದರೆಂದರೆ, ನಮ್ಮಲ್ಲಿ ಕನಿಷ್ಟಪಕ್ಷಕ್ಕೆ ಎಂಟು-ಹತ್ತು ದಿನಗಳವರೆಗಾದರೂ ಇದ್ದೇ ಇರುತ್ತಿದ್ದರು. ಅವರು ಬರುವಾಗ ತಮ್ಮ ಜೊತೆಗೆ ಒಂದೆರಡಾದರೂ ದರ್ಶನಿ ಇಲ್ಲವೆ ಮುದ್ದತಿ ಹುಂಡಿಗಳನ್ನು ನಮಗಾಗಿ ತರದೆ ಬರುತ್ತಿದ್ದಿಲ್ಲ. ದಾಯಾದಿ ಅತಿಥಿಯು ನಮ್ಮ ಮನೆಗೆ ಬಂದನೆಂದರೆ ಅವನು ಬಂದ ಕೂಡಲೆ ನಮ್ಮ ಮನೆಯವರನ್ನೆಲ್ಲ ಒತ್ತಟ್ಟಿಗಾಗಿರೆಂದು ಹೇಳಿ, ಬಳಿಕ:-"ಇಂಥವನ ಮೊಮ್ಮಗನ ಮರಿಮಗನು ಅಂಥಿಂಥ ಬೇನೆಯಿಂದ ೪-೬ ತಿಂಗಳುಗಳ ಮುಂಚೆ ಸತ್ತನು; ನಿಮಗೆ 'ಸ್ನಾನಾತ್ ಶುದ್ಧಿಃ|" ಎಂದು ಹೇಳಿಬಿಡುವನು.

ಇಂಥ ದರ್ಶನಿ ಹುಂಡಿಯು ಹೊರತು ಮುದ್ದತಿ ಹುಂಡಿಗಳು ಅತಿಥಿಗಳ ಮುಖಾಂತರ ನಮಗೆ ಬರುವದೇ ವಿರಲ; ಯಾಕಂದರೆ, ಅವರು ಅಂಥ ಹುಂಡಿಗಳನ್ನು ಪಟಾಯಿಸುವುದರಿಂದ ನಮಗಿಂತ ಅವರಿಗೇ ತೊಂದರೆ ಹೆಚ್ಚಾಗುತ್ತಿತ್ತು. ಮೊಟ್ಟಮೊದಲು ಅವರಿಗೆ ಅಶನವೇ ವರ್ಜ್ಯವಾಗುತ್ತಿತ್ತಲ್ಲದೆ, ನಮ್ಮೆಲ್ಲರಿಗೆ ಕೂಳು ಕುಚ್ಚಿ ಹಾಕುವ ಪ್ರಸಂಗವಾದರೂ ಒಮ್ಮೊಮ್ಮೆ ಅವರ ಮೇಲೆಯೇ ಬೀಳುತ್ತಿತ್ತು. ಆದುದರಿಂದ ನಮಗೆ ಬರುವ ಹುಂಡಿಗಳೆಲ್ಲ ಬಹುಶಃ ದರ್ಶನಿ ಹುಂಡಿಗಳೇ ಆಗಿರುತ್ತಿದ್ದವು; ಆದರೆ ಆ ಪ್ರತಿಯೊಂದು ಪ್ರಸಂಗದಲ್ಲಿ ಪಂಚಗವ್ಯ ತಕ್ಕೊಂಡು ಹೊಸ ಜನಿವಾರ ಹಾಕಿಕೊಳ್ಳಬೇಕಾಗುತ್ತಿತ್ತಾದ್ದರಿಂದ, ಮನೆಯೊಳಗಿನ ಹುಡುಗರೆಲ್ಲ ಬೇಜಾರಪಡುತ್ತಿದ್ದರು. ಇನ್ನು ಬೇರೆ ವರ್ಗದ ಅತಿಥಿಗಳ ತರ

ಹವೇ ಬೇರೆ. ಅವರಲ್ಲಿಯ ಒಬ್ಬರ ಪಾರ್ಥಿವ ಪೂಜೆಗೆ ೪-೫ ತಾಸು ಹಿಡಿದರೆ, ಬೇರೊಬ್ಬರ ಅಥರ್ವಶೀರ್ಷ ಗಣಪತಿ ಪೂಜೆಗಳಿಗೆ ೬-೭ ತಾಸು ಹಿಡಿಯುತ್ತಿತ್ತು. ಅದರಂತೆ ಕೆಲವರು ದೀರ್ಘಾವರ್ತನೆ ಮಾಡುವವರೂ, ಕೆಲವರು ಮೂರು ಪ್ರಹರಗಟ್ಲೆ ಮುಸುಕು ಹಾಕಿಕೊಂಡು ಜಪಮಾಡುವವರೂ ಇರುತ್ತಿದ್ದರು. ಅವರೆಲ್ಲರ ಆಹ್ನಿಕಗಳು ಯಥಾಪ್ರಕಾರ ಪೂರೈಸಿ, ಮಧ್ಯಾಹ್ನದ ಊಟವಾಗಬೇಕೆಂದರೆ ಮನೆಯೊಳಗಿನ ಹುಡುಗರು-ಹುಪ್ಪಡಿಗಳ ಜೀವವು ನೆತ್ತಿಗೆ ಏರುತ್ತಿತ್ತು. ಹೊಟ್ಟೆ ಹಸಿವಿನಿಂದ ಆ ಹುಡುಗರು ತಮ್ಮ ತಾಯಿಯನ್ನು ಸಾಕುಸಾಕು ಮಾಡಿಬಿಡುತ್ತಿದ್ದವು. 'ಅವ್ವಾ ಹಸಿವು-ಅವ್ವಾ ಹಸಿವು' ಎಂದು ಅವು ಅವಳನ್ನು ಕಾಡಹತ್ತಲು, ಅವಳು — ಈಗ ಬಡಸುವೆನು; ಇನ್ನೊಂದು ಕ್ಷಣಕ್ಕೆ ಬಡಿಸುವೆನು, ಎಂದು ಈಗಿನ ನ್ಯಾಯಾಸನಗಳಂತೆ ಅವಧಿಯ ಮೇಲೆ ಅವಧಿಯನ್ನು ಹೇಳುತ್ತಿದ್ದಳೇ ಹೊರತು, ಆ ಅತಿಥಿ-ಅಭ್ಯಾಗತರ ಆಹ್ನಿಕಗಳ ವಿಷಯದಲ್ಲಿ ಬೇಸರದ ಇಲ್ಲವೆ ತಿರಸ್ಕಾರದ ಚಕಾರ ಶಬ್ದವನ್ನೂ ಹೊರ ಹೊರಡಿಸುತ್ತಿರಲಿಲ್ಲ. ಒಮ್ಮೊಮ್ಮೆ ನಾನು ಕೂಡ ಆ ಲಂಬೋದರರ ಆಹ್ನಿಕಕ್ಕೆ ಬೇಸತ್ತು ಏನಾದರೂ ಅನ್ನಹತ್ತಿದರೆ, ನನ್ನ ಗೃಹಿಣಿಯು ಆ ಅತಿಥಿಗಳ ಪಕ್ಷವಹಿಸಿ ನನ್ನೊಡನೆ ಜಗಳಾಡುತ್ತಿದ್ದಳು ಸಹ. ಹೀಗೆ ಅವಳು ಹೇಳಿಕೊಳ್ಳುವಂತಹ ಸುಜನಳಾಗಿರುವಳು. "ನಮ್ಮ ಗುರ್ತು-ಪರಿಚಯದ, ಬಂಧು-ಬಳಗದ ಜನರೆಂದು ನಮ್ಮಲ್ಲಿಗೆ ಬರುತ್ತಾರೆ; ಇಲ್ಲದಿದ್ದರೆ ಆದಾರು ನಮ್ಮ ಮನೆಯ ಕಡೆಗೆ ಹಣಿಕಿ ಹಾಕಬೇಕಾಗಿದೆ?" ಎಂದು ನಾನು ಅವರ ವಿಷಯವಾಗಿ ಸಿಟ್ಟಿಗೆದ್ದ ವೇಳೆಯಲ್ಲಿ ಹೇಳಿ, ಅವಳು ನನ್ನನ್ನು ಹಾದಿಗೆ ತರುತ್ತಿದ್ದಳು.

ನಮ್ಮ ಮನೆಗೆ ಬರ-ಹೋಗುವ ಅತಿಥಿ-ಅಭ್ಯಾಗತರೆಲ್ಲ ಸುಸಂಪನ್ನರೂ ಗಟ್ಟಿಮುಟ್ಟೆ ಶರೀರದವರೂ ಆಗಿರುತ್ತಿದ್ದರೆನ್ನಬೇಕೇ? ಹಾಗೆಯೂ ಇಲ್ಲ. ತಾವು ಸುಸ್ಥಿತಿಯಲ್ಲಿದ್ದರೆ ಅವರಿಗೆ ನಮ್ಮ ನೆನಸಾಗುತ್ತಿದ್ದಿಲ್ಲ; ಅವರು ನಮ್ಮ ಮನೆಯ ವರೆಗೆ ಬರುತ್ತಿದ್ದಿಲ್ಲ. ಒಬ್ಬನಿಗೆ ರುಮಾಲವಿದ್ದರೆ ಇನ್ನೊಬ್ಬನಿಗೆ ಕಾಲ್ಮರಿಯಿರಲಿಕ್ಕಿಲ್ಲ; ತಂಬಿಗೆ ಇದ್ದರೆ ಥಾಲಿ ಇರದು; ಉಡಲಿಕ್ಕೆ ಇದ್ದರೆ ಹೊರಲಿಕ್ಕೆ ಇರದು. ಇಂಥವರೇ ನಮ್ಮಲ್ಲಿಗೆ ಬರುವವರು; ಇಲ್ಲವೆ ಆಮ್ಲಪಿತ್ತದಿಂದ ತ್ರಸ್ತರಾದವರೂ, ಸಂಗ್ರಹಿಣಿ ರೋಗದಿಂದ ಂಕಗೆಟ್ಟವರೂ, ಕ್ಷಯದಿಂದ ಕ್ಷೀಣರಾದವರೂ ಆದ ಅತಿಥಿಗಳು ದೂರದೂರದ ಆಪ್ತೇಷ್ಟ ಸಂಬಂಧವನ್ನು ಹರಿದರಿದು ಹಚ್ಚುತ್ತ ನಮ್ಮಲ್ಲಿಗೆ ಬರುತ್ತಿದ್ದರು; ಆದರೆ ಅವರೆಲ್ಲರ ಬಗ್ಗೆಯೂ ನನ್ನ ಗೃಹಿಣಿಯು ಪೂಜ್ಯಭಾವವನ್ನೇ ವ್ಯಕ್ತಪಡಿಸುತ್ತಿದ್ದಳು. ಅವಳು ಆ ವಿಷಯದಲ್ಲಿ:—"ಹೇಗಿದ್ದರೂ ಅವರು ನನ್ನ ಅತ್ತೆಯ ಮನೆಯ ಕಡೆಯವರೇ. ಅಂದಬಳಿಕ ಅವರ ಆದರಸತ್ಕಾರ ಮಾಡುವದು ನಮ್ಮ ದೇವರಿಗೆ ಕೂಡ ತಪ್ಪಿದ್ದಲ್ಲ. ಮನೆಯಲ್ಲಿದ್ದದ್ದರಲ್ಲಿ ಅನ್ನ-ನಾರು ಮಾಡಿ ಹಾಕುವದು ನನ್ನ ಕೆಲಸ. ಆ ವಿಷಯದಲ್ಲಿ ಸುಮ್ಮನೆ ಬೇಸರಿಯಬೇಕೇಕೆ?" ನನ್ನ ಗೃಹಿಣಿಯ ಈ ತಿಳುವಳಿಕೆಯು ನಮ್ಮ ಲೌಕಿಕ ಬೆಳೆಯಲಿಕ್ಕೆ ಹೆಚ್ಚಾಗಿ ಕಾರಣವಾಯಿತೆಂದು ಹೇಳಬೇಕೇನು?

---

## ೨ ಅಪುತ್ರಸ್ಯ ಗತಿರ್ನಾಸ್ತಿ.



ನನಗೆ ಮೊದಲು ಎಷ್ಟೋ ದಿನಗಳ ವರೆಗೆ ಮಕ್ಕಳೇ ಆಗಿರಲಿಲ್ಲ. ಆದರಿಂದ 'ಅಪುತ್ರಸ್ಯ ಗತಿರ್ನಾಸ್ತಿ' ಎಂದು ನಾನು ಕೊರಗ ಹತ್ತಿದೆನು; ಕೆಲದಿನಗಳ ಮೇಲೆ ಈ ರೂಪವತಿ ಹಾಗು ತಿಳುವಳಿಕೆಯುಳ್ಳ ನನ್ನ ಗೃಹಿಣಿಯ ಮೂಲಕ ನನಗೆ ಒಟ್ಟಿಗೆ ನಾಲ್ಕು ಜನ ಮಕ್ಕಳಾದರು. ಎರಡು ಗಂಡು; ಎರಡು ಹೆಣ್ಣು. ಎಲ್ಲಕ್ಕೂ ಹಿರಿಯ ಮಗನ ಹೆಸರು ಶಶಿಶೇಖರ. ಚೊಚ್ಚಲ ಮಗನನ್ನು ತಾಯಿ-ತಂದೆಗಳು ಹೆಸರುಗೊಂಡು ಕರೆಯಬಾರದೆಂದು ನಮ್ಮ ಸಮಾಜದ ಕಟ್ಟಳೆಯೊಂದಿದೆ. ಆ ಪ್ರಕಾರ ನಾನೂ ನನ್ನ ಗೃಹಿಣಿಯೂ ಆ ನನ್ನ ಹಿರಿಯ ಮಗನಿಗೆ 'ಬಾಳು' ಎಂದು ಸಂಬೋಧಿಸುತ್ತಿದ್ದೆವು. ಕೆಲವೊಂದು ಸಂಕುಚಿತ ಮರ್ಯಾದೆಯ ಮೂಲಕ ಮೊದಲಿನ ಒಂದೆರಡು ಹುಡುಗರ ಕೂಡ ತಂದೆಯ ಸಂಘಟನವು ವಿಶೇಷವಾಗಿರುವುದಿಲ್ಲ. ಅದರಂತೆಯೇ ನನ್ನ ಸ್ಥಿತಿಯಾದರೂ ಆಗಿದ್ದಿತು. ಹುಡುಗನಿಗೆ ಎಂಟ ಶಲ್ಲ ಬಿದ್ದಕೂಡಲೆ ಆತನ ವ್ರತಬಂಧ ವಿಧಿಯನ್ನು ಮಾಡಿದೆನು; ಹಾಗು ಬ್ರಾಹ್ಮಣಿಕೆಗೆ ಅತ್ಯವಶ್ಯವಾದ ಪುರುಷಸೂಕ್ತ ಮೊದಲಾದ ವೈದಿಕ ಮಂತ್ರಗಳನ್ನು ಅವನಿಗೆ ನಾನೇ ಖುದ್ದಾಗಿ ಕಲಿಸಿದೆನು. ನನ್ನ ಮನಸ್ಸಿನಲ್ಲಿ ಅವನನ್ನು ವೈದ್ಯನನ್ನಾಗ ಮಾಡಬೇಕೆಂಬ ಅಭಿಲಾಷೆಯು ವಿಶೇಷವಾಗಿತ್ತು; ಯಾಕಂದರೆ, ನಮ್ಮ ಮನೆತನದಲ್ಲಿ ಇದುವರೆಗೆ ವೈದ್ಯರಾರೂ ಆಗಿರಲಿಲ್ಲ; ಅಲ್ಲದೆ ವೈದ್ಯಕ ಪಂಥವು ಒಳ್ಳೇ ಪ್ರತಿಷ್ಠೆಯದಿದ್ದಂತೆ ಬಹು ಲಾಭದಾಯಕವೂ ಆಗಿದೆ. ದೈವಬಲದಿಂದ ಯಾವನೊಬ್ಬ ಗುರುವಿನ ಅನುಗ್ರಹವಾದರಂತೂ ನಮ್ಮೆಲ್ಲರ ಪೂರ್ವಸುಕೃತವು ಫಲಿಸುವದೆಂದು ನನಗೆ ಆಗಾಗ್ಗೆ ಅನಿಸುತ್ತಿತ್ತು. ಇತ್ತೀಚೆಗೆ ನಮ್ಮ ವೈದಿಕರ ತೇಜವು ಬಹು ಕಡಿಮೆಯಾಗಿದೆ. ಎಲ್ಲಿಯೂ ಹೇಳಿಕೊಳ್ಳುವಂತಹ ದಾನವಿಲ್ಲ, ಧರ್ಮವಿಲ್ಲ: ನಮ್ಮ ಸರ್ಪಪುರಿಯಲ್ಲೇ ನಮ್ಮ ವೈದಿಕರ ಉಪಜೀವನವು ಮೊದಲು ಬಹು ಚೆನ್ನಾಗಿ ನಡೆಯುತ್ತಿತ್ತು; ಆದರೆ ಇತ್ತೀಚೆಗೆ ನಮ್ಮನ್ನು ಮಾತಾಡಿಸುವವರೇ ಇಲ್ಲದಾಗಿದೆ. ಆದುದರಿಂದ ಇಂತಹ ಇಳಿಮುಖವಿಟ್ಟ ವೈದಿಕ ಧಂದೆಗಿಂತ ವೈದ್ಯವೃತ್ತಿಯು ಸಾವಿರಪಾಲಿಗೆ ಲೇಸೆಂದು ನನಗನಿಸುತ್ತಿತ್ತು.

ನನ್ನ ಹುಡುಗನ ಲಕ್ಷ್ಯವು ವೈದಿಕ ವಿದ್ಯೆಯ ಕಡೆಗಿರಲಿಲ್ಲ. ಹುಟ್ಟಿದಂದಿನಿಂದ ಆತನ ಹೊಯ್ಲೆಲ್ಲ ಗೃಹಸ್ಥಿಕೆಯ ಕಡೆಗೇ. ಹೇಳಿಸಿಕೊಂಡ ಔತನಕ್ಕೆ ಹೋಗುವದು ಅವನಿಗೆ ಬೇಜಾರು. ಒತ್ತಾಯದಿಂದ ಹೋದರೂ ಲಗಹೊಟ್ಟೆ ಊಟ; ಇಲ್ಲವೆ ದಕ್ಷಿಣೆ ದಾನಗಳನ್ನೇ ಮರೆತು ಬಿಟ್ಟು ಕೈ ಮುಲ್ಲಾಡಿಸುತ್ತ ಮನೆಗೆ ಓಡಿ ಬಂದು ಬಿಡುವನು. ಹೀಗೆ ಆತನಲ್ಲಿ ನಮ್ಮ ವೈದಿಕವೃತ್ತಿಗೆ ಒಗ್ಗದಂತಹ

ಹಲವು ದುರ್ಗುಣಗಳಿದ್ದವು; ಆದರೂ ನಾನು ಮನಸ್ಸಿನಲ್ಲಿ: "ಇನ್ನೂ ಚಿಕ್ಕವನು, ಹೋಗಲಿ. ನಾಳೆ ದೊಡ್ಡವನಾದ ಬಳಿಕ ತನ್ನಷ್ಟಕ್ಕೆ ತಾನೇ ಜಾಣನಾಗುವನು" ಎಂದೆಂದುಕೊಳ್ಳುತ್ತಿದ್ದೆನು; ಆದರೆ ಆ ನನ್ನ ಆಶೆಯು ವ್ಯರ್ಥವಾಯಿತು. ಮೊಟ್ಟ ಮೊದಲು ನಮ್ಮ ಆ ಆನುವಂಶಿಕ ವೈದಿಕವೃತ್ತಿಯೇ ಅವನಿಗೆ ರುಚಿಸದಾಯಿತು. ಊಟದ ಆಮಂತ್ರಣ ಬಂದರೂ ಅವನು ಬರಲಾಗುವದಿಲ್ಲೆಂದು ಹೇಳುತ್ತಿದನು. ಮನೆಯಲ್ಲಿ ತಂಗಳ ರೊಟ್ಟಿಯನ್ನಾದರೂ ತಿಂದಾನು, ಆದರೆ ಹೆರವರಲ್ಲಿಯ ಪಂಚ ಪಕ್ವಾನ್ನದ ಸುಗ್ರಾಸ ಭೋಜನವು ಅವನಿಗೆ ಸೇರದಾಯಿತು. ಬೆಳೆಯುತ್ತ ಆ ನನ್ನ ಮಗನು ಭಟ-ಭಿಕ್ಷುಕರ ನಿಂದೆ ಮಾಡಲಾರಂಭಿಸಿದನು: "ಅಂಥವರು ತಿನಸು ಬಾಕರು; ಆಶೋತ್ತರ ಪ್ರಾಣಿಗಳು; ಎರಡು-ಮೂರು ದಿನಗಳಿಗೆ ಸಾಲುವಷ್ಟು ಅನ್ನವನ್ನು ಒಂದೇ ಊಟದಲ್ಲಿ ನುಂಗಿ ನೀರುಹಿಡಿಯುವವರು; ಊಟಕ್ಕೆ ಹೇಳ ದಿದ್ದರೂ ಆಗಂತುಕರಾಗಿ ಹೋಗಿ ತಿಂದು ಬರುವವರು" ಹೀಗೆಂದು ವೈದಿಕರನ್ನು ಅಲ್ಲಗಳೆಯಹತ್ತಿದನು. ಇನ್ನೊಬ್ಬ ಮಗನಂತೂ ಚಿಕ್ಕವನೇ. ಅವನ ವಿಷಯ ವಾಗಿ ಈಗಲೆ ಹೆಚ್ಚೇನು ಬರೆಯುವದಿದೆ? ಆದರೂ "ಹಿರಿಯಕ್ಕನ ಚಾಳಿ ಮನೆ ಮಂದಿಗೆಲ್ಲ" ಎಂಬಂತೆಯೇ ಸರಿ.

ಹೆಣ್ಣುಮಕ್ಕಳಲ್ಲಿ ಹಿರಿಯವಳ ಹೆಸರು ಮಾಲತಿ. ಚಿಕ್ಕವಳಿಗೆ ಚಂಪೆ ಎಂದು ಕರೆಯುತ್ತಿದ್ದೆವು. ನಮ್ಮವೆರಡೂ ಹುಡುಗಿಯರಿಗೆ 'ತುಂಗಾ' 'ಭದ್ರಾ' ಇಲ್ಲವೆ 'ಗಂಗಾ' 'ಯಮುನಾ' ಎಂಬ ಪವಿತ್ರ ನದಿಗಳ ಹೆಸರಿಡಬೇಕೆಂದು ನನ್ನ ಬಲವಾದ ಇಚ್ಛೆಯಿದ್ದಿತು; ಆದರೆ ನನ್ನ ಗೃಹಿಣಿಗೆ ಈ ಹೆಸರುಗಳೇ ಪ್ರಿಯವೆನಿಸಿದ್ದರಿಂದ ನಾನು ನಿರುಪಾಯನಾಗಬೇಕಾಯಿತು. ಹರಿಹರದೊಳಗಿನ ಸದಾಶಿವಭಟ್ಟನೆಂಬ ಸಾತ್ವಿಕ ಮತ್ತು ತಿಂದುಂಡು ಸುಖನಾಗಿರುವ ಮಧ್ಯಮ ಸ್ಥಿತಿಯ ಹಾರುವನ ಹಿರಿಯ ಮಗನಿಗೆ ನನ್ನ ಹಿರಿಯ ಮಗಳಾದ ಮಾಲತಿಯನ್ನು ಕೊಟ್ಟು, ಆಕೆಯ ವಯಸ್ಸಿನ ಎಂಟನೇ ವರ್ಷದಲ್ಲಿಯೇ ಲಗ್ನಮಾಡಿ ಬಿಟ್ಟೆನು. ಪಂಚಕರೇ, ಈಗಿನಂತೆ ಆಗ ಶಾರದಾಕಾಯಿದೆಯು ಇಲ್ಲ, ವೈನಿರತ ಮೇಲೆಯೇ ಹೆಣ್ಣು ಹುಡುಗಿಯರಿಗೆ ಲಗ್ನ ಮಾಡಬೇಕೆಂಬ ಪ್ರತಿಬಂಧಕವಿರಲಿಲ್ಲ. ಅಂತೆಯೇ ಬಡಬ್ರಾಹ್ಮಣನಾದ ಈ ಗುರುಭಟ್ಟನು ಪಾರಾದನು. ಇಲ್ಲವಿದ್ದರೆ ಈಗಿನ ಮನ್ವಂತರದಲ್ಲಿ ನನ್ನ ಪಾಡು ನನಗಾಗಿ ಹೋಗುತ್ತಿರಲಿಲ್ಲವೇ?

ಲಗ್ನವಾಯಿತೆಂದರೆ ಬಾಲಿಕೆಯರ ಮೇಲಿನ ತಾಯಿ-ತಂದೆಗಳ ಸ್ವತ್ವವು ತೀರಿತು; ಆದರೂ ಕರಳಿನ ಎಳತಕ್ಕಾಗಿ ನಾವು ನಮ್ಮ ಮಾಲತಿಯನ್ನು ಆಗಾಗ್ಗೆ ತವರುಮನೆಗೆ ಕರೆತರುವದನ್ನು ಬಿಟ್ಟಿರಲಿಲ್ಲ. ನಮ್ಮ ಹುಡುಗಿಯು ಸುರೂಪಿಯು. ನೂರಾರು ಹೆಂಗಸರಲ್ಲಿ ಅವಳಂಥ ಕಣ್ಣು ಮೂಗಿನಿಂದ ಸಲಕ್ಷಣವಾದ ಹೆಣ್ಣು ಮಗಳು ಸಿಗುವದು ಅಪರೂಪವಾಗಿತ್ತು. ಅವಳ ಮಾವನಾದರೂ ತನ್ನ ಯೋಗ್ಯತೆಯ ಮೇರೆಗೆ ಅವಳಿಗೆ ವಸ್ತ್ರಾಲಂಕಾರಗಳನ್ನಿಟ್ಟು ಅವಳನ್ನು ಹೈಮವತಿಯನ್ನಾಗಮಾಡಿ

ಪ್ರಸು. ತನ್ನ ಮಗಳ ಸುಶೀಲತೆ, ಬೀಗರ ಒಗರು, ಅಳಿಯನ ಗುಣವರ್ಣನ ಇವು ಗಳನ್ನು ನೆರೆಹೊರೆಯವರೆದುರಿಗೆ ಒಳ್ಳೇ ಆಢ್ಯತೆಯಿಂದ ಹೇಳುವದರಲ್ಲಿ ನನ್ನ ಗೃಹಿಣಿಗೆ ಬಹು ಹುರುಪು ಬರುತ್ತಿತ್ತು. ನನ್ನ ಎರಡನೇ ಮಗಳಾದ ಚಂಪೆಯು ವಯಸ್ಸಿನಿಂದ ಆರುವರ್ಷದವಳಾದಳು. ಅವಳ ಲಗ್ನಕ್ಕೆ ಬಹಳವಾದರೆ ಇನ್ನು ಎರಡು-ಮೂರೇ ವರ್ಷಗಳ ಅವಧಿಯುಳಿಯಿತು. ತನ್ನ ಹಿರಿಯಕ್ಕನಿಗಿಂತ ಚಂಪೆಯು ತುಸ ಹೆಚ್ಚೇ ಸುರೂಪಿಯಾಗಿದ್ದಳು; ಮತ್ತು ಮಾತುಕಥೆ-ಹಾವಭಾವ ಮುಂತಾದವುಗಳಲ್ಲಿ ಒಳ್ಳೇ ಚತುರಳೂ ದಕ್ಷಳೂ ಆಗಿದ್ದಳು.

"ಚಂಪೆಯನ್ನು ಗೃಹಸ್ಥರಿಗೇ ಕೊಡಬೇಕು; ಗೊಡ್ಡು ವೈದಿಕರಿಗೆ ಬೇಡ. ವರದಕ್ಷಿಣೆಯು ತುಸ ಹೆಚ್ಚು ಹತ್ತಿದರೂ ಚಿಂತೆಯಿಲ್ಲ. ಅಳಿಯನು ಬುದ್ಧಿವಂತನಿರಬೇಕು. ಅವನು ನೋಡಲು ಸುಂದರನಾಗಿಯೂ, ನಾಜೂಕಾಗಿಯೂ ಇರಬೇಕು; ಟೊಣಪನೂ ಮೀಸೆಯ ಮಿಂಡನೂ ಆಗಿರಕೂಡದು. ನಮ್ಮ ಚಂಪೆಗೆ ಭಾವ-ಮೈದುನರಿರಬಾರದು; ಅತ್ತೆಯು ಚಂಡಿಯಾಗಿರಕೂಡದು; ಮಾವನು ಮುತ್ಸಾಳನಿರಲಾಗದು. ಇಂಥ ಸ್ಥಳವನ್ನು ಈಗಿನಿಂದಲೇ ನೋಡಿಡಿರಿ" ಎಂದು ನನ್ನ ಗೃಹಿಣಿಯು ಯಾವಾಗಲೂ ನನಗೆ ಕಟಕಟ ಮಾಡುತ್ತಿದ್ದಳು. ಅದಕ್ಕೆ ನಾನು "ಏನೇ, ಚಂಪೆಯ ಲಗ್ನಕ್ಕೆ ಇಷ್ಟೇಕೆ ಅವಸರ? ಇನ್ನೂ ಎರಡು-ಮೂರು ವರ್ಷಗಳ ಅವಧಿಯಿದೆ. ಅಷ್ಟರಲ್ಲಿ ನೋಡಲಿಕ್ಕೆ ಬಂದೀತು. ವಿಧಿಘಟನೆಯನ್ನು ಬೇರೆ ತಪ್ಪಿಸಲಾಗುವದಿಲ್ಲವಷ್ಟೇ? ಪೂರ್ವಜನ್ಮದ ಸುಕೃತ-ದುಷ್ಕೃತಗಳಂತೆ ಆಗಿಯೇ ತೀರುವುದು" ಹೀಗೆ ನನ್ನವಳಿಗೆ ಹೇಳಿ ಸಮಾಧಾನ ಪಡಿಸಲೆತ್ನಿಸಬೇಕು. ಆಕೆಯೂ ಆಗಿನ ಮಟ್ಟಿಗೆ 'ಹೂ' 'ಹಾ' ಎಂದೆನ್ನಬೇಕು; ಆದರೆ ಆ ವೇಳೆಗಳೆಯಿತೆಂದರೆ ಇಲ್ಲವೆ ಒಂದೆರಡು ದಿನಗಳಾದವೆಂದರೆ, ಮತ್ತೆ "ನನ್ನ ಚಂಪೆಗೆ ಬಂಗಾರದ ಪಟ್ಟಿಯು ಚೆನ್ನಾಗಿ ಒಪ್ಪುವದಾದ್ದರಿಂದ ಬೇಕೇ ಬೇಕು; ಅದು ಆಗಲೇ ಬೇಕು, ಇದು ಇರಲೇ ಬೇಕು" ಎಂಬ ಆಕೆಯ ರಿಪಿರಿಪಿಗೆ ಪ್ರಾರಂಭವೇ. ನನ್ನ ಗೃಹಿಣಿಯು ಸದ್ಗುಣಿಯೂ ಸುಗುಣಳೂ ಆಗಿದ್ದಂತೆ ತನ್ನ ಮಕ್ಕಳ ವಿಷಯದಲ್ಲಿ ಒಳ್ಳೇ ಉತಾವಳಿ ಸ್ವಭಾವದವಳೂ ಆಗಿದ್ದಳು. ಆಕೆಗೆ ಮಕ್ಕಳೆಂದರೆ ಬಹು ಪ್ರೀತಿ. ಅದರಲ್ಲಿಯೂ ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳ ವಿಷಯವಾಗಿ ಅವಳಲ್ಲಿ ಹೆಚ್ಚಾಗಿ ಪ್ರೀತಿಯಿತ್ತೆಂದು ಹೇಳಬೇಕೇಕೆ? "ಅಪುತ್ರಸ್ಯ ಗತಿರ್ನಾಸ್ತಿ" ಎಂಬ ತತ್ವದವಳೇ ಅವಳಾಗಿದ್ದಳೆಂದರೆ ಸಮರ್ಪಕವಾಗುವದು.



## ೩ ಕೆಟ್ಟು ಪಟ್ಣ ಸೇರು.



ಇದು ವರೆಗೆ ನಾನು ನನ್ನ ಗೃಹಿಣಿಯು, ನನ್ನ ಮಕ್ಕಳೊಳಗಿನ ಪ್ರತಿಯೊಬ್ಬರ ಅಲ್ಪಸ್ವಲ್ಪ ಸಂಗತಿಗಳನ್ನು ನಮ್ಮ ಪ್ರಿಯ ವಾಚಕರ ಮುಂದಿರಿಸಿರುವೆನು. ನನ್ನ ಸ್ವಂತದ ಸ್ವಭಾವ ಚಿತ್ರವು ಈ ಕಥಾನಕದಲ್ಲಿಯೇ ಚನ್ನಾಗಿ ಒಡಮೂಡಲಿರುವದರಿಂದ ಅದನ್ನು ಇಲ್ಲಿ ತಿಳಿಸಲವಶ್ಯವಿಲ್ಲ. ಇದುವರೆಗಿನ ಸಂಗತಿಯಿಂದ ನನ್ನ ಯೋಗ್ಯತೆಯೂ ಕುಟುಂಬ ಪೋಷಣದ ಉದ್ಯೋಗವೂ ಎಲ್ಲರಿಗೂ ತಿಳಿದಿರಬಹುದಾಗಿದೆ. ವೈದಿಕವೃತ್ತಿ-ಭಿಕ್ಷುಕವೃತ್ತಿಗಳೆಂದರೆ ಎಲ್ಲ ಬಗೆಯಿಂದಲೂ ಹೆರವರ ದುಡ್ಡಿನ ಮೇಲೆ ನಡೆಯುವ ಧಂದೆಗಳು. ಎಲ್ಲಕ್ಕೂ ಮೊದಲು ಧರ್ಮ ಮಾಡಬೇಕೆಂಬ ವಾಸನೆಯು ಜನರಲ್ಲಿ ಹುಟ್ಟಬೇಕು; ಬಳಿಕ ಅವರ ದೃಷ್ಟಿಯು ನನ್ನ ಕಡೆಗೇ ತಿರುಗಬೇಕು; ಅಂದರೆ ನಾಲ್ಕೆಂಟು ಆಣೆಗಳು ನನಗೆ ದೊರೆತರೆ ದೊರೆಯಬೇಕು. ನನ್ನ ಅಧ್ಯಯನವು ದಶಗ್ರಂಥಗಳದು. ಅಂದಬಳಿಕ ಮೂರು ಕಾಸಿಗಾಗಿ ನಾನು ಮನೆ ಮನೆಗೆ ಅಂಡಲೆಯುವಂತಿಲ್ಲ; ಅಥವಾ ಕಗ್ಗೋಲ ಮುಗ್ಗೋಲನಾಟಾಗಿ ತಂಬಿಗೆ-ಥಾಲಿಗಳನ್ನಿಟ್ಟು ಆಗಂತುಕನಾಗುವಹಾಗಿಲ್ಲ; ಇಲ್ಲವೆ ಮುಂದೆ ಮುಂದೆ ಮಾಡಿ ಬಾಲಬಡೆಯುವ ವೃತ್ತಿಯೂ ನನ್ನದಲ್ಲ. ತಾನಾಗಿಯೇ ಗುಣ ಪರೀಕ್ಷಿಸಿ ನಮ್ಮಂತಹರಿಗೆ ದಾನ-ಧರ್ಮ ಮಾಡುವ ಧರ್ಮಾತ್ಮರು ಲೋಕದಲ್ಲ ದಿನದಿನಕ್ಕೆ ಕಡಿಮೆಯಾಗಹತ್ತಿದರು. ಪೂರ್ವದಲ್ಲಿ ಧನಿಕರು ಒಳ್ಳೇ ಬ್ರಾಹ್ಮಣ್ಯ ಸ್ಥಳವೆಂದು ನಮ್ಮ ಸರ್ಪಪುರಿಗೆ ಬಂದು ದಾನ-ಧರ್ಮ ಮಾಡುವಪರಿಪಾಠವು ಹೆಚ್ಚಾಗಿದ್ದಿತು; ಆದರೆ ಇತ್ತೀಚೆಗೆ ಅಂಥವರಾರೂ ಬರುವದಿಲ್ಲ. ನಮ್ಮ ಅಧ್ಯಯನದ ಪರೀಕ್ಷೆ ತಕ್ಕೊಂಡು ದಕ್ಷಿಣೆ ಕೊಡುವವರೂ, ಶಾಲುಜೋಡಿ ಹೊದಿಸುವವರೂ, ದೋತರ ಜೋಡುಗಳನ್ನುಡಿಸುವವರೂ ಇತ್ತೀಚೆಗೆ ಇಲ್ಲವೇ ಇಲ್ಲ. ಹೀಗಾಗಿ ನಮ್ಮ ವೈದಿಕ ಬ್ರಾಹ್ಮಣರ ಸಂಸಾರ ಸಾಗುವದು ಬಲು ಕಠಿಣವಾಯಿತು. ಮನೆಯಲ್ಲಿ ಹುಡುಗರ-ಹುಪ್ಪಡಿಗಳ ಸಂಖ್ಯೆಯು ದಿನೇ ದಿನೇ ಹೆಚ್ಚಲಾರಂಭಿಸಿತು. ಇತ್ತ ಸಂಸಾರವು ಬೆಳೆಯಹತ್ತಿದಂತೆ ಅತ್ತ ಆದಾಯವು ಸಂಪುಷ್ಟಕ್ಕೆ ಬರಹತ್ತಿತು. ಇನ್ನು ಏನು ಮಾಡಬೇಕು? ಎಂಬ ಚಿಂತೆಯು ಕೈತೊಳಕೊಂಡು ಬೆನ್ನು ಹತ್ತಿತು. ನನ್ನ ಗೃಹಿಣಿಗೂ ಖರ್ಚು ಕಂದಾಯಗಳ ಮೂಲಕ ನನಗಾಗುವ ತೊಂದರೆಯು ಅವಗತವಾಗುತ್ತಿತ್ತು. ಅದುವರೆಗೂ ನಾನು ಸಾಲಗೊಯ್ಯಕನಾಗಿರಲಿಲ್ಲ. ಇನ್ನು ಸಾಲಗಾರನಾಗದೆ ದಿಸಗಳೆಯ ಬರುವಂತಿಲ್ಲ, ಎಂಬ ಚಿಂತೆಯು ಹಗಲಿರುಳು ನನ್ನ ಬೆನ್ನು ಬಿಡದಾಯಿತು. ನನ್ನಂತೆ ನನ್ನ ಗೃಹಿಣಿಗೂ ಅನಿಸಹತ್ತಿತು. ಅದರಿಂದ ಅವಳು ತನ್ನ ಶಕ್ತಿಮೀರಿ ಕೈ ಜಿಗಿಹಿಡಿದು ಖರ್ಚು ಮಾಡುತ್ತಿದ್ದಳು; ಆದರೂ ಅದು ನೀಗುವ ಬಗೆ ಹೇಗೆ?

ಮನೆತನದ ಖರ್ಚಿನಲ್ಲಿ ಕೈ ಬಿಗಿಹಿಡಿಯುವದು ಎಲ್ಲಿ? ಯಾವಾಗ? ದೇವರ ನೀಲಾಂಜನಕ್ಕೆ ತುಪ್ಪ ಕಡಿಮೆ ಹಾಕು, ನಂದಾದೀಪದ ಬತ್ತಿ ಸಣ್ಣ ಮಾಡು ಇಲ್ಲಿಂದ ರಿಟ್ರೆಂಚಮೆಂಟಿಗೆ ಪ್ರಾರಂಭ ಮಾಡಿ, ಹಬ್ಬದನ್ನ ಹೋಳಿಗೆಯ ಊಟಕ್ಕೆ ಬದಲು ಬಿಳೀಹೋಳಿಗೆ (ಚಪಾತಿ-ಗೋದೀರೊಟ್ಟಿ)ಯು ಇಲ್ಲವೆ ಹಿಟ್ಟಿನ ಹೋಳಿಗೆಯು ಮೇಲೆ ಮುಗಿಸುವದೂ, ಮನೆಯೊಳಗೆ ಇನ್ನೂ ಕೆಲವು ಸಿಲ್ಕು ಇರುವಾಗಲೇ ಹೊಸ ಜೀನಸು ತರಹೇಳುವ ಬದಲು, ಮನೆಯೊಳಗಿನ ಪದಾರ್ಥಗಳೆಲ್ಲ ತೀರಿ ಮಂದಿಯಲ್ಲಿ ಕೈಗಡ-ಕಟ್ಟಿಗಡ ತಂದು ತಿಂದು, ಅವರ ಉಪದ್ರವ ಹೆಚ್ಚಾದ ಬಳಿಕ ತರಹೇಳುವದೂ ಮಾಡಹತ್ತಿದರೆಲ್ಲಾದರೂ ನಿಜವಾದ ರಿಟ್ರೆಂಚಮೆಂಟ-ಉಳಿತಾಯವಾಗುವದೊ? ಅದರಿಂದ ಅವಳ ಜೀವದ ಹುರುಹುರು, ನನ್ನ ಜೀವದ ತಳಮಳ ಇವು ಎಡಬಿಡದೆ ನಡೆದಿದ್ದವು. ಆ ಚಿಂತೆಯನ್ನೆಷ್ಟೆಂದು ಹೇಳಲಿ? ಪ್ರತಿನಿತ್ಯ ಬರುತ್ತಿದ್ದ ಊಟದ ನಿಮಂತ್ರಣಗಳೂ ಇತ್ತೀಚೆಗೆ ಬಾರದಾದವು. ಸಿಗತಕ್ಕಷ್ಟು ದಕ್ಷಿಣೆಯು ಸಿಗದಾಯಿತು. ಅಂದಮೇಲೆ ನಮ್ಮ ವೈದಿಕ ಬ್ರಾಹ್ಮಣರಿಗೆ ಉತ್ಪತ್ತಿಯು ಎಲ್ಲಿಂದ ಆಗಬೇಕು? ಬರಬರುತ್ತ ನಮ್ಮ ಮನೆಯು ಪ್ರತ್ಯಕ್ಷ ಸುದಾಮದೇವನ ಬಿಡಾರವೇ ಆಗುವದೇನೆಂಬ ಅಂಜಿಕೆಯು ನಮಗುಂಟಾಯಿತು.

ಹೀಗಿದ್ದರೂ ನಮ್ಮ ದೈನ್ಯವು ಮಂದಿಯ ಕಣ್ಣಿಗೆ ಬೀಳಬಾರದೆಂದು ನಾನೂ ನನ್ನ ಗೃಹಿಣಿಯೂ ಹಗಲಿರುಳೂ ಹೆಣಗುತ್ತಿದ್ದೆವು. ಹೊಸ ದೋತರ-ಸೀರೆಗಳನ್ನು ಕೊಳ್ಳಲಿಕ್ಕೆ ಕೈಯಲ್ಲಿ ದುಡ್ಡಿರದ್ದರಿಂದ, ಜನರು ನಮ್ಮನ್ನು ಕೇಳುವ ಮೊದಲೇ ಮನೆಯೊಳಗಿನ ಹಳೇ ಸನಗಿಗೆ ಗುನಿಹತ್ತುವ ಸಂಭವವಿದೆಯೆಂದು ಹೇಳಿಕೊಳ್ಳುತ್ತ ಗಂಟಿನೊಳಗಿನ ಭಾರೀ ಬೆಲೆಯ ಸೀರೆ-ದೋತರಗಳನ್ನುಡಹತ್ತಿದೆವು. ಅದರಿಂದ ಊರ ಜನರು ನಮ್ಮ ವಿಷಯವಾಗಿ ಅಲ್ಲಲ್ಲಿ ಗುಣುಗುಟ್ಟ ತೊಡಗಿದರು. ಇದುವರೆಗೆ ಆಗದಿದ್ದ ಸಾಲತೆಗೆಯುವ ಸಂಸ್ಕಾರವು ಇನ್ನು ಮೇಲೆ ಗಂಟೇ ಬಿದ್ದಿತು. ಇನ್ನು ಇಲ್ಲಿ ಹೇಗೆ ಕಾಲಹರಣ ಮಾಡಬೇಕೆಂಬ ಚಿಂತೆಯಿಂದ ನನ್ನ ನಿದ್ರೆಯು ಕಟ್ಟಾಯಿತು. "ಹೂ ಮಾರಿದಲ್ಲಿ ಹುಲ್ಲು ಮಾರುವ ಪ್ರಸಂಗ ಬಂದಿತಲ್ಲ!" ಎಂಬ ಅಂಜಿಕೆ. ಇನ್ನು ಮುಂದೆ ಏನು ಮಾಡಬೇಕು? ಎಂದು ಆಲೋಚಿಸುತ್ತ ಒಂದು ದಿನ ನಾನು ನಮ್ಮ ಪಡಸಾಲೆಯ ಮೇಲೆ ಕುಳಿತಿರಲು, 'ನಾಳೆಗೆ ಸಂತೆ' ಎಂಬದು ನೆನಪಾಯಿತು. ಕೂಡಲೆ ನನ್ನ ಎದೆಯೊಡೆದು ನೀರಾಯಿತು!

ನಾಳೆಯಂತೂ ಸಂತೆ. ಹತ್ತರ ಕಾಸಿಲ್ಲ. ಇನ್ನು ಹೇಗೆ ಮಾಡಬೇಕು? ಯಾರನ್ನು ಕೇಳಬೇಕು? ಎಂಬ ಯೋಚನೆಯು ಪ್ರಾರಂಭವಾಯಿತು. ಇಷ್ಟರಲ್ಲಿ ಬೆಂಗಳೂರ ಕಡೆಯ ಅತಿಥಿಯೊಬ್ಬನು ನಮ್ಮ ಮನೆಗೆ ಬಂದನು. ಅವನು ನಮ್ಮ ಮನೆಯಲ್ಲಿ ತನ್ನ ಗಂಟು-ಗದಡಿಗಳನ್ನೆಲ್ಲ ನಿಟ್ಟುಹಚ್ಚಿ ಇಟ್ಟ ಬಳಿಕ ನಾವು ಅವನಿಗೆ ಕಾಲು ತೊಳೆಯಲಿಕ್ಕೆ ನೀರು ಕೊಟ್ಟು, ಕುಡಿಯಲಿಕ್ಕೆ ಆಸರಿ = ಬೆಲ್ಲ, ನೀರುಗಳನ್ನು ಕೊಟ್ಟೆವು. ನಂತರ ಅವನೊಡನೆ ಅಲ್ಲಿಲ್ಲಿಯ ಹರಟೆಗಳಾದವು. ಆಗ ಆ ಗೃಹಸ್ಥನು

ನಮಗೆ ಹೇಳಿದನೇನಂದರೆ,—"ಗುರುಭಟ್ಟರೇ, ಬೆಂಗಳೂರಲ್ಲಿ ಮೈಸೂರ ಮಹಾರಾಜರ ಪಾಠಶಾಲೆಯಿದೆ. ಅಲ್ಲಿ ಕಲಿತರೆ ದೊಡ್ಡ ದೊಡ್ಡ ತಲಬಿನ ನೌಕರಿಗಳು ದೊರೆಯುತ್ತವೆ; ಅಲ್ಲದೆ ಅಲ್ಪ ಸ್ವಲ್ಪ ಇಂಗ್ಲಿಷ ಕಲಿತರಂತೂ ಶಿರಸ್ತೆದಾರ, ಅಮಲ್ದಾರ, ಡೆಪೂಟಿ ಕಮಿಶನರ ಮುಂತಾದ ಬಹು ದೊಡ್ಡ ಹುದ್ದೆಯ ಕೆಲಸಗಳು ಸಿಗುತ್ತವೆ. ಮೊನ್ನೆ ಆ ನಮ್ಮ ಬಂಗಭಟ್ಟರ ಮಗ ಗುಂಡಭಟ್ಟನಿಗೆ ಅಮಲದಾರಿಕೆಯಾಯಿತು. ಕಾಳಭಟ್ಟರ ಹೆಂಡತಿಯ ಸೋದರಳಿಯನಾದ ಸಾಕಯ್ಯನಿಗೆ ಸುಭೇದಾರಿಕೆಯಾಯಿತು. ಅವನಿಗೆ ಅಷ್ಟು ಸಂಬಳವಾಯಿತು; ಇವನಿಗೆ ಇಷ್ಟು ತಲಬಿನ ನವಕರಿಯು ಸಿಕ್ಕಿತು. ಗುರುಭಟ್ಟರೆ, ನೀವು ಇನ್ನು ಹೀಗೆ ಮನೆ ಹಿಡಿದು ಕುಳಿತರೆ ಆಗುವದೇನು? ನಿಮ್ಮ ಈ ಹಾಳು ದಶಗ್ರಂಥ-ಶತಗ್ರಂಥಗಳನ್ನು ಈಗಿನ ಮನ್ವಂತರದಲ್ಲಿ ಕೇಳುವವರಾರು? ನಿಮ್ಮ ಬಾಳು ಒಳ್ಳೇ ಚಾಲಾಕನಿರುವಂತೆ ತೋರುತ್ತದೆ. ನಿಮ್ಮ ತಿಳುವಳಿಕೆಯ ಮೇರೆಗೆ ಅವನು ಮನೆಯಲ್ಲಿ ಕಲಿಯತಕ್ಕದ್ದನ್ನೆಲ್ಲ ಕಲಿಸಿ ಮುಗಿಸಿರುತ್ತೀರಿ. ಇನ್ನುಬಳಿಕ ಅವನನ್ನು ಬೆಂಗಳೂರ ಪಾಠಶಾಲೆಗೇಕೆ ಕಳಿಸುವದಿಲ್ಲ? ಅಲ್ಲಿ ಆ ನಿಮ್ಮ ಯಜಮಾನರಾದ ಕಟ್ಟೀಮನೆ ವಾಸುದೇವರಾಯರು ಅನಾಯಾಸವಾಗಿ ಇದ್ದೇ ಇರುವರು. ಅವರು ಈತನ ಹೊಟ್ಟೆ-ಬಟ್ಟೆಗಳ ವ್ಯವಸ್ಥೆಯನ್ನು ಸಹಜವಾಗಿ ಮಾಡಬಲ್ಲರು. ಈ ನಿಮ್ಮ ಬಾಳನು ದೈವ ತೆಗೆದರೆ, ನಿಮ್ಮೆಲ್ಲರ ಜನ್ಮ ದಾರಿದ್ರ್ಯವು ಹಿಂಗಿ ಹೋದೀತು. ಸಾಹೇಬರು ಪರಧರ್ಮಿಗಳು; ಮ್ಲೇಂಛರು: ಅವರ ಇಂಗ್ಲಿಷ ವಿದ್ಯೆಯನ್ನು ಹೇಗೆ ಕಲಿಯಬೇಕು? ಅವರ ಕೈಕೆಳಗೆ ನವಕರಿಯನ್ನು ಹೇಗೆ ಮಾಡಬೇಕು? ಮುಂತಾದ ಕ್ಷುಲ್ಲಕ ವಿಚಾರಗಳನ್ನು ಮನಸಿನಲ್ಲಿ ತರಬೇಡಿರಿ. ಇಂಗ್ಲಿಷರಾಜನು ಈಗ ಪೃಥ್ವೀಪತಿ ಸಾರ್ವಭೌಮನಾಗಿರುವನು. "ನಾವಿಷ್ಣುಃ ಪೃಥಿವೀಪತಿಃ" ಪೃಥ್ವೀಪತಿಯೆಂದ ಬಳಿಕ ಸಾಕ್ಷಾತ್ ವಿಷ್ಣುವಿನ ಅಂಶವೇ. ಭಟ್ಟರೇ, ಇನ್ನು ಚಿಂತೆಯನ್ನು ಬಿಡಿರಿ. ಇಲ್ಲದ ಚಿಂತೆಗಳಿಗೆ ಆಸ್ಪದವನ್ನು ಕೊಡಬೇಡಿರಿ; ಮನಸ್ಸು ಗಟ್ಟಿಮಾಡಿರಿ; ಮತ್ತು ನಿಶ್ಶಂಕೆಯಿಂದ ಈ ನಿಮ್ಮ ಬಾಳನನ್ನು ನಾಳೆಯೇ ಬೆಂಗಳೂರಿಗೆ ಕಳಿಸಿರಿ. ಈ ಮೋರಪ್ಪನು ಏನು ಹೇಳಿದನೋ, ಎಂದು ಹಿಂದಿನಿಂದ ಅಂದೀರಿ? ತಿಳಿಯಿತೆ?"

ಆ ಮೋರಪ್ಪನ ಅಂದಿನ ಆ ಸಲಹೆಯು ನನಗೂ ರುಚಿಸಿತು. ಆಗ ನಾನು: "ಮೋರಪ್ಪಾ, ನೀವನ್ನುವುದು ನಿಜವು. ನಮ್ಮ ಬಾಳನು ಕಲಿತರೆ ೨೦-೨೫ರ ನವಕರಿಯು ಹತ್ತಬಹುದೋ? ಹಾಗು ನೌಕರಿ ಹತ್ತಿತೆಂದರೆ ನಮ್ಮ ದಾರಿದ್ರ್ಯವೆಲ್ಲ ಮಾಯವಾದೀತೋ?" ಎಂದು ನಾನು ನನ್ನ ಬಾಯಿಂದ ಪ್ರಶ್ನೆ ಮಾಡುತ್ತಿರುವಾಗಲೆ ಆ ಕಲ್ಪನೆಯ ಆಗಾಮಿ ಪರಿಣಾಮದ ಸರ್ವ ಸುಖದಾಯಕ ಫಲಗಳು ನನ್ನ ಅತ್ಯಂತ ಚಂಚಲ ಮನಸ್ಸಿನೆದುರಿಗೆ ಬಂದು ನಿಂತೇ ಬಿಟ್ಟವು! 'ನನ್ನ ಮಗನು ಬೆಂಗಳೂರಿಗೆ ಹೋದ ಕೂಡಲೆ ಓದಿ ಜಾಣನಾಗುವನು; ಹಾಗೆ ಅವನು ಬುದ್ಧಿವಂತನಾದ ಕೂಡಲೆ ಅವನಿಗೆ ೪೦-೫೦ ರೂಪಾಯಿ ತಲಬಿನ ನೌಕರಿ ಸಿಕ್ಕೇ

ತೀರುವದೆಂದು ತಿಳಿ' ಎಂದು ನನ್ನ ಮನಸ್ಸು ನನಗೆ ಒತ್ತೊತ್ತಿ ಹೇಳತೊಡಗಿತು. ನಾನು ಯಾವುದೊಂದು ಸಂಗತಿಯನ್ನು ಇಷ್ಟು ಉತಾವಳಿತನದಿಂದ ಇದು ವರೆಗೂ ಯೋಚಿಸಿರಲಿಲ್ಲ; ಆದರೂ ಅಂದಿನ ಆ ಕಲ್ಪನೆಯು ನನಗೆಷ್ಟು ರುಚಿಸಿತೆಂದು ಹೇಳಲಿ! ನನ್ನ ಮನಸ್ಸು ಸೂಚಿಸಿ ಆ ಕಲ್ಪನೆಯು ನಿಷ್ಣಾತ ಜ್ಯೋತಿರ್ವಿದನ ನುಡಿ ಯಂತೆ ನನಗೆ ಸತ್ಯವೆಂದು ತೋರಹತ್ತಿತು. ಇದು ನನ್ನ ಸ್ವಭಾವದೊಳಗಿನ ಪ್ರಮುಖದೋಷವೆಂದು ನನ್ನದು ನಾನೇ ಹೇಳುತ್ತೇನೆ; ಆದರೆ ಆ ದೋಷವು ನನ್ನ ಕಡೆಗಿಲ್ಲ. ಆ ಮಹಾ ಪ್ರತಾಪಿಯಾದ ಅಷ್ಟದಾರಿದ್ರ್ಯದ ಕಡೆಗಿದೆ. ಮೋರಪ್ಪನ ಆ ಯುಕ್ತಿಯನ್ನು ಕೇಳುತ್ತಲೆ ನನ್ನ ಚಿತ್ತವೆಲ್ಲ ಅತ್ತ ಕಡೆಗೇ ತಿರುಗಿತು. ಅಂದು ನನ್ನ ಕ್ರಮಾಧ್ಯಯನಕ್ಕೆ ಅವೃತ್ತಿ ಕೊಡಬೇಕಾಗಿತ್ತು; ಆದರೆ ಅದು ಹಾಗೆಯೇ ಉಳಿದು ಹೋಯಿತು. ನಾಳಿನ ಸಂತೆಯ ಗತಿಯೇನೆಂಬ ಯೋಚನೆಯು ಎತ್ತೋ ಹೊರಟು ಹೋಯಿತು. ಆಗ ನಾನು ನಡುಮನೇ ಒಳ್ಳೇ ಗಟ್ಟಿ ದನಿಯಿಂದ:— "ಏನಪ್ಪ, ಕೇಳಿದೆಯಾ ಈ ಮೋರಪ್ಪನವರು ಏನೆನ್ನುತ್ತಾರೆಂಬದನ್ನು? ಹಾಗಾ ದರೆ ಬಾಳನನ್ನು ಬೆಂಗಳೂರಿಗೆ ಕಳಿಸಿ ಬಿಡಲ್ಯಾ?" ಎಂದು ಕೇಳಲು,

"ಬಾಳನು ಬೆಂಗಳೂರಿಗೆ ಹೋಗಿ ಮಾಡುವದೇನು? ಸಾಲೆಯನ್ನೇ ಕಲಿ ಯುವದಷ್ಟೆ? ಆ ವಿಚಾರವನ್ನು ಹಿಂದಿನಿಂದ ಮಾಡಲಿಕ್ಕೆ ಬಂದೀತು. ಹುಡುಗನು ಬೆಳೆಯುತ್ತ ನಡೆದನು. ಮೊಟ್ಟ ಮೊದಲು ಆತನ ಲಗ್ನದ ಬಗ್ಗೆ ಏನಾದರೂ ಯೋಚನೆ ಮಾಡುವದೋ-ಇಲ್ಲವೊ? ಅಜೀ ಮನೆಯ ಶಾರಕ್ಕನು ನನಗೆ ಗಂಟೇ ಬಿದ್ದಿದ್ದಾಳೆ. ನಾನವಳ ಮಾತಿಗೆ ಒಪ್ಪಬೇಕೆಂದಿದ್ದೇನೆ. ನನ್ನ ಎಲ್ಲ ಉತ್ಕಟೇಚ್ಛೆ ಗಳನ್ನು ಅವಳು ಚೆಪ್ಪಾಗಿ ಈಡೇರಿಸಬಲ್ಲಳು; ಮತ್ತು ತನ್ನ ಅಳಿಯನನ್ನೂ ಹೆಚ್ಚಾಗಿ ಮನ್ನಿಸುವಳು. ಅವಳ ಮಗಳು ಇಂದಿಗೇನೋ ಕಪ್ಪು ಕಾಡಿಗೆಯಂತೆ ಕಾಣುತ್ತಿದ್ದರೂ, ನಾಳೆ ವಯಸ್ಸಿಗೆ ಬಂದಳೆಂದರೆ ನೋಡುವಿರಂತೆ ಹೇಗೆ ಕಾಣಿಸುವ ಳೆಂಬದನ್ನು! ಇನ್ನು ಮುಂದೆ ನನ್ನ ಬಾಳನನ್ನು ಹೀಗೆಯೇ ಅವಿವಾಹಿತನನ್ನಾಗಿ ಹೆಚ್ಚುಕಾಲ ಬಿಡುವಂತಿಲ್ಲ. ಕೇರಿಯ ಜನರೆಲ್ಲ ನನ್ನನ್ನು ಕಂಡು ನಗುವರು. ನದಿಗೆ ಹೋದಾಗಂತೂ ತಲೆಗೊಂದು ಮಾತಾಡಿ ನನ್ನನ್ನು ಸಾಕು ಸಾಕು ಮಾಡು ವರು:—"ಏನಿರೀ ಕಾವಕ್ಕಾ, ನಿಮ್ಮ ಬಾಳನ ಲಗ್ನವನ್ನೆಂದು ಮಾಡುವಿರಿ? ಅಥವಾ ಅವನನ್ನು ಯಾವದೊಂದು ಮಠಕ್ಕೆ ಮರಿಯೆಂದು ನೀಡಲಿರುವಿರೊ?" ಇಂಥ ಅವರ ಪ್ರಶ್ನೆಗಳಿಗೆ ನಾನು ಎಷ್ಟೆಂದು ಹಾಗು ಏನೆಂದು ಉತ್ತರ ಕೊಡಲಿ? ಅದೇನೂ ಇಲ್ಲ; ಮೊದಲು ನನ್ನ ಕಣ್ಣೆದುರಿಗೆ ಆತನನ್ನು ಚತುರ್ಭುಜನನ್ನಾಗ ಮಾಡಿರಿ; ಬಳಿಕ ಕಳಿಸಿರಿ, ಅವನನ್ನು ಬೇಕಾದಷ್ಟು ಮತ್ತು ಬೇಕಾದಲ್ಲಿಗೆ ಕಲಿಯಲಿಕ್ಕೆ. ಇನ್ನು ಒಂದೆರಡು ವರ್ಷಗಳು ಹೀಗೆಯೇ ನಮ್ಮ ಅಡಚಣಿಗಳನ್ನು ಮುಂದೆ ಮಾಡಿ ಬಾಳನ ಲಗ್ನ ಮಾಡದಿದ್ದರೆ, ಮುಗಿಯಿತು ಆತನ ಲಗ್ನದ ಆಶೆಯು. ಮುಂದೆ ಆತನ ಲಗ್ನವು ಆಗಲಿಕ್ಕೇ ಇಲ್ಲ" ಎಂದಂದು ಮುಳು ಮುಳು ಅಳಹತ್ತಿದಳು.

ಆಕೆಯ ಆ ಮಾತಿಗೆ ನಾನು ಏನೆಂದು ಉತ್ತರ ಕೊಡಬೇಕು? 'ಎತ್ತು ಎರಿಗೆ ಎಳೆದರೆ ಕೋಣ ಕೆರೆಗೆ ಎಳೆಯಿತು' ಎಂಬಂತೆಯೇ ಆಯಿತು! ಅವಳ ಅಂಬೋಣವಾದರೂ ವಿಚಾರಣೀಯವಾಗಿದ್ದಿತು; ಯಾಕಂದರೆ ಈಗಿನಂತೆ ಆ ಕಾಲದಲ್ಲಿ ವಧೂವರರು ತಮ್ಮ ವಿವಾಹಗಳನ್ನು ತಾವೇ ಮಾಡಿಕೊಳ್ಳುವ ಪರಿಪಾಠವಿರಲಿಲ್ಲ. ವಧುವಿನ ವಯಸ್ಸು ಎಂಟಕ್ಕೆ ಮೀರಿದರೆ, ವರನು ಹನ್ನೆರಡು ವರ್ಷದವನಾದರೆ ಅವರ ಲಗ್ನ ಮಾಡದಿದ್ದ ಬಗ್ಗೆ ಸಮಾಜದವರು ತಂದೆ-ತಾಯಿಗಳಿಗೆ ದೋಷಕೊಟ್ಟು, ಅವರನ್ನು ಕಂಡಕಂಡಲ್ಲಿ ಆಡಿಕೊಳ್ಳುವ ಕಾಲವದಾಗಿತ್ತು. ಅದರಿಂದ ನನ್ನ ಗೃಹಿಣಿಯ ವಿಚಾರವು ಆಗ ನನಗೂ ಸರಿದೋರಿತು. ಈಗ ಈ ಕಾರ್ಯವೊಂದನ್ನು ತೀರಿಸಿಕೊಂಡು ಬಿಟ್ಟರೆ, ಮುಂದೆ ಚಿಕ್ಕವನ ಮುಂಜಿ ಹಾಗು ಚಂಪೆಯ ಲಗ್ನದ ವರೆಗೆ ನಮ್ಮನ್ನು ಕೆಣಕುವವರೇ ಇರಲಿಲ್ಲವೆಂದೆನಿಸಿತು; ಆದರೆ ಪರಕ್ಷಣದಲ್ಲಿಯೇ "ನಾನು ಬಾಳನ ಲಗ್ನದ ಹವ್ಯಾಸಕ್ಕೆ ಬೀಳಬಾರದು. ಅವನು ಗಳಿಸಹತ್ತಿದನೆಂದರೆ, ಬೇಕಾದರೆ ತನ್ನ ಲಗ್ನ ತಾನು ಮಾಡಿಕೊಂಡಾನು" ಎಂದೆನಿಸುತ್ತಿತ್ತು; ಆದರೂ ಯಾವ ವಿಚಾರವೂ ನನ್ನಲ್ಲಿ ದೃಢವಾಗಿ ನಿಲ್ಲಲೊಲ್ಲದು. ಹೇಗಾದರೂ ಮಾಡಿ ಲಗ್ನಕಾರ್ಯವನ್ನು ಬಗೆ ಹರಿಸಿಕೊಳ್ಳಲೇಬೇಕೆಂದು ಮನಸ್ಸಿನಲ್ಲಿ ನಿರ್ಧರಿಸಿಕೊಂಡು:—'ಏನಕಾ, ನಿನ್ನ ಆ ಶಾರಕ್ಕನ ಮಗಳೆನ್ನುವೆಯಲ್ಲ, ಅದೇ ಆ ಒಡ್ಡರಂತಹ ಹೆಣ್ಣು ಮೊನ್ನೆ ಅಳ್ಳಿಟ್ಟಿನ ಗಡಿಗೆ ಕೊಡಬಂದಿದ್ದಳಲ್ಲವೇ? ಥೂ! ಅದರ ಮುಸುಡಿಗೆ....! ಹೆಣ್ಣೇ ಅದು! ಹೊಲದೊಳಗಿನ ಬೆದರಾಗಿದೆ-ಬೆದರು!' ಎಂದೆನ್ನಲು,

'ತುಸ ಕಪ್ಪಿದ್ದರೇನಾಯಿತು? ಆ ಹುಡುಗಿ ಬಲು ಜಾಣೆಯಿದ್ದಾಳೇ; ಮತ್ತು ಅವಳ ತಂದೆಯ ಹತ್ತರ ದೊಡ್ಡ ಗಂಟೂ ಇದೆ. ಅವನಿಗೆ ಅವಳೊಬ್ಬಳೇ ಮಗಳು. ಲಗ್ನಸಮಾರಂಭವು ಒಳ್ಳೇ ವಿಜೃಂಭಣೆಯಿಂದಲೂ ಹುರುಪಿನಿಂದಲೂ ಆದೀತು. ವರನ ತಾಯಿಯಾದ ನನ್ನ ಎಲ್ಲ ಅಪೇಕ್ಷೆಗಳು ಈಡೇರ್ಯಾವು. ಅಂತೆಯೇ ನಾನವಳನ್ನು ಯೋಜಿಸಿದ್ದು.'

"ನಿನ್ನಂಬೋಣವೇನೋ ನಿಜ; ಆದರೆ ಆ ಕೆಟ್ಟ ಮುಸುಡಿಯ ಹೆಣ್ಣು ನಮ್ಮ ಬಾಳನ ಮನಸ್ಸಿಗಂತೂ ಬರಬೇಕಲ್ಲವೇ? ನೀನು ನಿನ್ನ ಮನಸ್ಸಿನ ಪ್ರಕಾರ ಅವಳನ್ನು ಅವನಿಗೆ ಹೆಂಡತಿ ಎಂದು ಗಂಟು ಹಾಕಿದರೆ, ಅವಳು ಅವನ ಮನಸ್ಸಿಗೆ ಬರದಿದ್ದರೆ?"

"ಇಶ್ಶ, ಆ ಹುಡುಗನ ಮನಸ್ಸಿಗೇನು ಬರುವದು? ನಮ್ಮ ಮನಸ್ಸಿಗೆ ಬಂದರೆ ತೀರಿತು. ನಮ್ಮ ಬಾಳನೇನು ತೀರ ಚಿಕ್ಕ ಹುಡುಗ. ಅವನಿಗೆ ಈಗಲೆ ಅದರೊಳಗಿನ ಮರ್ಮವೇನು ತಿಳಿಯಬೇಕಾಗಿದೆ?"

ನನ್ನ ಗೃಹಿಣಿಯ ಈ ಮಾತಿಗೆ ನಾನು ಕಟ್ಟುನಿಟ್ಟಾದ ಉತ್ತರ ಕೊಟ್ಟೆನು. ನಮ್ಮ ಬಾಳನಿಗೆ ನಮ್ಮೂರವೇ ಬೇರೆ ಎರಡು ಹೆಣ್ಣು ಈ ಮೊದಲೇ ಬಂದಿದ್ದವು; ಅದರಿಂದ ನನಗೆ ಆಕೆಯು ತೋರಿಸಿಕೊಂಡಿದ್ದ ಆ ಶಾರಕ್ಕನ ಹೆಣ್ಣು ಮನಸ್ಸಿಗೆ ಬರಲಿಲ್ಲ. ಆದರೂ ನಾನು ಅಂದೇ ನಮ್ಮವಳಿಗೆ ಯಾವ ಮಾತನ್ನೂ ನಿಷ್ಕರ್ಷವಾಗಿ

ಹೇಳಿ ಅವಳ ಮನಸ್ಸನ್ನು ನೋಯಿಸಲಿಲ್ಲ. ಫೋಟೋಗ್ರಾಫ್ ನೋಡಿ ಕೂಡಿಸಬೇಕಾದರೆ ಎಲ್ಲವೂ ನನ್ನ ಕೈಯೊಳಗಿನದೇ. ಅದರಿಂದ ನಾನು ಆಗ ಆ ಬಗ್ಗೆ ಹೆಚ್ಚು ಪೃಚ್ಛಾಪೃಚ್ಛ ಮಾಡದೆ ನನ್ನಷ್ಟಕ್ಕೆ ನಾನೇ ಸುಮ್ಮನಾದೆನು. ಅವಳೂ ಅಡುಗೆಯ ಕೆಲಸಕ್ಕೆ ಹೊರಟು ಹೋದಳು. ನಾನು ಏಕೆಗ ಕೇಳಿದ್ದೊಂದಾದರೆ ಅವಳು ಹೇಳಿದ್ದೋ ಬೇರೆಯಾಯಿತು. ಅದರಿಂದ ನನಗೆ ಹೊಸ ಆಶ್ಚರ್ಯವೂ ಎನಿಸಿತು; ಮತ್ತು ಆಗಿನಿಂದ ನನಗೆ ನಮ್ಮ ಬಾಳನ ಲಗ್ನದ ಆ ಹೊಸ ಚಿಂತೆಯೊಂದು ಬೆನ್ನು ಹತ್ತಿತು.

'ಚಿಂತೆ-ಚಿಂತೆ' ಎಂದು ನಾನು ಎಷ್ಟು ಬಗೆಯ ಚಿಂತೆಗಳನ್ನು ಮಾಡಲಿ? ಆದರೆ ಅವೆಲ್ಲ ಚಿಂತೆಗಳ ಯೋಜನೆಯಲ್ಲಿ ಮಗನ ವಿಷಯದ ಯೋಜನೆಯು ನನ್ನ ಮುಂದೆ ದೊತ್ತೆಂದು ಬಂದು ನಿಂತಿತು. ಮುಂದೆ ಹಾಗೆ ಆದೀತು-ಹೀಗೆ ಆದೀತು ಎಂಬ ಕಲ್ಪನೆಗಳ ಯೋಗದಿಂದ ನನ್ನ ತೃಪ್ತಿ ಮನಸ್ಸಿಗೆ ಒಂದು ಬಗೆಯ ರಂಜನವಾಗಹತ್ತಿತ್ತು. ಆಗಾಮಿ ಸೌಖ್ಯದ ಬರಿಯ ಕಲ್ಪನೆಗಳಿಂದ ಕೂಡ ಯಾವ ಒಂದು ಬಗೆಯ ಸುಖವಾಗುವದೋ, ಅದರ ಶತಾಂಶದಷ್ಟಾದರೂ ಸುಖವು ಪೂರ್ವ ಕಲ್ಪಿತ ಸ್ಥಿತಿಯು ಪ್ರತ್ಯಕ್ಷ ಪ್ರಾಪ್ತವಾದ ಕಾಲಕ್ಕೆ ಅನಿಸೀತೋ ಇಲ್ಲವೋ ಎಂಬ ಬಗ್ಗೆ ನನಗೆ ಸಂದೇಹವೇ ಉಂಟಾಗಿದೆ.

ಈ ಎಲ್ಲ ಸಂಭಾಷಣೆ ನಡೆವಾಗ ಮೋರಪ್ಪನು ನನ್ನ ಬಳಿಯಲ್ಲೇ ಕುಳಿತಿದ್ದನಾದ್ದರಿಂದ ಅವನು ಅದನ್ನೆಲ್ಲ ಕೇಳಿಯೇ ಇದ್ದನು. ಆಗ ಅವನು:—"ಗುರುಭಟ್ಟರೇ, ಈಗ ಬಾಳನ ಲಗ್ನ ಮಾಡಿಬಿಡುವದೇ ಒಳ್ಳೇದು. ಹೇಗೂ ಎರಡು ಮೂರು ಹೆಣ್ಣು ಬಂದಿವೆ ಎನ್ನುತ್ತೀರಿ; ಅಂದ ಮೇಲೆ ಅವರೊಳಗಿನದೊಂದನ್ನು ಗೊತ್ತು ಮಾಡಿ ಬಿಡಿರಿ; ಹಾಗು ಬೇಗನೆ ಹೊಡಿಸಿ ಬಿಡಿರೊಮ್ಮೆ ಬೋಳಿಗಿಯ. ಅಂದರೆ ಆ ಮೇಲೆ ಅವನನ್ನು ಬೆಂಗಳೂರಿಗೆ ಕಳಿಸಲಿಕ್ಕೂ ಅನುಕೂಲವಾದೀತು. ಅಲ್ಲಿ ಚನ್ನಾಗಿ ಕಲಿತನೆಂದರೆ, ತನ್ನ ಹೆಂಡತಿಯ ಹೊಟ್ಟೆಯನ್ನು ಸಹಜವಾಗಿ ತುಂಬಿಯಾನು. ಆದಕ್ಕೇಕೆ ಯೋಚನೆ?"

"ಮೋರಪ್ಪಾ, ಅದೆಲ್ಲ ನಿಜ; ನೀವು ನಮಗೆ ಹೊರಗಿನವರಲ್ಲಾದ್ದರಿಂದ ನಿಮ್ಮೆದುರಿಗೆ ಬಿಚ್ಚಿ ಮಾತಾಡಲಿಕ್ಕೂ ಅಡ್ಡಿಯಿಲ್ಲ; ಆದರೆ ಮೋರಪ್ಪಾ, ದಿನಗಳೆಂಥವು ಬಂದಿವೆ ನೋಡಿದಿರಾ? ಚಂಪೆಯ ಲಗ್ನ ಬಂತು; ಅದನ್ನು ಮೊದಲು ಮಾಡಬೇಕೋ-ಬಾಳನ ಲಗ್ನ ಮೊದಲು ಮಾಡಬೇಕೋ? ಹುಡುಗನ ಲಗ್ನಕ್ಕೇನು ಒಂದೆರಡು ವರ್ಷ ತಡೆದರೂ ತಡೆಯಬಹುದು; ಆದರೆ ಹುಡಿಗಿಯದಂತೂ ಬಿಡಲಿಕ್ಕೆ ಬರುವದಿಲ್ಲವಷ್ಟೇ? ಇನ್ನು ದುಡ್ಡಿನ ಅಡಚಣೆಯಿಷ್ಟಿದೆಯೆಂಬದನ್ನು ಆ ಸರ್ವಾಂತರ್ಯಾಮಿಯಾದ ಭಗವಂತನೇ ಬಲ್ಲನು; ಅಂದಬಳಿಕ ನೀವು ಹೀಗೇಕೆ ಹೇಳುವಿರಿ?"

"ಗುರುಭಟ್ಟರೇ, ಚಂಪೆಯ ಲಗ್ನದ ಮಾತು ಬೇರೆ ಬಾಳನು ಚೊಚ್ಚಲ ಮಗನು. ಈತನ ಕಾರ್ಯವನ್ನೊಮ್ಮೆ ತೀರಿಸಿಕೊಂಡು ಬಿಡಿರಿ. ಹುಡುಗಿಯದೇನು?

ಇದೆ ಇನ್ನೂ ಎರಡು-ಮೂರು ವರ್ಷಗಳ ಅವಧಿ. ನನಗೆ ಹೇಳಿದರೆ ನಾನು ಕೂಡ ನೋಡೇನು ಅವಳಿಗೊಂದು ಚಲೋ ಮನೆತನವನ್ನು. ಅದರ ಚಿಂತೆ ನಿಮಗೆ ಬೇಡ. ಆಗೋ, ಬಂದೇ ಬಿಟ್ಟಿತು ಮಾರ್ಗಶಿರ ಮಾಸ. ಶ್ರೀ ಕೃಷ್ಣಪರಮಾತ್ಮ ನಂದಂತೆ "ಮಾಸಾನಾಂ ಮಾರ್ಗಶೀರ್ಷೋsಸ್ಮಿ...." ಇದು ಲಗ್ನಾದಿ ಕಾರ್ಯ ಗಳಿಗೆ ಒಳ್ಳೇ ಸಕಾಲ. ಮಾಘಾದಿ ಮಾಸಗಳಿಗಿಂತಲೂ ವಿವಾಹಕಾರ್ಯಕ್ಕೆ ಈ ಮಾರ್ಗಶೀರ್ಷ ಮಾಸವೇ ಹೆಚ್ಚು ಅನುಕೂಲವಾದದ್ದು. ನೋಡಿರಿ, ಸಾಧಿಸಿದರೆ ಗಡಬಿಡಿಯಲ್ಲಿ ಗಡಬಿಡಿಯಾಗಿ ಹೋಗಲಿ."

ಮೋರಪ್ಪನ ಆ ವಿಚಾರವು ನನಗೂ ಸಮ್ಮತವಾಯಿತು; ಆದರೆ ಹಾಗೆ ಸಮ್ಮತ ವಾಯಿತೆಂದರೇನು? ಆ ಚಿಂತೆ-ಈ ಚಿಂತೆಗಳ ಮಹಾಘೋರವನ್ನು ಮಾತ್ರ ನನ್ನ ಬೆನ್ನಿಗೆ ಕಟ್ಟಿಕೊಂಡಂತಾಯಿತು. ಈ ಬಗೆಯ ಮಾತು-ಕಥೆಗಳಾದ ಬಳಿಕ ಮೋ-ರಪ್ಪನು ಹೊರಗೆ ಹೋಗಿ ಬರುವ ಸಲುವಾಗಿ ತಲೆಗೆ ಪಾವಾಡವನ್ನು ಸುತ್ತುವರಿಯ ತೊಡಗಿದನು; ನಾನೂ ಹೊಸದೊಂದು ಚಿಮಟಿಗೆ ನಸ್ಯವನ್ನು ಮಿದುಳಿಗೆ ಹತ್ತುವ ಹಾಗೆ ಒಳ್ಳೇ ಕಸುವಿನಿಂದ ಸೇದಿ, ಮತ್ತೆ ವಿಚಾರಮಗ್ನನಾದೆನು ಹಲವು ಬಗೆಯ ವಿಚಾರಗಳನ್ನು ಮಾಡುತ್ತಿರಲಿಕ್ಕೆ ನಮ್ಮೂರ ಸರಾಫ ನಾನಾರಾಯರ ಮಗಳ ಘಟಿ ತಾರ್ಥವು ನನ್ನ ಜ್ಞಾಪಕಕ್ಕೆ ಬಂದಿತು. ಕೂಡಲೆ ಅದನ್ನು ನಮ್ಮ ಬಾಳನ ಜಾತಕ ದೊಡನೆ ಹೋಲಿಸಿಯೂ ನೋಡಿದ್ದಾಯಿತು. ನಾನಾರಾಯರ ಹುಡುಗಿಯು ಹತ್ತು ಜನ ಹೆಣ್ಣುಹುಡುಗಿಯರಂತೆ ಕಣ್ಣು-ಮೂಗಿನಿಂದ ಚೆನ್ನಾಗಿದ್ದಿತು. 'ಆ ಹುಡುಗಿ ಯನ್ನೇ ಗೊತ್ತು ಮಾಡಿ ಬಾಳನ ಲಗ್ನವನ್ನೊಮ್ಮೆ ಹೊಡಿಸಿ ಬಿಡಬೇಕು; ಹಾಗು ಬಾಳನೊಡನೆ ನಾವೆಲ್ಲರೂ ಬೆಂಗಳೂರಿಗೆ ಹೋಗಿಬಿಡಬೇಕು. ಅಲ್ಲಿಯೇ ನಮ್ಮ ಚರಿತಾರ್ಥವು ಚೆನ್ನಾಗಿ ನಡೆದೀತು; ಹುಡುಗನ ವಿದ್ಯಾಭ್ಯಾಸವೂ ಆದೀತು; ಹಾಗು ಚಂಪೆಗೆ ಯಾವುದೊಂದು ಸುಸ್ಥಳವು, ಅವಳ ಪ್ರಾರಬ್ಧಯೋಗವು ಬಲ ವತ್ತರವಾಗಿದ್ದರೆ ದೊರೆತೀತು. ಒಬ್ಬ ಹುಡುಗನನ್ನೇ ಆ ವಿಶಾಲವಾದ ಪಟ್ಟಣಕ್ಕೆ ಕಳಿಸುವದೆಲ್ಲಿ? ಎಲ್ಲರೂ ಅಲ್ಲಿಗೇ ಹೊರಟು ಹೋಗಬೇಕು. ಕೆಲ ದಿನ ತೊಂದರೆ ಯಾದರೆ ಆಗಲೊಲ್ಲದೇಕೆ; ಅದು ಸ್ವಗ್ರಾಮದಲ್ಲಾಗುವದಕ್ಕಿಂತ ಪರವೂರಲ್ಲಾದರೆ ತಪ್ಪಲ್ಲ,' ಎಂಬ ಯೋಚನೆಯು ದೃಢವಾಯಿತು

ಆ ಬೇತನ್ನು ನಾನು ನನ್ನ ಮನಸ್ಸಿನಿಂದಲೇ ಮಾಡಿದ್ದೆನು; ಆದರೆ ಭವಿತವ್ಯ ವನ್ನು ಬಲ್ಲವರಾರು? ನಮ್ಮಿಷ್ಟಕ್ಕೆ ನಾವು ಮನಸಿನಲ್ಲಿ ಮಂಡಿಗೆ ಮಾಡಿದರೆ ಗೋದಿಯ ದುಡ್ಡು ಕೊಡುವವರಾರು? ಈ ಅನುಭವವು ಒಮ್ಮೆಯಲ್ಲ, ಎರಡು ಸಾರೆಯಲ್ಲ, ಹಲವು ಸಾರೆ ಎಲ್ಲರಿಗೂ ಬರುತ್ತಿದ್ದರೂ, ತ್ರಸ್ತವಾದ ಮನಸ್ಸಿಗೆ ಅಂಥ ಆ ಹುರುಳಿ ಲ್ಲದ ಬೇತಿನಿಂದಲೂ ಒಂದು ಬಗೆಯ ಹುರುಪು ಉಂಟಾಗುತ್ತಿರುತ್ತದೆ; ನಾಲ್ಕೂ ಕಡೆಯಿಂದ ಭುಗಿಭುಗಿಲೆಂದು ಏಳುತ್ತಿದ್ದ ಕಡು ಚಿಂತೆಯ ಜ್ವಾಲೆಗಳೆಲ್ಲವೂ ಒಮ್ಮೆಲೆ ಮಾಯವಾಗಿ, ಅದೊಂದೇ ಹೊಸ ಚಿಂತೆಯು ಬಾಕಿಯ ಉಳಿಯುತ್ತದೆ; ಮತ್ತು

ಹಾಗಾಯಿತೆಂದರೆ ನಾನನ್ನುವಂತೆ ಅದೊಂದು ರೀತಿಯಿಂದ ವಿಹಿತವೇ ಎನಿಸುವದು. ನನ್ನ ಮನಸ್ಸಿನಲ್ಲಿ ಆ ಹೊಸ ಬೇತನ್ನು ದೃಢೀಕರಿಸಿಕೊಂಡು ಕೂಡಲೆ ನಾನು ಚಟಕ್ಕನೆ ಕುಳಿತ ಸ್ಥಳದಿಂದೆದ್ದು ಒಳಗೆ ಹೋದೆನು; ಹಾಗು ಮನೆಗೆಲಸಗಳಲ್ಲಿ ನಿರತಳಾಗಿದ್ದ ನನ್ನ ಗೃಹಿಣಿಯನ್ನು ಕುರಿತು:— "ನಿನ್ನ ಅಂಬೋಣದಂತೆ ಇದೇ ವರ್ಷ ಹುಡುಗನ ಲಗ್ನ ಮಾಡಬೇಕು; ಬಳಿಕ ನಾವೆಲ್ಲರೂ ಕೂಡಿಯೇ ಬೆಂಗಳೂರಿಗೆ ಹೋಗಿರಬೇಕು. ಬೆಂಗಳೂರು ದೊಡ್ಡ ಪಟ್ಟಣವು; ಅಲ್ಲಿ ವಿದ್ಯಾಭ್ಯಾಸಕ್ಕೆ ತಕ್ಕ ಅನುಕೂಲತೆಗಳಿರುತ್ತವೆ; ಮತ್ತು ಅಲ್ಲಿ ಚಂಪೆಯ ವರಾನ್ವೇಷಣಕ್ಕೂ ಹೆಚ್ಚು ಉಪಯೋಗವಾದೀತು" ಎಂಬ ಶಬ್ದಗಳು ನನ್ನ ಬಾಯಿಂದ ಹೊರಟವು ಮಾತ್ರ; ಕೂಡಲೆ ಅದರಿಂದ ಅವಳಿಗಾದ ಆನಂದವನ್ನು ವರ್ಣಿಸಲಳವಲ್ಲ ವಧುವೆಲ್ಲಿಯದು? ಲಗ್ನವು ಯಾವ ತಿಂಗಳಲ್ಲಿ; ಮತ್ತು ಎಲ್ಲಿ ಆಗತಕ್ಕದ್ದು? ಇದನ್ನೆಲ್ಲ ಕೇಳಿ ತಿಳಿಯಬೇಕೆಂಬ ಅರಿವು ಕೂಡ ಅವಳಿಗುಳಿಯಲಿಲ್ಲ.

"ಈಗನ್ನುವದು ನಿಜವೇ? ನಮ್ಮ ಬಾಳನ ಲಗ್ನವು ನಿಶ್ಚಯಿಸಲ್ಪಟ್ಟಿತೇ? ಹಾಗಾದರೆ ಕಳಿಸಿರಿ-ಅಪ್ಪನನ್ನು ಕರೆಯಲಿಕ್ಕೆ. ಅವಳು ಬಂದ ಕೂಡಲೆ ನಾವು ಸಂವರಣೆಗೆ ಪ್ರಾರಂಭಿಸುತ್ತೇವೆ. ನನ್ನ ಚೊಚ್ಚಲ ಮಗನ ಲಗ್ನಕಾರ್ಯವಿದು. ಆದುದರಿಂದ ನನ್ನ ಕಡೆಯ ಬಳಗದವರೆಲ್ಲರೂ ಬಂದೇ ತೀರಬೇಕು." ಎಂಬ ಉದ್ಗಾರಗಳನ್ನು ಅವಳು ಒಳ್ಳೇ ಲಗುಬಗೆಯಿಂದ ಹೊರಹೊರಡಿಸಲು, ನಾನು ಒಳ್ಳೇ ಚಮತ್ಕಾರದ ದನಿಯಿಂದ—"ಅಹುದರೀ, ನಿಮ್ಮ ಮಾತೆಲ್ಲ ನಿಜವೇ; ಆದರೆ ತುಸ ಸಮಾಧಾನದಿಂದ ಕೇಳಿಕೊಂಡಿರೋ-ಇಲ್ಲವೋ? ಮೊದಲು ಕನ್ಯೆಯೆಲ್ಲಿಯದು? ಬಳಿಕ ಮುಹೂರ್ತವಾವುದು? ಇವೆಲ್ಲ ಗೊತ್ತಾದವೆಂದರೆ, ಆ ಮೇಲೆ ಎಲ್ಲಕ್ಕೂ ಮೊದಲು ನಿಮ್ಮಮ್ಮನನ್ನು ಕರೆತಂದು ಆ ಹಂದರದ ಮಧ್ಯದಲ್ಲಿ ನಿಲ್ಲಿಸೋಣವಂತೆ! ಅಂದರಾಯಿತೇ? ಅಗೋ, ಆ ಕೋಟೇಬೈಲ ಸರಾಫ ನಾನಾರಾಯರನ್ನು ಬಲ್ಲೆಯಷ್ಟೆ? ಅವರ ಚಿಕ್ಕ ಮಗಳು ಹೇಗಿರುತ್ತಾಳೆ? ನಿನ್ನ ಮನಸ್ಸಿಗೆ ಬಂದರೆ ಅವಳನ್ನೇ ನಿನಗೆ ಸೊಸೆಯೆಂದು ಮಾಡಿಕೊಳ್ಳುವ ವಿಚಾರವಿದೆ."

"ಯಾರಂದಿರಿ, ಆ ಚಿನಿವಾಲರ ನಾನಪ್ಪ-ರಾಧಾಬಾಯಿಯ ಗಂಡನೆಂದಿರಾ? ಅವರ ಮರಿಚಲು ಮಗಳಾದ ಶಾರದೆಯೇನು?"

"ಅಹುದು; ಆ ನಾನಾರಾಯನ ಮರಿಚಲ ಮಗಳೇ. ಅವಳ ಹೆಸರು ಅದೇ ಆಗಿದ್ದೀತು"

"ಆದರೆ ಆತನು ಹುಟ್ಟಾ ಚಿನಿವಾಲನು; ದುಡ್ಡು ಖರ್ಚುಮಾಡುವದೆಂದರೆ ಆತನ ಜೀವದ ಮುತ್ತೇ ಬರುವದು. ಅವರೊಡನೆ ಸಂಬಂಧ ಬೆಳಿಸಿದರೆ ನಮ್ಮ ಉಮೇದಿಯಂತೆ ಒಂದು ಕೊಟ್ಟಾರೇ-ತಗೊಂಡಾರೇ! ಮಾನವೇ-ಮರ್ಯಾದೆಯೇ!! ಚೌಕರಾಣಿ ಫಲಾರವಾದಿತೇ! ಏನಾದೀತು? ಅವರ ಹೆಂಡತಿಯಾದ ರಾಧಕ್ಕನೇನೋ ದೊಡ್ಡ ಮನುಷ್ಯಳು. ಮಾಡಿ-ಮಟ್ಟಿದ ಹೆಣ್ಣುಮಗಳವಳು; ಆದರೆ ಆಕೆಯ ಗಂಡ

ನಾದ ಆ ಚಿನಿವಾಲನ ಮುಂದೆ ಆಕೆಯ ಆಟವೇನು ನಡೆಯಬೇಕಾಗಿದೆ? ಆತನೇನು ಖರ್ಚು ಮಾಡುವನೋ-ನನ್ನ ಇಚ್ಛೆಗಳವೇನು ಈಡೇರುವವೊ?..........."

ನಾನು ಆಕೆಯನ್ನು ಮುಂದೆ ಮಾತಾಡಗೊಡದೆ-ನಿನ್ನ ಇಚ್ಛೆ-ನಿರಿಚ್ಛೆಗಳ ಹಂಬಲವು ಒತ್ತಟ್ಟಿಗಿರಲಿ; ಅದಕ್ಕಾಗಿ ನೀನು ಮೊದಲು ಚಡಪಡಿಸಬೇಡ. ಹುಡುಗಿಯು ಚೆನ್ನಾಗಿರುವಳೇ? ಅವಳು ನಿನಗೆ ಸೊಸೆಯಾಗಲಿಕ್ಕೆ ತಕ್ಕವಳಾಗಿರುವಳೇ? ಇದನ್ನು ಮೊದಲು ಹೇಳು; ಆ ಮೇಲೆ ಮಿಕ್ಕ ಸಂಗತಿ, ಎನ್ನಲು, "ಹುಡುಗೆಯು ಚಲುವೆಯಾಗಿರುವಳು. ಕಣ್ಣು ಮೂಗಿನಿಂದ ಚೆನ್ನಾಗಿದ್ದಾಳೆ. ಆ ಹುಡುಗಿಯ ವಿಷಯವಾಗಿ ನನ್ನ ತಕರಾರೇ ಇಲ್ಲ; ಆದರೆ ಮಾನ-ಮರ್ಯಾದೆ, ಕೊಡ-ತೆಗೆದುಕೊಳ್ಳುವದು ಸರಿಯಾಗಿ ಆಯಿತೆಂದರೆ, ಅಳಿಯನಿಗೆ ಸಾಕಷ್ಟು ಕೊಟ್ಟರೆಂದರೆ ಮತ್ತು ಎಲ್ಲ ಹಬ್ಬದೂಟಗಳನ್ನು ಉಣಿಸಿದರೆಂದರೆ ಆಯಿತು; ಆ ಮೇಲೆ ನನ್ನ ಅಡ್ಡಿಯೇನೂ ಇರುವದಿಲ್ಲ."

ನನ್ನ ಗೃಹಿಣಿಯ ಈ ಮಾತಿನ ಸಂಬಂಧವಾಗಿ ನಾನು ಅವಳೊಡನೆ ಎಷ್ಟೋ ಹೊತ್ತಿನ ವರೆಗೆ ಮಾತಾಡಿದೆನು. ಬಳಿಕ ನಾನಾರಾಯನ ಸ್ನೇಹಿತರ ಮುಖಾಂತರ ಅವರಿಗೂ ಈ ನಮ್ಮ ಬೇತನ್ನು ತಿಳಿಸಿದೆನು. ಅವರೆಲ್ಲರ ಸಲಹೆಯ ಮೇರೆಗೆ ನಮ್ಮ ಬಾಳನ ಲಗ್ನವು ನಿಶ್ಚಿತವಾಯಿತು. ನಿಶ್ಚಯದ ಶಾಸ್ತ್ರವೂ ಆಯಿತು. ಮುಹೂರ್ತವು ಮಾರ್ಗಶಿರದಲ್ಲೇ ಗೊತ್ತು ಮಾಡಲ್ಪಟ್ಟಿತು. ಇವೆಲ್ಲವೂ ಯಥಾಸ್ಥಿತಗಳಾದ ಮೇಲೆ ನನಗೆ ಬಂತು ಮತ್ತೆ ನಮ್ಮ ಬಡತನದ ಚಿಂತೆಯು; ನಾಳೆ ಮಧ್ಯಾಹ್ನವು ಹೇಗೆ ನೀಗುವದೋ ಎಂಬ ಭ್ರಾಂತಿಯು. ಆ ಚಿಂತೆಯು ಅಹೋರಾತ್ರಿಯಲ್ಲಿ ದೂತ್ತೆಂದು ನನ್ನ ಮುಂದೆ ನಿಂತಿರಲು, ಸಾಲದ್ದಕ್ಕೆ ಈ ಲಗ್ನಕಾರ್ಯವನ್ನು ನಿಶ್ಚಯಿಸಿ, ಇದೊಂದು ಹೊಸ ಚಿಂತೆಯನ್ನು ಕಟ್ಟಿಕೊಂಡಿದ್ದೆನು. ಆಗ ನನ್ನ ಫಜೀತಿಯು ಎಷ್ಟಾಯಿತೆಂದು ಹೇಳಲಿ? ಅದಕ್ಕಾಗಿ ಹಿರಿಯರು ಜೀವದಾಶೆಗೆಂದು ಬೇರೆಯಾಗಿ ಹುಗಿದಿಟ್ಟಿದ್ದ ಐನೂರರ ತಂಬಿಗೆಯ ಮೇಲೆ ಇದುವರೆಗೆಂದೂ ತಿರುಗದ ನನ್ನ ದೃಷ್ಟಿಯು ತಿರುಗಿತು. ಆ ಪ್ರಸಂಗವನ್ನು ನೆನಿಸಿದರೆ ಈಗಲೂ ನನ್ನ ಮೈ ಜುಮ್ಮೆನ್ನುತ್ತದೆ! ಆ ಐನೂರರಲ್ಲಿ ಮುನ್ನೂರು ರೂಪಾಯಿ ಬಾಳನ ಲಗ್ನಕ್ಕೆ ಖರ್ಚು ಮಾಡುವದನ್ನೂ, ಬಾಕಿ ಉಳಿಯುವ ಇನ್ನೂರನ್ನು ಬೆಂಗಳೂರಿಗೆ ಹೋಗುವಾಗ ಸಂಗಡ ಒಯ್ಯುವದನ್ನೂ ನಾನು ನನ್ನ ಮನಸ್ಸಿನಿಂದಲೇ ಗೊತ್ತು ಮಾಡಿಕೊಂಡು, ನನ್ನವಳನ್ನು ಕುರಿತು:--"ಎಲ್ಲವೂ ನಿಶ್ಚಿತವಾಯಿತು; ಆದರೆ ಲಗ್ನಖರ್ಚಿನ ವ್ಯವಸ್ಥೆಯನ್ನೇನು ಮಾಡುವದು?" ಎಂದು ಪ್ರಶ್ನ ಮಾಡಿದೆನು. ಆಕೆಯಿಂದ ಉತ್ತರವೇ ಹೊರಡದಾಗಲು, ನಾನು ಈ ಮೊದಲೇ ಗೊತ್ತು ಮಾಡಿಕೊಂಡಿದ್ದ ನನ್ನ ಮನೋಗತವನ್ನು ಅವಳಿಗೆ ನಿವೇದಿಸಿದೆನು; ಆದರೆ ಆ ಹಂಚಿಕೆಯು ಅವಳಿಗೆ ಸಮ್ಮತವಾಗಲಿಲ್ಲ. ಆದರೂ ಮದುಮಗನ ತಾಯಿಯೆಂದು ಯಾವಾಗಲೊಮ್ಮೆ ಮೆರಿಸಿಕೊಂಡೇನೋ ಎಂಬ ಹುಚ್ಚು ಆಶೆಗೆ ಬಲಿಬಿದ್ದು, ಅವಳು ಬೇರೆ ಉಪಾಯಗಾಣದೆ ನನ್ನ ಮಾತಿಗೆ ಒಡಂಬಟ್ಟಳು.

ಬಳಿಕ ಲಗ್ನದ ಸಿದ್ಧತೆಯಾಗಲಿಕ್ಕೆ ತಡವೇಕಾದೀತು? ಅಕ್ಕಿ ಬಂದವು; ಬೇಳೆ-ಬೆಲ್ಲಗಳು ಬಂದವು. ಆರವಿ-ಅಂಚಡಿಗಳ ಖರೀದಿಯಾಯಿತು; ಹಾಗು ತಿಂದು ಧ್ವಂಸ ಮಾಡಲಿಕ್ಕೆ ಸಾಕಷ್ಟು ಜನರೂ ಕಲೆತರು. ಮುಂದೆ ನಾಲ್ಕೇ ದಿನಗಳಲ್ಲಿ ನಮ್ಮ ಚಿರಂಜೀವ ಬಾಳನೊಮ್ಮೆ ಚತುರ್ಭುಜನಾಗಿಬಿಟ್ಟನು. ನನ್ನ ಗೃಹಿಣಿಯು ಆಗಿನ ಮೆರವಣಿಗೆಯೂ ವರಪಿತನೆಂದು ಬೀಗರು-ಬಿಜ್ಜರು ನನಗೆ ಮಾಡಿದ ಮಾನ-ಮರ್ಯಾದೆಯೂ ಇವನ್ನೆಲ್ಲ ಬಣ್ಣಿಸುತ್ತ ಕುಳಿತರೆ ವಾಚಕ ವರ್ಗವು ಘೊಳ್ಳೆಂದು ನಕ್ಕು ಬಿಟ್ಟೀತು! ಕಾರಣ ಅದನ್ನೆಲ್ಲ ಹೇಳುವದಿಲ್ಲ. ವಿಶೇಷ ಪ್ರಕಾಶದ ನ್ಯಾಯ-ನಿಗದಿಗಳಾಗದಂತೆ ನಿರ್ವಿಘ್ನವಾಗಿ ಲಗ್ನಕಾರ್ಯವು ಬಗೆ ಹರಿಯಿತು. ನಾಲ್ಕಾರು ದಿನ ಹೋಳಿಗೆ ತುಪ್ಪಗಳು ಹಾರಾಡಿ ಹೋದವು. ಆಪ್ತೇಷ್ಟವರ್ಗವು ಇನ್ನೂ ತಳಕಿತ್ತುವ ಬೇತಿನಲ್ಲಿರಲಿಲ್ಲ. ಆದದ್ದೆಲ್ಲ ಯಥಾಯೋಗ್ಯವೇ ಆಯಿತು; ಆದರೆ ನನ್ನ ಜೀವದ ಚಿಂತೆಯು ಮಾತ್ರ ಎಳ್ಳಷ್ಟೂ ಕಡಿಮೆಯಾಗದೆ, ದಿನಮೇಕರೀತಿಯಿಂದ ಹೆಚ್ಚುತ್ತಲೇ ಇದ್ದಿತು. ಇನ್ನು ಮುಂದೆ ಏನು ಮಾಡಬೇಕು? ಇಷ್ಟೆಲ್ಲ ಜನರ ಉದರನಿರ್ವಾಹವನ್ನು ಹೇಗೆ ಸಾಗಿಸಬೇಕು? ಎಂದು ನಾನು ಹಗಲಿರುಳೂ ಬೆಯ್ಯಹತ್ತಿದೆನು. ಬೆಂಗಳೂರಿಗೆ ಹೊರಡುವ ಬೇತನ್ನೇನೋ ಮಾಡಿದ್ದಾಯಿತು. ಆದರಿಂದ ಊರವರು-ಪರಊರವರು, ಮನೆಯುವರು-ನೆರೆಹೊರೆಯುವರು, ಪರಿಚಿತರು-ಅಪರಿಚಿತರು ಎಲ್ಲರೂ ನನ್ನನ್ನು ಒಂದೇ ಪ್ರಶ್ನೆ ಮಾಡತೊಡಗಿದರು. ಅದೇನಂದರೆ:—"ಗುರುಭಟ್ಟರೇ, ಇನ್ನು ತಡವೇಕೆ? ಬಾಳನನ್ನು ಬೆಂಗಳೂರ ಹೈಸ್ಕೂಲಿಗೆ ದಾಖಲ ಮಾಡಿಸಿಬಿಡಿರಿ. ಅವನು ಒಳ್ಳೇ ಚುರುಕು ಬುದ್ಧಿಯುವನಾದುದರಿಂದ ಅಲ್ಲಿ ತೀವ್ರವೇ ಕಲಿತು ದೊಡ್ಡ ಹುದ್ದೇದಾರನಾದಾನು-ಹುದ್ದೇದಾರ." ನಾನು ಅವರೆಲ್ಲರ ಶುಭಾಶೀರ್ವಾದವು ಫಲಿಸುವದಕ್ಕೆಂದು ಈ ಮೊದಲೇ ಬೆಂಗಳೂರಿಗೆ ಹೊರಡುವದನ್ನು ಗೊತ್ತೇಪಡಿಸಿದ್ದೆನು.

ನನ್ನ ಹಿತಚಿಂತಕರಲ್ಲಿ ಕೆಲವರು ಒಳ್ಳೇ ಕಳಕಳಿಯಿಂದ ನನ್ನನ್ನು ಕುರಿತು:—"ಗುರುಭಟ್ಟಾ, ಹುಡುಗನನ್ನು ಸದ್ಯಕ್ಕೆ ಅಲ್ಲಿ ಯಾರಲ್ಲಾದರೂ ಇಡು; ಹಾಗು ನೀವೆಲ್ಲರೂ ಇಲ್ಲಿಯೇ ಇರ್ರಿ. ನಿಮ್ಮ ಬಾಳನಿಗೆ ಎಲ್ಲಿಯಾದರೂ ಚಾಕರಿ ಹತ್ತಿ ನಾಲ್ಕು ದುಡ್ಡು ಗಳಿಸಹತ್ತಿದನೆಂದರೆ, ಆ ಮೇಲೆ ಬೇಕಾದರೆ ನೀವೆಲ್ಲರೂ ಅಲ್ಲಿಗೆ ಕಾಯಮುವಾಗಿಯೇ ಹೋಗುವಿರಂತೆ." ಎಂದು ಹೇಳುತ್ತಿದ್ದರು. ಅವರ ಈ ಆಲೋಚನೆಯೇನೋ ಯೋಗ್ಯವಾದದ್ದೇ; ಆದರೆ ನನ್ನ ಮನೆತನದ ಅಂತಃಸ್ಥಿತಿಯು ಪಾಪ! ಅವರಿಗೇನು ಗೊತ್ತು? ಹುಡುಗನ ಅಭ್ಯಾಸದ ನೆವದಿಂದಲಾದರೂ ನನಗೆ ಈ ಊರು ಬಿಡುವ ಯೋಗವೊದಗುವದೋ ಏನೋ ನೋಡಬೇಕೆಂಬ ವಿಚಾರವು ನನ್ನದು; ಯಾಕಂದರೆ ಈ ನಮ್ಮ ಹಾಳು ಸರ್ಪಪುರಿಗಿಂತ ಬೆಂಗಳೂರ ಪಟ್ಟಣದಲ್ಲಿ ನನಗೆ ಕೆಲ ದುಡ್ಡು ಹೆಚ್ಚು ದೊರಕೀತೆಂದೂ, ನನ್ನ ಖರ್ಚನ್ನು ಇಲ್ಲಿಗಿಂತ ಬೇಕಾದ ಹಾಗೆ ಕಡಿಮೆ ಮಾಡಲಿಕ್ಕೆ ಬಂದೀತೆಂದೂ ನನ್ನ ಭರವಸೆ; ಅಲ್ಲದೆ ಆ

ಪಟ್ಟಣಕ್ಕೆ ಹೋದ ಬಳಿಕ:—"ನಾನಾಗಿ ಯಾರಲ್ಲಿಯೂ ಹೋಗುವ ಹಾಗಿಲ್ಲ" ಎಂಬೀ ನನ್ನ ಹುಚ್ಚು ನಿಯಮವನ್ನು ಮುರಿಯಲಿಕ್ಕೂ ಆ ಪರಸ್ಥಳದಲ್ಲಿ ನನಗೆ ತೊಂದರೆಯಾಗಲಾರದು. ಇವೆಲ್ಲ ನನ್ನ ಮನಸ್ಸಿನ ಆಲೋಚನೆಗಳು ನನ್ನ ಗೃಹಿಣಿಗೂ ಮಾನ್ಯವಾಗಿದ್ದವು. ಯಾಕಂದರೆ, ಆಕೆಯೂ ಇತ್ತೀಚೆಗೆ ನಮ್ಮ ಸರ್ಪಪುರಿಗೆ ಬೇಸತ್ತಿದ್ದಳು. ಬೆಂಗಳೂರು ಪಟ್ಣವೆಂದರೆ ಹೇಗಿರುತ್ತದೆಂಬದನ್ನು ಒಮ್ಮೆಯಾದರೂ ಕಣ್ಣುಟ್ಟ ನೋಡುವ ಹಾಗು ಅಲ್ಲಿಯ ಹೆಂಗಸರಾದರೂ ಹೇಗಿರುತ್ತಾರೆಂಬದರ ಅನುಭವ ಪಡೆಯುವ ಅವಳ ಇಚ್ಛೆಗಳು ಹುಡುಗನ ಶಿಕ್ಷಣದ ನೆವದಿಂದಲಾದರೂ ಈಡೇರುವಂತಿದ್ದವು.

ಇನ್ನು ಬಾಳನೇ ಮೊದಲಾದ ನಮ್ಮ ಮನೆಯ ಹುಡುಗರೆಲ್ಲರೂ ಬೆಂಗಳೂರಿಗೆ ಯಾವಾಗ ಹೊರಡುವದೆಂದು ಪ್ರತಿನಿತ್ಯ ಸಂಜೆ-ಮುಂಜಾವುಗಳಲ್ಲಿ ನನ್ನನ್ನು ಕೇಳಿ-ಕೇಳಿ ತಲೆ ಬೇಸರಿಡಿಸಿದ್ದವು. ತಾನು ಬೆಂಗಳೂರಿಗೆ ಯಾವಾಗ ಹೋದೇನೋ ಹಾಗು ಈ ಮಂದಿಯ ಮನೆಯ ಊಟದ ನಿಮಂತ್ರಣಗಳೂ ಒಂದು ದುಡ್ಡಿಗಾಗಿ ಮಂದಿಯ ಮನೆಗೆ ಹೋಗಿ ಕೈ ಒಡ್ಡುವ ಪ್ರಸಂಗಗಳೂ ಯಾವಾಗ ತಪ್ಪುವವೋ ಎಂದು ಆತನು ಯಾವಾಗಲೂ ಯೋಚಿಸುತ್ತಿದ್ದನು. ಬೆಂಗಳೂರ ಪಟ್ಟಣದಲ್ಲಿ ವೈದಿಕ ಧಂದೆಯೂ ವೈದಿಕರೂ ಇರಲಾರರೆಂದೇ ಆ ಪೋರನ ಭಾವನೆ.

ನಮ್ಮ ಆಪ್ತೇಷ್ಟರು, ಬಂಧು-ಬಳಗದವರು ಇವರು ನಮ್ಮನ್ನು ಸರ್ಪಪುರಿ ಬಿಟ್ಟು ಹೋಗಗೊಡದಾದರು; ಆದರೆ ನಾನು—ಅಪ್ಪಗಳಿರಾ, ಹುಡುಗನ ಅಭ್ಯಾಸವನ್ನು ಮಾಡಿಸಬೇಡವೇ? ನಾವು ಖುದ್ದಾಗಿ ಹೋಗದ ಹೊರತು ಆತನ ಹೊಟ್ಟೆಬಟ್ಟೆಗಳ ಹಾಗು ಶಿಕ್ಷಣದ ಕಡೆಗೆ ಅಷ್ಟೊಂದು ನಿಗಾ ವಹಿಸುವವರಾರು? ಮುಂತಾದ ಸಂಗತಿಗಳನ್ನು ಅವರಿಗೆ ಚೆನ್ನಾಗಿ ಒಡೆದು ಹೇಳಿದ ಬಳಿಕ ಅವರು "ಹಾಗಾದರೆ ಕೆಲ ದಿನಗಳ ಮಟ್ಟಿಗೆ ಹೋಗಿ ಬನ್ನಿರಿ" ಎಂದು ನಿರುಪಾಯರಾಗಿ ಹೇಳುತ್ತಿದ್ದರು. ಇದರಂತೆ ನಾನು ಬೇರೆ ಬೇರೆ ಜನರಿಗೆ ಅವರವರ ಮನಸ್ಸು ಒಗ್ಗುವ ಹಾಗೆ ಹೇಳಿ ಸಮ್ಮತಿ ಪಡೆದು ಹೊರಡುವದನ್ನು ನಿಶ್ಚಯಿಸಿದೆನು. ಒಳ್ಳೇ ಪ್ರಯಾಣ ಮುಹೂರ್ತವನ್ನೂ ಗೊತ್ತುಪಡಿಸಿದ್ದಾಯಿತು, ಹಾಗು ಬೆಂಗಳೂರಿಗೆ ಹೋಗುವವರೊಡನೆ ಅಲ್ಲಿಯ ನಮ್ಮ ಯಜಮಾನರಿಗೆ ಮುಂಗಡವಾಗಿ ಪತ್ರವನ್ನೂ ಬರೆಯಿಸಿದ್ದಾಯಿತು.

ಇನ್ನು ಪಟ್ಟಣವಾಸದಿಂದ ನಮಗೆ ಲಾಭವಾಗುವದೋ-ಹಾನಿಯಾಗುವದೋ ಎಂಬ ಕಲ್ಪನೆಯು ನನ್ನ ಮನಸ್ಸಿನಲ್ಲಿ ಪ್ರಾದುರ್ಭವಿಸಿತು. ಆ ಪಟ್ಟಣಕ್ಕೆ ಹೊಟ್ಟೆ ತುಂಬಿಕೊಳ್ಳುವ ನೆವದಿಂದ, ವಿದ್ಯೆಕಲಿಸುವ ಆಮಿಷದಿಂದ, ನೌಕರಿ ದೊರಕಿಸುವ ಹಂಬಲದಿಂದ, ದುಡ್ಡು ಗಳಿಸಿ ಶ್ರೀಮಂತರಾಗಬೇಕೆಂಬ ಹವ್ಯಾಸದಿಂದ ಹಾಗು ಪ್ರಸಿದ್ಧಿ ಪಡೆಯಬೇಕೆಂಬ ಆತುರದಿಂದ ನನ್ನಂತಹರೆಷ್ಟೋ ಜನರು ತಂಡಗಟ್ಟಿ ಹೋಗುತ್ತಿರುವರು. ಅವರೆಲ್ಲರಿಗೆ ಆ ಪಟ್ಟಣವಾಸವು ಅಮೃತಮಯವಾಗುವದೋ-ವಿಷಪೂರ್ಣವಾಗುವದೊ? ಸ್ವರ್ಗದಂತೆ ತೋರುವದೋ-ನರಕವಾಗಿ ಪರಿಣಮಿಸು

ವದೋ? ಅಥವಾ ದೇವತೆಯಂತೆ ಮನೋವಾಂಛಿತ ವರಗಳನ್ನು ಕೊಡುವದೊ-ರಾಕ್ಷಸರಂತೆ ಗೋಣು ಮುರಿದು ತಿಂದುಬಿಡುವದೋ ಅದಾರು ಹೇಳಬೇಕು? ಸುಸ್ಥಿತಿಯಲ್ಲಿರುವಾಗ ಮನುಷ್ಯನು ತಾನಿದ್ದ ಹಳ್ಳಿಯ ಪಾಡಿನಲ್ಲಿಯೇ ಸುಖವಾಗಿರುತ್ತಾನೆ. ಆಗ ಸ್ಥಳಾಂತರ ಮಾಡಬೇಕೆನ್ನುವ ಕಲ್ಪನೆಯು ಅವನಿಗುಂಟಾಗುವದಿಲ್ಲ; ಆದರೆ ಅವನಿಗೆ ಯಾವುದೊಂದು ಬಗೆಯ ಕುಂದು-ಕೊರತೆಯು ತೋರಲು, ಅಂದರೆ ಆತನ ಮೊದಲಿನ ಸುಸ್ಥಿತಿಯು ಕೆಟ್ಟು ಹೋಗಲು, ಅವನು ತನ್ನ ಮೂಲ ನಿವಾಸ ಸ್ಥಾನವನ್ನು ಬಿಟ್ಟು, ಪಟ್ಣ ಸೇರುವ ಇಚ್ಛೆಯನ್ನು ಮಾಡುತ್ತಾನೆಂಬದು ಖಂಡಿತವು.

---

## ೪ ಗ್ರಾಮತ್ಯಾಗದಂತಹ ದುಃಖವಿನ್ನೊಂದಿಲ್ಲ.



ಲಿನ ಹುಣ್ಣಿವೆಯಾದ ಬಳಿಕ ೨-೩ ದಿನಗಳಲ್ಲೇ ಗರ್ಗಾಚಾರ್ಯರ ಮುಹೂರ್ತದಲ್ಲಿ (ಸೂರ್ಯೋದಯಕ್ಕೆ ಮೊದಲು ಐದು ಗಳಿಗೆ) ಹೊರಡಬೇಕೆಂದು ನಾನು ಮೋರಪ್ಪನ ಸಲಹೆಯ ಮೇರೆಗೆ ನಿಶ್ಚಯಿಸಿದೆನು. ನಮ್ಮೂರಿಂದ ೨೦-೨೫ ಮೈಲು ದೂರದ ರೇಲ್ವೇ ಸ್ಟೇಶನ್ನಿಗೆ ತಲುಪಲಿಕ್ಕೆ ಮೋರಪ್ಪನು ನಮ್ಮೂರಿಗೆ ಬಂದಿದ್ದ ಸಂತೆಯ ಗಾಡಿಗಳನ್ನು ಸುಲಭ ಬಾಡಿಗೆಗೆ ಗೊತ್ತು ಮಾಡಿದನು. ನಮ್ಮ ಈ ಬೇತು ನಮ್ಮ ಹುಡುಗರಿಗೂ ಗೊತ್ತಾಯಿತು. ಕೂಡಲೆ ಅವು ಅವಸರವಸರದಿಂದ ಒಳಗೆ ಹೋಗಿ:—“ಅಮ್ಮಾ, ನಾಳಿನ ಶನಿವಾರ ದಿವಸವೇ ಬೆಂಗಳೂರಿಗೆ ಹೊರಡುವದೆಂದು ಅಪ್ಪನೂ ಮೋರಪ್ಪನೂ ಹೊರಗೆ ಮಾತಾಡುತ್ತಿರುವರು” ಎಂದು ಒಳ್ಳೇ ಗಟ್ಟಿಯಾಗಿ ಹೇಳಿದವು. ಅವರ ಆ ಶಬ್ದಗಳು ಪಡಸಾಲೆಯ ಮೇಲೆ ಕುಳಿತಿದ್ದ ನಮಗೂ ಕೇಳಿಸಿದವು. ಹುಡುಗರ ಆ ಆತುರವನ್ನು ಕಂಡು ಹಾಗು ಅವರು ಹೇಳಿದ ಆ ಸಂಗತಿಯನ್ನು ಕೇಳಿ ನನ್ನ ಗೃಹಿಣಿಯು ಕೈಯೊಳಗಿನ ಕೆಲಸವನ್ನು ಬಿಟ್ಟು ಒಮ್ಮೆಲೆ ಹೊರಗೆ ಬಂದು:—‘ಈ ಹುಡುಗರನ್ನುವದು ನಿಜವೇ? ನಾಳಿನ ಶನಿವಾರವೇ ಹೊರಡುವದೇ? ಅಪ್ಪಯ್ಯಾ! ಇನ್ನೇನು ಮಾಡಲಿ? ಮಾಲತಿಯ ಅತ್ತೆಯ ಮನೆಯವರು ಅವಳನ್ನು ಕರೆಯಲಿಕ್ಕಾದರೂ ಬರಲಿ,’ ಎಂದು ಮೆಲ್ಲನೆ ಅಂದಳು.

ಅದಕ್ಕೆ ನಾನು:—“ಮೋರಪ್ಪನವರೇ, ಈ ಮೊದಲು ನಾವು ಗೊತ್ತುಪಡಿಸಿದ ಪ್ರಯಾಣ ಮುಹೂರ್ತವೇ ಸರ್ವಸಿದ್ಧಿಪ್ರದವಾಗಿದೆ. ಆಚೇ ಕೇರಿಯ ಆ ಗಣಪ್ಪ ಜೋಯಿಸನೂ ಅದೇ ಪ್ರಶಸ್ತವಾದದ್ದೆಂದು ಮೂರು ಮೂರು ಸಾರೆ ಪಂಚಾಂಗ ನೋಡಿ ಹೇಳಿರುತ್ತಾರೆ. ಹೊರಡುವದನ್ನೇ ನಿರ್ಧರಿಸಿದ ಬಳಿಕ, ನಾಲ್ಕು ದಿನ ಮುಂಚಿತವಾಗಿ ಹೋದರೆ ತಪ್ಪೇನು? ಚಾತುರ್ಮಾಸ್ಯಕ್ಕೆ ಮೊದಲೇ ಕೆಲವು

ತಿಂಗಳು ಅಲ್ಲಿಗೆ ಹೋಗುವದೇ ನಮ್ಮ ವೈದಿಕ ಧಂದೆಯ ದೃಷ್ಟಿಯಿಂದ ಹಿತಕರವು. ಅಂದರೆ ಆ ಒಳಗಾಗಿ ಪಲಕೆಲವು ಜನ ಗೃಹಸ್ಥರ ಗುರ್ತು-ಪರಿಚಯುವಾಗಿ, ಅಲ್ಲಿ ಮೊದಲನೇ ಚಾತುರ್ಮಾಸ್ಯಕ್ಕೇ ನಮ್ಮ ಛಾಪು ಚೆನ್ನಾಗಿ ಬಿದ್ದೀತು. ಇನ್ನು ಮಾಲತಿಯ ಅತ್ತೆಯ ಮನೆಯ ಕರೆಯು ಆ ಒಳಗಾಗಿ ಇಲ್ಲಿಗೆ ಬಂದರೆ ವಿಹಿತವೇ. ಇಲ್ಲದಿದ್ದರೆ ಬೆಂಗಳೂರಿಗೆ ಹೋಗುವಾಗ ಹರಿಹರವು ದಾರಿಯಲ್ಲೇ ಇರುವದು; ನಾವೇ ಅಲ್ಲಿ ಇಳಿದು, ಆಕೆಯನ್ನು ಅವರ ಮನೆಗೆ ಬಿಟ್ಟು ಮುಂದೆ ಹೋದರಾಗುವದಿಲ್ಲವೇ? ಮಾಲತಿಯನ್ನು ಅತ್ತೆಯ ಮನೆಗೆ ಕಳಿಸುವದರ ಹೊರತು ನಿಮ್ಮ ಯಾವ ಅಡಚಣಿಗಳಿವೆ?....''

ಮೋರಪ್ಪನು ತನ್ನ ಹುಟ್ಟುಗುಣದಂತೆ ನಮ್ಮ ಗಂಡ-ಹೆಂಡಿರ ಮಾತಿನಲ್ಲಿ ನಡುವೇ ಬಾಯಿ ಹಾಕಿ:—''ಅಹುದು ಅತ್ತಿಗೀ, ಯಜಮಾನರನ್ನುವದೇ ಉಚಿತವು. ಮತ್ತೆ ಯಾವ ಅಡ್ಡಿಯಿದೆ ತಿಳಿಸಿರಿ ನೋಡೋಣ'' ಎಂದು ಪ್ರಶ್ನೆ ಮಾಡಲು, ನನ್ನವಳ ಮನಸ್ಸು ನಮ್ಮೀರ್ವರ ವಿಚಾರಕ್ಕೆ ಒಪ್ಪಲಿಲ್ಲ. ಅದರಿಂದ ಅವಳು:—ನೀವನ್ನುವದು ಒಂದು ಬಗೆಯಿಂದ ಯೋಗ್ಯವೇ; ಆದರೆ ಮೋರಪ್ಪನವರೇ, ಇದೇ ಸಾರೆ ಮೊನ್ನೆ ಮೊನ್ನೆ ಬಾಳನ ಲಗ್ನವಾಗಿದೆ. ಲಗ್ನಕಾಲಕ್ಕೆ ಮೊದಲನೇ ವರ್ಷದ ಎಲ್ಲ ಹಬ್ಬಗಳಲ್ಲಿ ಅಳಿಯನಿಗೆ ತಕ್ಕ ಉಡುಗರೆ-ಆಭರಣ, ಆರತಿ-ಅಕ್ಷತೆ, ಮಾನ-ಮರ್ಯಾದೆಗಳನ್ನು ಮಾಡುತ್ತೇನೆಂದು ರಾಧಕ್ಕನು ಹೇಳಿರುತ್ತಾಳೆ; ನಾವು ಈಗ ಹೀಗೆ ಒಮ್ಮೆಲೆ ಹೊರಟು ಹೋದರೆ ಅವಳೇನು ಮಾಡಬೇಕು? ಅಷ್ಟು ದೂರದ ಬೆಂಗಳೂರಿಗೆ ಹೋದ ಬಳಿಕ ಈ ನಮ್ಮ ಸರ್ಪುರಿಗೆ ಆಗಾಗ್ಗೆ ಬರುವದೆಲ್ಲಿ? ಹಾಗು ಬೀಗರು ಮಾಡುವ ನಮ್ಮ ಬಾಳನ ಹಬ್ಬ-ಹುಣ್ಣಿವೆಗಳ ಪುರಸ್ಕಾರಗಳನ್ನು ನೋಡುವದಾವಾಗ? ನಾವೇ ಹೀಗೆ ನಡುವೇ ಹೊರಟು ಹೋದ ಬಳಿಕ ಮುಂದೆ ಆಗುವದೆಲ್ಲವೂ ಅಷ್ಟಕಷ್ಟೇ! ಎಂದಂದು ಸುಮ್ಮನಾದಳು.

ಆಗ ನಾನು:—''ಇದೇ ಅಲ್ಲವೆ ನಿನ್ನ ಮುಖ್ಯ ಅಡಚಣಿಯು? ನಮಗೆ ಬೇಡ ಬೀಗರ ಆ ಹಬ್ಬದೂಟಗಳೂ-ಅಕ್ಷತೆ ಆರತಿಗಳೂ. ಅವೆಲ್ಲ ಉಭಯಪಕ್ಷದವರಿಗೂ ಖರ್ಚಿನ ಕೆಲಸಗಳು ನಿಮ್ಮ ಹೆಂಗಸರದು ಉಮೇದಾಗುತ್ತದೆ; ಮತ್ತೆ ನಮ್ಮದು ಆಗುತ್ತದೆ ಬೋಧಂತಿ ಈಗಲೆ ಅಲ್ಲಿಗೆ ಹೋದರೆ ವರ್ಷ ಮುಗಿಯುವಷ್ಟರಲ್ಲಿ ನಮ್ಮ ಬಾಳನು ಅಲ್ಲಿಯ ಒಂದೆರಡು ಇಯತ್ತೆಗಳನ್ನಾದರೂ ಮುಗಿಸಿಯಾನು. ಅವನು ಕಲಿತು ಗಳಿಸಹತ್ತಿದನೆಂದರೆ ಆ ಮೇಲೆ ನೋಡಲಿಕ್ಕೆ ಬಂದೀತು ನಿಮ್ಮ ಹಬ್ಬ-ಹುಣ್ಣಿವೆ, ಆರುತಿ-ಅಕ್ಷತೆ ಮುಂತಾದ ಉಮೇದಿಗಳ ಕಡೆಗೆ. ಈಗ ಮರುಮಾತನಾಡದೆ ಗಂಟು-ಮೂಟೆಗಳನ್ನು ಸಿದ್ಧಪಡಿಸಹೋಗಿರಿ. ಒಯ್ಯಲಿಕ್ಕೆ ಸುಲಭವಾಗಬೇಕು; ಆದರೆ ಸರಸ್ಥಳದಲ್ಲಿ ಯಾವ ಜೀನಸಿನ ಕೊರತೆಯೂ ಒಮ್ಮೆಲೆ ಅನಿಸಿರಬಾರದು. ಈ ಪದ್ಧತಿಯಿಂದ ಅವಶ್ಯಕ ಸಾಮಾನುಗಳನ್ನಷ್ಟೇ ತೆಗೆದುಕೊಳ್ಳಿರಿ. ಉಳಿದದ್ದನ್ನೆಲ್ಲ ಇಲ್ಲಿಯೇ ಇಟ್ಟು ಹೋಗೋಣ ಮನೆಗೆ ಕೀಲೀ ಹಾಕಿ. ತಿಳಿಯಿತೇ? ಈಗ ನಾನು

ಹೇಳಿದ್ದೇ ನಿಶ್ಚಯವು." ನನ್ನ ಈ ಸ್ಪಷ್ಟ ವಾಕ್ಯನ್ನು ಕೇಳಿ, ಅವಳು ನಿರುಪಾಯದಿಂದ ನಿರುತ್ತರಳಾಗಿ ಒಳಗೆ ತನ್ನ ಕೆಲಸಕ್ಕೆ ಹೊರಟು ಹೋದಳು.

ನನ್ನ ಆ ಗಟ್ಟಿದನಿಯ ಮಾತನ್ನು ಕೇಳಿ ನನ್ನ ಮನೆಯ ಹುಡುಗರು ಮೊದ ಮೊದಲು ತುಸ ಗಾಬರಿಗೊಂಡರೂ ಊರಿಗೆ ಹೋಗುವದೇ ನಿಶ್ಚಿತವಾದದ್ದರಿಂದ ಅವು ಹುರುಪುಗೊಂಡವು. ಹುಡುಗರಿಗೆಲ್ಲಿಯದು ಚಿಂತೆ? ಯಾವದೇ ಯಾಕಾಗಲೊಲ್ಲದೇಕೆ? ಹೊಸ ಸಂಗತಿಯುಂಟಾಯಿತೆಂದರೆ ಹುಡುಗರಿಗೆ ಒಂದು ಬಗೆಯ ಆನಂದವೇ. ನನ್ನಂತೆ ಖರ್ಚಿನ ಇಲ್ಲವೆ ಬೇರೆ ಉಪದ್ರವಗಳು ಅವರಿಗಿದ್ದರೆ ತಾನೇ ಒಳಿತು-ಕೆಡಕುಗಳ ಯೋಚನೆಯು ಅವರಿಗುಂಟಾಗಬೇಕು? ಮಾಲತಿ-ಚಂಪೆಯರಿಗೆ ಊರಿಗೆ ಹೋಗುವದೆಂಬದು ತಿಳಿದ ಕೂಡಲೆ ಅವರು ತಮ್ಮ ತಾಯಿಯ ಬಳಿಗೆ ಓಡುತ್ತ ಹೋಗಿ:—"ಅವ್ವಾ, ಅವ್ವಾ, ನಾವು ನಮ್ಮ ಎಲ್ಲ ಗೊಂಬೆಗಳನ್ನು ಸಂಗಡ ತೆಗೆದುಕೊಳ್ಳೋಣವೇ? ಉಳಿದ ಆಟ, ಗಜಗ, ಆಣೇಕಲ್ಲು, ಹುಣಸೇಪಕ್ಕ, ಸಿಂಪುಗಳದೊಂದು ದೊಡ್ಡ ಗಂಟೇ ಮಾಡಿಕೊಂಡು ಬಿಡುವೆವು; ಅಂದರೆ ದಾರಿಯಲ್ಲಿ ಉಚ್ಚಿಬಿದ್ದು ಚೆಲ್ಲಾಪಿಲ್ಲಿಯಾಗಲಿಕ್ಕಿಲ್ಲ. ಅವ್ವಾ-ಅವ್ವಾ, ನಮ್ಮ ಅತ್ತಿಗೆಯನ್ನು ನಮ್ಮ ಸಂಗಡ ಕರೆದೊಯ್ದರೆ ಆ ಪರಸ್ಥಳದಲ್ಲಿ ಆಟವಾಡಲಿಕ್ಕೆ ನಮಗೆ ತೊಂದರೆಯಾಗಲಿಕ್ಕಿಲ್ಲ. ಅದಕ್ಕಾಗಿ ಆಕೆಯನ್ನೂ ನಮ್ಮ ಸಂಗಡ ಕರೆದುಕೊಂಡೇ ನಡೆ" ಎಂದರು.

ಆಗ ಅವಳು ಮಾಲತಿಯನ್ನು ಕುರಿತು—ಒಳ್ಳೇ ನೆನಪುಕೊಟ್ಟೆ. ನಾನು ಮರೆತೇಬಿಟ್ಟಿದ್ದೆನು. ಅವಳನ್ನು ಕರೆದೊಯ್ಯಲೇಬೇಕು. ತುಸ ದಿನಗಳಲ್ಲೇ ಚೈತ್ರ ಮಾಸ ಬಂದಿದೆ. ಚೈತ್ರದಲ್ಲಿ ಮೊದಲಗಿತ್ತಿಯು ತವರು ಮನೆಯಲ್ಲಿರಕೂಡದು. ಹೌದವ್ವಾ-ಹೌದು; ಆಕೆಯನ್ನು ಒಯ್ಯಲೇಬೇಕು. ಚಂಪಾ, ಹೊರಗೆ ಹೋಗಿ ಹೇಳು ಆಕೆಯನ್ನೂ ಕರೆದೊಯ್ಯಬೇಕೆಂಬದನ್ನು.

ಚಂಪೆಯು ಪಡಸಾಲೆಗೆ ಬಂದು ನಮ್ಮನ್ನು ಕೇಳುವ ಮೊದಲೇ ಅವರಾಡಿದ ಶಬ್ದಗಳು ನಮ್ಮ ಕಿವಿಗೆ ಬಿದ್ದಿದ್ದವಾದ್ದರಿಂದ ನಾನು ಸಮೀಪದಲ್ಲೇ ಕುಳಿತಿದ್ದ ಮೋರಪ್ಪನನ್ನು ಕುರಿತು:—"ಮೋರಪ್ಪಾ, ಏನೆನ್ನುವರೆಂಬದು ಕೇಳಿಸಿತೇ? ಸೊಸೆಯನ್ನೂ ಸಂಗಡ ಕರೆದೊಯ್ಯಬೇಕೆಂತೆ ಬೆಂಗಳೂರಿಗೆ. ಈಗಲೆ ಕರೆದೊಯ್ಯಬಾರದೆಂದು ನನ್ನ ಅಭಿಪ್ರಾಯವಿದೆ. ಅಲ್ಲಿ ನಾವು ತುಸ ಚೆನ್ನಾಗಿ ತಳವೂರಿಕೊಂಡಮೇಲೆ ನಾಳಿನ ಶ್ರಾವಣಕ್ಕೆ ಬೇಕಾದರೆ ಅವಳನ್ನು ಕರೆಕಳಿಸೋಣವಂತೆ. ಅದರಲ್ಲೇನಿದೆ ವಿಶೇಷ?" ಎಂದು ನಾನು ಹೊರಗೆ ಕುಳಿತು ಮಾತನಾಡುತ್ತಿರಲಿಕ್ಕೆ ಚಂಪೆಯು ಬಂದು:—ಅಪ್ಪಾ, ಅತ್ತಿಗೆಯನ್ನು ನಮ್ಮ ಸಂಗಡ ಬೆಂಗಳೂರಿಗೆ ಕರೆದೊಯ್ಯುವದಾದರೆ ಅವಳನ್ನು ಕರೆಯಲಿಕ್ಕೆ ಇಂದೇ ಕಳಿಸುವಿರೋ-ನಾಳೆಗೆ ಕಳಿಸುವಿರೋ? ನಾನೇ ಹೋಗಲೇನು ಅವರ ಮನೆಗೆ ಅವಳನ್ನು ಕರೆತರಲಿಕ್ಕೆ?" ಎಂದು ಹೇಳುವಷ್ಟರಲ್ಲಿ, ನನ್ನ ಗೃಹಿಣಿಯು ತಾನೇ ಒಳಗಿನಿಂದ ಹೊರಗೆ ಬಂದು:—ಏನರೀ,

ಮೋರಪ್ಪನವರೇ, ಸೊಸೆಯನ್ನು ಮುಂದೆ ಶ್ರಾವಣಕ್ಕೆ ಕರೆಯಿಸಬಹುದೆಂದು ನೀವೇನೋ ಅನ್ನುತ್ತಿರುವಿರಿ; ಆದರೆ ನಾಳಿನ ಚೈತ್ರಮಾಸದ ಗತಿಯೇನು? ಮೊದಲ ಗಿತ್ತಿಯನ್ನು ತವರು ಮನೆಯಲ್ಲಿಯೇ ಬಿಡುವುದೇ? ಚೈತ್ರಮಾಸಕ್ಕೇನು, ಹುಣ್ಣಿವೆ-ಹುಣ್ಣಿವೆ-ಹುಣ್ಣಿವೆ ಮೂರು, ಅಮಾಸಿ-ಅಮಾಸಿ-ಅಮಾಸಿ ಮೂರು ಇವೇ ನಡುವಿನ ಒಂದೆರಡು ತಿಂಗಳ ಅವಧಿಯಷ್ಟೇ? ಅಂದಮೇಲೆ ಈಗಲೆ ಅವಳನ್ನೂ ಸಂಗಡ ಕರೆದೊಯ್ದರೆ ತಪ್ಪೇನು? ಮೊದಲು ಸಾರೆಯೇ ಹೀಗೆ ಕರೆಕಳುಹಿಸುವ ಜಕೇರಿಯು ಮುಂದಿಗೆ ಚಂದವಾಗಿ ಕಾಣುವದೇ? ಎಂದು ಕೇಳಿದಳು. ನನ್ನ ಗೃಹಿಣಿಯ ಈ ಹೊಸ ಪ್ರಶ್ನೆಯ ಬಗ್ಗೆ ನಾನು ಹೆಚ್ಚು ಹೊತ್ತು ಆಲೋಚಿಸಬೇಕಾಯಿತು. ಹಾಗೆ ಕೆಲ ವೇಳೆ ಯೋಚಿಸಿದ ಬಳಿಕ 'ಬೇರೆ ಉಪಾಯವೇ ಇಲ್ಲದ್ದರಿಂದ ಅವಳನ್ನೂ ನಮ್ಮ ಸಂಗಡ ಕರೆದೊಯ್ದು ಬಿಡೋಣ. ಮತ್ತೇನು?' ಎಂದು ಮೋರಪ್ಪನನ್ನುದ್ದೇಶಿಸಿ ಮಾತನಾಡಲು, ಮೋರಪ್ಪನೂ ಅದಕ್ಕೆ ಸಮ್ಮತಿಯಿತ್ತದ್ದನ್ನು ನೋಡಿ ನನ್ನ ಗೃಹಿಣಿಗೆ ತುಸ ಸಮಾಧಾನವಾಯಿತು. ಹೆಣ್ಣುಮಕ್ಕಳು, ಗಂಡುಮಕ್ಕಳು, ಸೊಸೆ ಇವರನ್ನೆಲ್ಲ ಕಟ್ಟಿಕೊಂಡು ಬೀಗರು-ಬಿಜ್ಜರು ಮನೆಯ ಯಾವುದೊಂದು ಲಗ್ನಸಮಾರಂಭಕ್ಕೆ ಹೊರಡುವಂತೆಯೇ ಆಗಿನ ನಮ್ಮ ಬೆಂಗಳೂರ ಪ್ರವಾಸವೆಂದು ನನ್ನಾಕೆಯ ತಿಳುವಳಿಕೆಯಾಗಿತ್ತೋ ಏನೋ ಅದಾರು ಬಲ್ಲರು? ಇರಲಿ.

ಹೀಗೆ ಸಮ್ಮತಿ-ಅಸಮ್ಮತಿ, ರುಕಾರ-ಇನ್‌ಕಾರಗಳ ತಾಕಲಾಟವು ಒಂದೇ ಸವನೆ ನಡೆದಿರಲಿಕ್ಕೆ, ಹೊರಡುವ ಆ ದಿವಸವು ಸಮೀಪಿಸಿತು. ನನ್ನ ಗೃಹಿಣಿಯ ಪ್ರಯಾಣ ಸಿದ್ಧತೆಯು ಒತ್ತರದಿಂದ ನಡೆಯಿತು ಲಗ್ನದ ಕಾಲಕ್ಕೆ ತನಗೆ ಬಂದಿದ್ದ ಕುಪ್ಪುಸದ ಖಣಗಳಲ್ಲಿಯ ಕೆಲವು ಉಚ್ಚ ನೀಚ ಖಣಗಳನ್ನು ಗಂಟಿನೊಳಗಿಂದ ಹೊರಹೊರಡಿಸಿ, ಬೇರೆ ಬೇರೆ ಋಣಾನುಬಂಧಿಕರ ಮನೆಯ ಹೆಣ್ಣುಮಕ್ಕಳಿಗೆ ನಿತ್ಯ-ನೈಮಿತ್ತಿಕಗಳ ನೆವದಿಂದ ಮುಯ್ಯ ಮಾಡುವ ಕ್ರಮವನ್ನು ನಡೆಸಿದಳು. ಅವಳ ಆ ಕೃತಿಯಿಂದ ನಮಗೆ ಹಾನಿಯಿರಲಿಲ್ಲ; ಯಾಕಂದರೆ ಆ ಮುಯ್ಯಗಳಿಗೆ ಪ್ರತಿಮುಯ್ಯವಂತೂ ಅವಳಿಗೆ ದೊರೆಯುವದಿತ್ತೇ ಇತ್ತು; ಅಲ್ಲದೆ ತಾನು ಊರಿಗೆ ಹೊರಡುವ ದಿವಸ ಇಂಥಿಂಥವರು ತನಗೆ ಇಂಥಿಂಥ ಖಣ-ಕೊಬ್ಬರಿಗಳಿಂದ ಉಡಿ ತುಂಬಿದರೆಂದು ಜಂಭ ಹೇಳಿಕೊಳ್ಳಲಿಕ್ಕೆ ಅನುಕೂಲವಾಗುವದೆಂದು ಅವಳ ಇಚ್ಛೆಯಿರಬಹುದಾಗಿ ನನ್ನ ಮತವಿದೆ; ಹಾಗಿರದಿದ್ದರೆ ಅವಳು ಎಂದಿನಂತೆ ನನಗೆ ಹೇಳಿ ಕೇಳಿಯೇ ಆ ಮುಯ್ಯದ ಕಾರ್ಯವನ್ನು ಮಾಡುತ್ತಿದ್ದಳು.

ನಾವು ನಮ್ಮ ಮುತ್ತ್ಯಾನ ಮೂರು ತಲೆಯಿಂದ ಈ ಸರ್ಪಪುರಿಯಲ್ಲಿ ಪ್ರತಿಷ್ಠಿತರೆಂದು ವಾಸವಾಗಿದ್ದು, ಈಗ ಕೇವಲ ಹೊಟ್ಟೆ ಹೊರಕೊಳ್ಳಲಿಕ್ಕೆ ಹುಡುಗನ ವಿದ್ಯಾಭ್ಯಾಸದ ನೆವದಿಂದ ಬೆಂಗಳೂರ ಪಟ್ಟಣಕ್ಕೆ ಹೊರಡುವ ಪ್ರಸಂಗ ಬಂದದ್ದನ್ನು ನೋಡಿ ನನಗೆ ಬಹಳ ಕೆಡಕೆನಿಸ ಹತ್ತಿತು. ಬಿಸಿಲಿಗೆ ಬೀಳದ ಹೊರತು ನೆಳಲಿನ ಸುಖ ತಿಳಿಯದೆಂಬ ಮಾತಿನ ಅನುಭವವು ನನಗೆ ಆಗ ಬಂದಿತು. ಅಪ್ಪಾರಿಷ್ಟರು,

ಬಂಧು-ಬಳಗದವರು, ನೆರೆಹೊರೆಯವರು, ಮಿತ್ರ-ಋಣಾನುಬಂಧಿಗಳು ಹಾಗು ಬೇರೆ ಪರಿಚಿತರು ಇವರೆಲ್ಲರ ಒಳಿತು-ಕೆಡಕು ಗುಣಗಳು ಅವರ ಸಂತತವಾದ ನಿಕಟಸಾನ್ನಿಧ್ಯವಿರುವ ವರೆಗೂ ಅವಗತವಾಗುವದಿಲ್ಲ. ನಾನು ಸರ್ಪಪುರಿಯಲ್ಲಿ ಇಷ್ಟು ದಿನ ವಾಸಿಸುತ್ತಿದ್ದರೂ ಅವರೆಲ್ಲರಲ್ಲಿಯ ಒಂದೊಂದು ನ್ಯೂನಾತಿರೇಕಗಳನ್ನು ಕಂಡು ಅವರ ವಿಷಯದಲ್ಲಿ ನನಗೆ ಅನಾದರವೇ ಇದ್ದಿತು; ಆದರೆ ಈಗ ನಾನು ಪರವೂರಿಗೆ ಹೊರಟದ್ದರಿಂದ, ಯಾವ ಚಮತ್ಕಾರದಿಂದಲೋ ಏನೋ! ಅವರಲ್ಲಿಯ ಸದ್ಗುಣ ಗಳಷ್ಟೇ ನನ್ನ ದೃಷ್ಟಿಗೆ ಬೀಳಹತ್ತಿದವು! ಆದರಿಂದ ಅವರೆಲ್ಲರ ವಿಯೋಗವು ನನಗೆ ತೀರ ದುಸ್ಸಹವಾಗತೊಡಗಿತು. ನಮ್ಮ ಸರ್ಪಪುರಿಯೊಳಗಿನಂತಹ ಜನರು ಬೆಂಗ ಳೂರಲ್ಲಿ ಹೇಗೆ ಸಿಕ್ಕಾರು? ಅಂತಹರನ್ನು ಕೂಡಿಹಾಕುವ ಸಲುವಾಗಿ ನನಗೆ ಎಷ್ಟು ವರ್ಷಗಳು ಬೇಕಾದಾವು? ಎಷ್ಟು ಪ್ರಯಾಸಪಡಬೇಕಾದೀತು? ಮುಂತಾದ ವಿಚಾರಗಳಿಂದ ನನ್ನಲ್ಲಿ ಪರಾಕಾಷ್ಠೆಯ ಚಿಂತೆಯೂ ಒಂದು ಬಗೆಯ ಉದ್ವಿಗ್ನ ತೆಯೂ ಪ್ರಾಪ್ತವಾದವು. ಮನ್ನಂಗಿ ರಾಮಾಚಾರಿಯ ಆ ಅರ್ಥಪೂರ್ಣ ಹಾಗು ನಗೆಚೇಷ್ಟೆಯ ಸಂಭಾಷಣ, ಗೋವಿಂದಭಟ್ಟನ ಸಂತತವಾದ ನೆರೆಹೊರೆ, ವಿಷ್ಣು ಪಂತರ ನನ್ನ ಮೇಲಿನ ಭಕ್ತಿ-ವಿಶ್ವಾಸಗಳು, ನದಿಗೆ ಸಂಜೆಯ ಮುಂದೆ ಸಂಧ್ಯಾ ವಂದನೆಗೆಂದು ಹೋಗುವಾಗ ನಿತ್ಯದಲ್ಲೂ ನಮ್ಮ ಪಡಸಾಲೆಯ ಮೇಲೆ ಕೆಲ ಹೊತ್ತಾದರೂ ಕುಳಿತು ನನ್ನೊಡನೆ ವಿನೋದಪ್ರಚುರ ಭಾಷಣ ಮಾಡುತ್ತಿದ್ದ ನಮ್ಮ ವೈದಿಕ ಮಿತ್ರರು ಇತ್ಯಾದಿ ಒಂದಲ್ಲ, ಎರಡಲ್ಲ, ಹಲವು ಸಂಗತಿಗಳ ನೆನಪು ಆಗಿ ಆಗಿ ನನಗೆ ಆಗ ಎಷ್ಟು ದುಃಖವಾಗುತ್ತಿತ್ತೆಂಬದನ್ನು ಬಣ್ಣಿಸಲಳವಲ್ಲ. ಇಷ್ಟು ದಕ್ಷತೆಯಿಂದ ಹಾಗು ವ್ಯವಸ್ಥೆಯಿಂದ ಇರಿಸಿದ ನಮ್ಮ ಮನೆಯು ಮುಂದೆಯೂ ಹೀಗೆಯೇ ಹೇಗೆ ಉಳಿದೀತು? ಹಿತ್ತಲು-ಮುಂಚಿಗೆಗಳೊಳಗಿನ ಹೂ-ತುಳಸೀ ಗಿಡ ಗಳಿಗೆ ದಿನಾಲು ತಪ್ಪದೆ ನೀರೆರಚಿ ಅವುಗಳ ಕಡೆಗೆ ನೋಡುವವರಾರು? ಪ್ರಸಂಗ ವಿಶೇಷದಲ್ಲಿ ಬಕ್ಕಣದೊಳಗಿನ ದುಡ್ಡು ಖರ್ಚು ಮಾಡಿ ಇಲ್ಲವೆ ಬೇರೆ ಬೇರೆ ಪ್ರಸಂಗ ಗಳಲ್ಲಿ ದಾನ ಮುಂತಾದವುಗಳಿಂದ ಪುಕ್ಕಟೆಯಾಗಿ ಸಂಗ್ರಹಿಸಿದ ಸಣ್ಣ ಪುಟ್ಟ ಸುಸ ರಿಯ ಜೀನಸುಗಳನ್ನು ಇಷ್ಟು ದೂರ ಒಯ್ಯುವದಾಗುವದಿಲ್ಲ; ಇನ್ನು ಅವುಗಳನ್ನು ಇಲ್ಲಿ ಬಿಟ್ಟು ಹೋಗುವದೂ ಕಠಿಣವೇ. ನಮ್ಮ ಗುರ್ತು ಪರಿಚಯದ ಅತಿಥಿ-ಅಭ್ಯಾಗತರು ಎಂದಿನಂತೆ ಈ ಊರಿಗೆ ನಮ್ಮ ಮನೆಗೆ ಇಳಕೊಳ್ಳಲಿಕ್ಕೆಂದು ಬಂದು, ನಾವು ಇಲ್ಲದಿರುವದನ್ನು ಕಂಡು ನಮ್ಮ ಗ್ರಾಮತ್ಯಾಗದ ಬಗ್ಗೆ ಅವರು ವಿಧವಿಧದ ಚರ್ಚೆ ಮಾಡಿಯಾರು; ಮತ್ತು ಛಿಮ್ಮೊಮ್ಮೆ ನಮ್ಮ ನಿಂದೆ ಕೂಡ ಮಾಡಿಯಾರು ಇತ್ಯಾದಿ ಕಲ್ಪನೆಗಳ ವಿವೇಚನೆಯಲ್ಲಿ ನನ್ನ ಮನಸ್ಸು ಯಾವಾಗಲೂ ಗರ್ಕವಾಗಿ ಬಿಡುತ್ತಿ ತ್ತು. ಆದರಿಂದ ನಾವು ಹೊರಡುವ ಆ ದ್ವಿತೀಯೆಯು ಯಾವಾಗ ಬಂದೀತು; ಮತ್ತು ನಾವು ಮನೆ ಬಿಟ್ಟು ಯಾವಾಗ ದಾರಿಗೆ ಹತ್ತೇವು ಎಂದು ನನಗನಿಸುತ್ತಿತ್ತು.

ಇದೇ ವಿಚಾರದಲ್ಲಿ ತೊಡಗಿದ್ದ ನಾನು ಏನೋ ಜ್ಞಾಪಿಸಿಕೊಂಡು, ಬಳಿಯಲ್ಲೇ

ಕುಳಿತಿದ್ದ ಮೋರಪ್ಪನನ್ನು ಕುರಿತು: -"ನೋಡಿದೆಯಾ ಮೋರಪ್ಪಾ, ಮಾಯೆಯ ಚಮತ್ಕಾರವೆಂತಿರುವದೆಂಬದನ್ನು? ಹೆಚ್ಚಿಲ್ಲ ನಾಲ್ಕೆಂಟು ತಿಂಗಳು ಬೆಂಗಳೂರಿಗೆ ಹೋಗಿ ಬರಬೇಕೆಂದರೂ, ಈ ಮನೆ ಬಿಟ್ಟು ಹೊರಡಲಿಕ್ಕೆ ಎಷ್ಟು ಗಡಚೆನಿಸುತ್ತದೆ? ಇದಕ್ಕೇ ಇಷ್ಟು ಯೋಚನೆಗೊಳಗಾದ ಬಳಿಕ, ಇಹಲೋಕವನ್ನು ಚಿರಕಾಲ ಬಿಟ್ಟು ಹೋಗಬೇಕಾದ ಕಾಲಕ್ಕೆ ಮಾನವನಿಗೆ ಹೇಗೆನಿಸುತ್ತಿರಬಹುದೋ ಏನೋ! ನಮ್ಮ ಕೂಡ ಈ ಲೋಕದೊಳಗಿನ ಯಾವುದೊಂದು ವಸ್ತುವೂ ಬರುವಂತಿರುವದಿಲ್ಲ; ಇವೆಲ್ಲ ಇಲ್ಲಿಲ್ಲಿಯೇ ಬಿದ್ದುಕೊಂಡಿರುತ್ತವೆಂಬದು ನಮಗೆ ಗೊತ್ತಿದೆ. ಇದನ್ನೆಲ್ಲ ನಮ್ಮ ಕಣ್ಮುಟ್ಟ ನೋಡುತ್ತಿರುತ್ತೇವೆ; ಆದರೂ ನನ್ನೀ ಪುಟ್ಟ ನಸ್ಯದ ಡಬ್ಬಿಯ ಲೋಭವು ಕೂಡ ಕಡಿಮೆಯಾಗುವದಿಲ್ಲವಲ್ಲ! ಇದಕ್ಕೆಂತಹ ಚಮತ್ಕಾರವೆನ್ನಬೇಕು? ಈ ಭಗವನ್ಮಾಯೆಯು ಭಗವಂತನನ್ನು ಕೂಡ ಮೋಹಗೊಳಿಸುತ್ತದೆ. ಈ ಮಾಯೆಯನ್ನು ಗೆದ್ದಂಥವರು ನಿಜವಾಗಿಯೂ ದೈವಶಾಲಿಗಳೇ ಸರಿ. ನಮ್ಮಂತಹ ಮೂಢಜನರು ಈ ಮಾಯಾ ಜಾಲದಲ್ಲಿ ಸಿಲುಕಿ ಸಂತತವಾದ ಜನ್ಮ-ಮರಣಗಳ ಪೀಕಲಾಟದಲ್ಲಿ ಬಿದ್ದು ತೊಳಲತಕ್ಕವರೇ ಶ್ರೀ ವೇದೋನಾರಾಯಣನ ಕೃಪೆಯಿಂದ ಏನಾಗುವದೋ ಆಗಲಿ" ಎಂದೆನ್ನಲು, ನನ್ನ ವೇದಾಂತ ವಿಷಯದ ಬಗ್ಗೆ ನನ್ನನ್ನು ಸ್ತುತಿಸಿ, ಮೋರಪ್ಪನು ತನ್ನ ಆ ಪ್ರೀತಿಯ ವಿಷಯಕ್ಕೆ ಪ್ರಾರಂಭಿಸಿದನು. ಅವನು ಆ ಕಾಲಕ್ಕೆ ವೇದಾಂತದ ಮೇಲೆ ಒಂದು ಚಿಕ್ಕ ವ್ಯಾಖ್ಯಾನವನ್ನೇ ಕೊಟ್ಟನೆನ್ನಬಹುದು. ಇಷ್ಟರಲ್ಲಿ ಇಳಿಹೊತ್ತಾಗಲು, ನಿತ್ಯ ನಿಯಮದಂತೆ ನಮ್ಮ ಮನೆಗೆ ಬರುವ ನಮ್ಮ ವೈದಿಕ ಮಿತ್ರರೂ ಬರತೊಡಗಿದರು. ಆ ಮೇಲೆ ಕೇಳುವದೇನು? ಅಂದು ಆ ವಿಷಯದ ಬಗ್ಗೆ ನಡೆದ ಚರ್ಚೆಯು 'ನ ಭೂತೋ ನ ಭವಿಷ್ಯತಿ' ಎಂಬಂತಾಗಿ ಹೋಯಿತು. ಅವರಲ್ಲಿಯ ಪ್ರತಿಯೊಬ್ಬನು ಎಲ್ಲರಿಗಿಂತಲೂ ತಾನೇ ಶ್ರೇಷ್ಠ ವೇದಾಂತಿಯು, ತಾನೇ ಜಿಜ್ಞಾಸುವು, ತಾನೇ ನಿಜವಾದ ಮುಮುಕ್ಷುವು ಎಂದು ಗ್ರಹಿಸಿ, ಸೆಟೆಸೆಟೆದು ಹೇಳತೊಡಗಿದನು. ನಾನು ಸ್ವತಃ ವೇದಾಂತಿಯೇನೋ ಆಗಿರಲಿಲ್ಲ; ಆದರೂ ವೇದಾಂತವೆಂದರೇನು? ಅದರಿಂದ ಪ್ರಯೋಜನವೇನು? ಇತ್ಯಾದಿ ಸಂಗತಿಗಳು ನನಗೆ ಚೆನ್ನಾಗಿ ಅವಗತವಾಗಿದ್ದವು. ವೇದಾಂತ ವಿಷಯವು ಅಪರಿಮಿತವಾದುದು; ಅದನ್ನು ತಿಳಕೊಳ್ಳುವ ಮಾನವನ ಬುದ್ಧಿಯು ಎಷ್ಟು ವಿಶಾಲವಾದದ್ದಿದ್ದಗೂ ಅದು ಪರಿಮಿತವಾದದ್ದೇ. ಅಂದಬಳಿಕ ಅಪರಿಮಿತ ವಿಷಯದ ಸಂಪೂರ್ಣ ಜ್ಞಾನವು ಪರಿಮಿತ ಬುದ್ಧಿಗೆ ಹೇಗಾದೀತು? ಹೀಗಿದ್ದ ಮಾತ್ರದಿಂದ ಅದನ್ನು ತಿಳಿಯಲು ಯತ್ನಿಸಲೇ ಬಾರದೆಂತಲ್ಲ; ಶಕ್ಯವಾದಷ್ಟು ತಿಳಕೊಳ್ಳಬೇಕು. ಕೂಟಸ್ಥ, ಆತ್ಮಾ, ಅಗೋಚರ, ಬ್ರಹ್ಮ ಮುಂತಾದ ಗಡಚು ಶಬ್ದಗಳ ತಾಕಲಾಟಕ್ಕಿಂತ ಶ್ರೀಮದ್ಭಗವದ್ಗೀತೆಯಲ್ಲಿ ಎಷ್ಟು ವೇದಾಂತ ವಿಷಯ ಬಂದಿದೆಯೋ, ಅಷ್ಟೇ ವೇದಾಂತದಿಂದ ನನಗೆ ತೃಪ್ತಿಯಾಗುತ್ತಿತ್ತು. ವೇದಾಂತ ತಿಳಿಯಲಿಕ್ಕೆ ಶ್ರೀ ವಿದ್ಯಾರಣ್ಯರ ಪಂಚದಶಿ ಗ್ರಂಥವೇ ಏತಕ್ಕೆ ಬೇಕು? ಪ್ರಬೋಧಚಂದ್ರೋದಯ ನಾಟಕ, ಶ್ರೀಮದ್ಭಗವದ್ಗೀತೆ ಇವೇ ನನ್ನ ಶ್ರೇಷ್ಠ

ವೇದಾಂತ ಗ್ರಂಥಗಳು. ಇರಲಿ.

ಕೆಲ ದಿನಗಳ ವರೆಗೆ ಅನುಭವಿಸಬೇಕಾಗಿದ್ದ ನಮ್ಮ ಸರ್ಪಪುರಿಯ ವಿಯೋಗ ದುಃಖವು ನನ್ನ ಸ್ನೇಹಿತರ ಅಂದಿನ ವೇದಾಂತಪರ ಭಾಷಣದಿಂದ ಆಗಿನ ಮಟ್ಟಿಗೆ ನಿವಾರಣವಾಯಿತು. ಬಳಿಕ ಆ ಜನರೆಲ್ಲರೂ ಸಂಧ್ಯಾವಂದನೆಗೆಂದು ನದಿಗೆ ಹೊರಟರು. ಅವರಲ್ಲಿ ರಾಮಭಟ್ಟರೆಂಬುವರು:-ಗುರುಭಟ್ಟರೇ, ಹಾಗಾದರೆ ನೀವು ಹೊರಡುವದನ್ನೇ ಕಡೆಗೆ ನಿಶ್ಚಯಿಸಿದಂತಾಯಿತೇನು? ನಮ್ಮೆಲ್ಲರನ್ನು ಬಿಟ್ಟು ನೀವು ಹೋಗಬಾರದಪ್ಪಾ. ನೀವು ಹೊರಟು ಹೋದಿರೆಂದರೆ ನಮಗೆ ಹೇಗೆ ಹೇಗೋ ಅನಿಸೀತು. ದಿನಾಲು ನದಿಗೆ ಹೋಗುವಾಗ ನಿಮ್ಮ ನೆನವು ಆಗದೆ ಇರಲಿಕ್ಕಿಲ್ಲ, ಎಂದೆನ್ನಲು, "ನಾಳೆ ದ್ವಿತೀಯಾ ಶನಿವಾರವೇ ಹೊರಡುವದು ನಿಶ್ಚಯಿಸಲ್ಪಟ್ಟಿದೆ" ಎಂದು ಒಳ್ಳೇ ಆತುರದಿಂದ ಮೋರಪ್ಪನು ಹೇಳಿದನು. ಅದನ್ನು ಕೇಳಿಯಂತೂ ಅವರಲ್ಲಿಯ ಪ್ರತಿಯೊಬ್ಬರೂ "ಛೀ! ಛೀ! ಗ್ರಾಮತ್ಯಾಗ ಮಾಡುವದುಂಟೇ? ತತ್ರಾಪಿ ಈ ವರ್ಷ, ಅದರಲ್ಲೂ ಈ ಮುಹೂರ್ತಕ್ಕಂತೂ ಮಾಡಲೇಕೂಡದೆ"ಂದು ಒತ್ತಾಯ ಪಡಿಸಿದರು; ಆದರೆ ನಾನು ಅವರಿಗೆ ನಮ್ಮ ಕೃತನಿಶ್ಚಯವನ್ನು ವಿಧವಿಧದಿಂದ ಹೇಳಿ ಹೇಳಿ ಬೇಸತ್ತೆನು; ಆದರೂ ಅವರ ಸಮಾಧಾನವಾಗಲಿಲ್ಲ. ಅವರೆಲ್ಲರಿಗೆ ಬೇರೆ ಬೇರೆ ಪ್ರಕಾರದಿಂದ ಹೇಳಿ ಅವರನ್ನು ಸಮಾಧಾನಗೊಳಿಸಬೇಕಾದರೆ ನನಗೊಂದು ಬಗೆಯ ಸಂತೋಷವೂ ಬೇರೊಂದು ಬಗೆಯ ದುಃಖವೂ ಆಗುತ್ತಿತ್ತು.

ಒಟ್ಟಿನಲ್ಲಿ ಹೇಳುವದೇನಂದರೆ, ಬಹು ದಿನಗಳ ವರೆಗೆ ಒಂದೇ ಸ್ಥಳದಲ್ಲಿದ್ದು, ಅಕಸ್ಮಾತ್ತಾಗಿ ಬೇರೆ ಕಡೆಗೆ ತಳ ಕಿತ್ತಿಕೊಂಡು ಹೊರಡುವ ಕೆಲಸವು ಬಹು ದುರ್ಘಟವಾದದ್ದು. ಹೆಚ್ಚಾಗಿ ಬಲಿತ ಸಸಿಯನ್ನು ಬೇರೆ ಕಡೆಗೊಯ್ದು ಹಚ್ಚುವಾಗ ಯಾವ ಬಗೆಯ ತೊಂದರೆಯುಂಟಾಗುವದೋ ಅದೇ ಗತಿಯು ಒತ್ತಟ್ಟಿಗೆ ಬಹಳ ದಿವಸವಿದ್ದ ಸ್ಥಳವನ್ನು ಬಿಟ್ಟು ಬೇರೆ ಕಡೆಗೆ ಹೋಗುವಾಗ ಆಗುತ್ತಿರುತ್ತದೆ; ಇಲ್ಲವೆ ಒಂದು ಗಿಡದ ಟೊಂಗೆಯನ್ನು ಕತ್ತರಿಸಿ ಅದನ್ನು ಬೇರೆ ಗಿಡಕ್ಕೆ ಕಲಮು ಮಾಡುವಾಗ ಅವೆರಡೂ ಗಿಡಗಳಿಗೆ ಯಾವ ಒಂದು ಬಗೆಯ ಕ್ಲೇಶವಾಗುತ್ತದೋ, ಕೇವಲ ಅದರಂತೆಯೇ ನಾನು ಗ್ರಾಮತ್ಯಾಗ ಮಾಡುವಾಗ ನನ್ನ ಗತಿಯಾಯಿತು. ಆ ಕಾಲಕ್ಕೆ ನನಗಾದ ದುಃಖವು ಸಾಮಾನ್ಯವಾಗಿರಲಿಲ್ಲ. ಗ್ರಾಮತ್ಯಾಗದಂತಹ ಅಸಹ್ಯ ದುಃಖವು ಇನ್ನೊಂದಿಲ್ಲೆನ್ನಬಹುದು. ಯಾಕಂದರೆ ಆ ಗ್ರಾಮತ್ಯಾಗ ದುಃಖದ ಬುಡಕ್ಕೆ ಹಲವು ಬಗೆಯ ದುಃಖಗಳ ಬೇರುಗಳು ತೊಡಕಿಕೊಂಡಿರುತ್ತವೆ. ಅದರಿಂದ ಸುಖ-ಸಮಾಧಾನದಲ್ಲಿದ್ದ ಯಾವ ಮನುಷ್ಯನೂ ಗ್ರಾಮತ್ಯಾಗ ಮಾಡಲಿಕ್ಕೆ ಉದ್ಯುಕ್ತನಾಗುತ್ತಿರುವದಿಲ್ಲ. ಒಂದು ವೇಳೆ ಅಂಥ ಪ್ರಸಂಗವೇ ಬಂದರೆ, ಅದನ್ನು ಕೆಲ ದಿನಗಳ ಮಟ್ಟಿಗೆ, ಇಲ್ಲವೆ ತನ್ನೊಬ್ಬನ ಮಟ್ಟಿಗೆ ಮಾಡಬಹುದು. ಸಾರಾಂಶವೇನಂದರೆ, ಜನ್ಮಭೂಮಿ ಇಲ್ಲವೆ ಬಹು ದಿನಗಳ ತನಕ ಒಂದೇ ಸ್ಥಳದಲ್ಲಿದ್ದ ನಂತರ ಅದನ್ನು ಬಿಟ್ಟು ಹೋಗುವಾಗ ಯಾವ ಪ್ರಕಾರದ ದುಃಖವಾಗುವದೋ ಅದು ಪರಮ ಜಾಜ್ವಲ್ಯವಾದ ದುಃಖವೆಂಬುದರಲ್ಲಿ ಸಂದೇಹವೇ ಇಲ್ಲ.

ನಾವು ಹೊರಡುವ ದ್ವಿತೀಯೆಗೆ ಇನ್ನು ಒಂದೇ ದಿನದ ಅವಕಾಶವಿತ್ತು. ನಮ್ಮ ಇಷ್ಟಮಿತ್ರರು ನಾವು ಪರವೂರಿಗೆ ಹೊರಟಿವೆಂದು ನಮ್ಮನ್ನು ತಮ್ಮ ತಮ್ಮ ಮನೆಗೆ ಕರೆದು ಸವಿಯೂಟಗಳನ್ನುಣಿಸ ತೊಡಗಿದರು. ನಾವು ಹಾಗೆ ಮಂದಿಯ ಮನೆಯಲ್ಲಿ ಯಥೇಚ್ಛವಾಗಿ ಉಂಡು ಮನೆಗೆ ಬಂದ ಬಳಿಕ ಊರಿಗೊಯ್ಯುವ ಸಾಮಾನುಗಳ ಗಂಟು-ಮೂಟೆಗಳನ್ನು ಕಟ್ಟತೊಡಗುತ್ತಿದ್ದೆವು. ದಿನಾಲು ನಾಗವಂದಿಗೆಯ ಮೇಲಿನ ಪುಸ್ತಕಗಳ ಗಂಟುಗಳನ್ನು ಇಳಿಇಳಿಸಿ ಅವುಗಳೊಳಗಿನ ಯಾವ ಯಾವ ಪುಸ್ತಕಗಳನ್ನು ಸಂಗಡ ತಕ್ಕೊಳ್ಳಬೇಕೆಂಬದನ್ನು ನಾನು ನಿಷ್ಕರ್ಷಿಸುತ್ತಿದ್ದೆನು. ನನ್ನ ಗೃಹಿಣಿಯು ಇಂದು ದೊಡ್ಡ ದೊಡ್ಡ ಪಾತ್ರೆಗಳಲ್ಲಿಯ ತಕ್ಕೊಳ್ಳುವವನ್ನು ಬೇರೆ ವಿಂಗಡಿಸಿ ಮಿಕ್ಕವುಗಳನ್ನು ಒಳಗೆ ಕೋಣೆಯೊಳಗೆ ಒತ್ತಟ್ಟಿಗೆ ಡಬ್ಬುಹಾಕಿಡುವುದು; ನಾಳೆ ಸಣ್ಣ ಪಾತ್ರೆಗಳನ್ನು ವಿಂಗಡಿಸಿ ವ್ಯವಸ್ಥೆ ಹಚ್ಚುವದು ಈ ಕ್ರಮವನ್ನು ನಡೆಸಿದ್ದಳು. ಮೊರ, ಬುಟ್ಟಿ, ಕಲ್ಲಗಡಿಗಿ, ಕಲ್ಲಪರಟಿ, ಗಡಿಗಿ, ಮಡಕಿ, ಅರೆಯುವ ಕಲ್ಲು, ಗುಂಡಕಲ್ಲು, ಒನಕೆ, ಬೀಸಿಕಲ್ಲು ಈ ಎಲ್ಲ ಜೀನಸುಗಳನ್ನು ಒಂದೂ ಬಿಡದಂತೆ ಸಂಗಡ ಒಯ್ಯಲೇ ಬೇಕೆಂದು ಅವಳಿಗನಿಸುತ್ತಿತ್ತು; ಆದರೆ ಅವುಗಳ ಭಾರೀ ತೂಕ ಇಲ್ಲವೆ ಕಡಿಮೆ ಬೆಲೆ ಮುಂತಾದ್ದನ್ನು ಮನದಂದು ಅವುಗಳಲ್ಲಿಯ ಒಂದೊಂದನ್ನೇ ಕೋಣೆಗೆ ಸೇರಿಸಬೇಕಾಗುತ್ತಿತ್ತು ಊದುಗೊಳವೆ, ಲಟ್ಟಣಿಗಳು ನಮ್ಮಲ್ಲಿ ಮಿತಿ ಮೀರಿದ್ದವು. ಅವುಗಳನ್ನೆಲ್ಲ ಸಂಗಡ ಒಯ್ಯತಕ್ಕದ್ದೆಂದು ಅವಳು ಒತ್ತಟ್ಟಿಗಿರಿಸಿದಳು. ಅದರಂತೆ ನೆಲವು ಚಿಬ್ಬಲುಗಳನ್ನೂ ಒಯ್ಯುವ ಸಾಮಾನಿನಲ್ಲೇ ಇರಿಸಿದಳು. ಅಷ್ಟರಲ್ಲಿ ಮೋರಪ್ಪನು ಒಳಗೆ ಏತಕ್ಕಾಗಿಯೋ ಹೋಗಲು, ಅವನ ಕಣ್ಣಿಗೆ ಆ ಎಲ್ಲ ಸಾಮಾನುಗಳು ಕಂಡವು. ಆಗ ಆತನು ನನ್ನ ಗೃಹಿಣಿಯನ್ನು ಕುರಿತು:—ಅತ್ತಿಗೀ, ನೀವು ಇವೆಲ್ಲ ಸಾಮಾನುಗಳನ್ನು ಒಯ್ಯತಕ್ಕವರೇನು? ಇದೆಲ್ಲ ಕೂಡಿದರೆ ರೂಪಾಯಿ ಅರ್ಧರೂಪಾಯಿ ಕ್ರಯದ ಜೀನಸು. ಚೆಲ್ಲಿರಿ, ಇದನ್ನೆಲ್ಲ ಇಲ್ಲಿಯೇ. ಆವಶ್ಯಕವಾದ ಪಾತ್ರೆ-ಪಡಗು, ಅರಿವೆ-ಅಂಚಡಿ ಇವುಗಳನ್ನಷ್ಟೇ ಸಂಗಡ ತಕ್ಕೊಳ್ಳಿರಿ. ಈ ಕಸವನ್ನೆಲ್ಲ ಅಲ್ಲಿಗೆ ಒಯ್ಯಲಿಕ್ಕೆ ಖರ್ಚು ತುಸ ತಗಲುವುದೇ? ನಿಮ್ಮ ಹೆಂಗಸರಿಗೆ ಈ ಗಡಿಗಿ-ಮಡಕಿ, ಕಲ್ಲು-ಗುಂಡುಗಳ ಮೇಲೆ ಇಷ್ಟೇಕೆ ಮಮತ್ವವಿರುವದೋ ತಿಳಿಯದು. ಅಳ್ಳಿಟ್ಟಿನ ಆ ಒಡಕು ಗಡಿಗೆಯನ್ನು ಚಕ್ಕಡಿ-ರೈಲುಗಳ ಪ್ರವಾಸಗಳಲ್ಲಿ ಸಂಬಾಳಿಸಿಕೊಂಡೊಯ್ಯುವ ಬಗೆ ಹೇಗೆ?

ಮೋರಪ್ಪನ ಈ ಮಾತಿಗೆ ನನ್ನ ಗೃಹಿಣಿಯು ರೇಗಿಗೆದ್ದು:—"ಅಂದರೆ, ನೀವು ಹೇಳುವುದಾದರೂ ಏನು? ಏನನ್ನೂ ಒಯ್ಯಬೇಡವೆನ್ನುವಿರಾ? ನಿಮ್ಮ ಗಂಡಸರಿಗೇನು, ಹತ್ತು ಗಂಟೆಗೆ ಸರಿಯಾಗಿ ಊಟಕ್ಕಾದರೆ ತೀರಿತು; ಆದರೆ ನಮಗೆ ಹಾಗೆ ವೇಳೆಗೆ ಸರಿಯಾಗಿ ಊಟ ಬಡಿಸುವವರಾರು? ಹೇಳಿರಿನ್ನೊಮ್ಮೆ-ಇದರೊಳಗಿನ ಯಾವ ಸಾಮಾನ ಬೇಡವೆಂಬುದನ್ನು. ಊದುಗೊಳವೆಯ ಹೊರತಂತೂ ನಡೆಯಲಾರದಷ್ಟೆ? ಒಂದು ಅಡಿಗೆಯ ಕಡೆಗೆ; ಒಂದು ನೀರೊಲೆಯ ಕಡೆಗೆ. ಹೊತ್ತಿಗೆ ಸರಿಯಾಗಿ

ಸಿಗದಿದ್ದರೆ ಇನ್ನೊಂದಿರಲೆಂದು ಮೂರೇ ಊದುಗೊಳವೆ ತಕ್ಕೊಂಡಿದ್ದೇನೆ. ಇದರಂತೆಯೇ ನೆಲವು, ಮೊರ, ಬುಟ್ಟಿ, ಒನಕೆ, ಗುಂಡಕಲ್ಲು ಮುಂತಾದ ಪ್ರತಿಯೊಂದು ಜಿನಸು ಬೇಕೇ ಬೇಕು. ಪರಸ್ಥಳದಲ್ಲಿ ಅಡಿಗೆಗೆ ತಡವಾದರೆ ಹುಡುಗರಿಗೆ ತಿನ್ನಲಿಕ್ಕೆ ಮುಷ್ಟಿ ಅಳ್ಳಿಟ್ಟು ಬೇಡವೆ? ಗುರ್ತು-ಪರಿಚಯವಿಲ್ಲದ ಸ್ಥಳದಲ್ಲಿ ನಮಗೆ ಆಗಲೆ ಅಳ್ಳಿಟ್ಟಿನ ಗಡಿಗೆ ಕೊಡುವವರಾರು? ನೀವು ಗಂಡಸರು ಮಂದಿಯ ಮನೆಯಿಂದ ಅದನ್ನು ಕೇಳಿ ತಂದುಕೊಡುವಿರಾ?" ಎಂದು ಸವಾಲು ಹಾಕಲು, ಮೋರಪ್ಪನ ಬಾಯಿ ಕಟ್ಟಾಯಿತು. ನನ್ನ ಗೃಹಿಣಿಯು ಪ್ರತಿಯೊಂದು ಜಿನಸಿನ ಉಪಯುಕ್ತತೆಯ ವಿವರಣವೂ, ಅವುಗಳ ಅವಶ್ಯಕತೆಯೂ ನನಗೂ ಸರಿದೋರಿತು; ಆದರೆ ಅವೆಲ್ಲವುಗಳ ಬೆಲೆ ಅತ್ಯಲ್ಪವೆಂದು ಹೇಳಿದ ಮೋರಪ್ಪನ ಅಂಬೋಣವೂ ನನಗೆ ಅಷ್ಟೇ ಸರಿದೋರಲು, ನಾನು ಹಾಗೆಂದು ಮತ್ತೆ ಅಂದೆನು. ಆಗ ಅವಳು:—"ಅಹುದು, ಬೆಲೆಯೇನೋ ಅಲ್ಪವೇ ಸರಿ; ಆದರೆ ಇಷ್ಟಷ್ಟನ್ನು ಚೆಲ್ಲಿ ಕೊಟ್ಟು, ಯಾವ ಜಿನಸು ಎಲ್ಲಿ ಸಿಗುತ್ತವೆಂಬುದು ಗೊತ್ತಿಲ್ಲದ ಪರಸ್ಥಳದಲ್ಲಿ ಅವುಗಳನ್ನು ಒಮ್ಮೆಲೆ ಕೊಂಡು ತರುವ ಬಗೆ ಹೇಗೆ? ಇನ್ನು ಪ್ರವಾಸದಲ್ಲಿ ಇವುಗಳನ್ನು ಸಂಬಾಳಿಸಿಕೊಂಡೊಯ್ಯುವದೊಂದು ತೊಂದರೆಯೆನ್ನುವಿರಷ್ಟೇ? ಆ ಕೆಲಸವನ್ನು ನಾನು ಹೇಗಾದರೂ ಮಾಡಿಕೊಳ್ಳುವೆನು. ಅದರ ಚಿಂತೆ ಬೇಡ" ಹೀಗೆಂದು ಹೇಳಿ ತನ್ನ ಹಟವನ್ನೇ ನಡಿಸತೊಡಗಿದಳು; ಆದರೂ ಕಡೆಗೆ ಮೋರಪ್ಪನ ಮಧ್ಯಸ್ಥಿಕೆಯ ಮೇರೆಗೆ ಆ ಎಲ್ಲ ಸಣ್ಣ ಪುಟ್ಟ ಜಿನಸುಗಳನ್ನು ಒಯ್ಯಬಾರದೆಂದು ನಿಷ್ಕರ್ಷವಾಯಿತು.

ಹುಣ್ಣಿವೆಯು ಕಳೆಯಿತು. ನಾಳೆ ಬೆಳಗ್ಗೇ ಪ್ರಯಾಣ ಮುಹೂರ್ತವು. ಅದರಿಂದ ಇಂದೇ ಸೊಸೆಯನ್ನು ತವರು ಮನೆಯಿಂದ ನಮ್ಮ ಮನೆಗೆ ಕರೆತರಬೇಕಾಗಿತ್ತು. ಮೋರಪ್ಪನು ಈ ಮೊದಲೇ ನಮ್ಮ ಬೀಗರ ಮನೆಗೆ ಹೋಗಿ ನಾವು ನಮ್ಮ ಸೊಸೆಯನ್ನು ನಮ್ಮ ಜೊತೆಗೆ ಬೆಂಗಳೂರಿಗೆ ಕರೆದೊಯ್ಯುವೆವೆಂಬದನ್ನು ತಿಳಿಸಿದ್ದನು. ಇಂದು ನಾನೇ ಸ್ವತಃ ಹೋಗಿ ಬೀಗರಿಗೆ ಈ ಸಂಗತಿ ತಿಳಿಸಿ ಬರಬೇಕು; ಹಾಗು ಇಂದು ಸಂಜೆಯ ಮುಂಚೆಯೇ ಅವಳನ್ನು ಇಲ್ಲಿಗೆ ಕರೆಸಿಕೊಳ್ಳಬೇಕು, ಎಂದು ನಿರ್ಧರಿಸಿಕೊಂಡು ನಾನು ಬೀಗರ ಮನೆಗೆ ಹೋದೆನು; ಹಾಗು ಅವರಿಗೆ ನಮ್ಮ ಬೆಂಗಳೂರ ಪ್ರಯಾಣದ ಸಂಗತಿಯನ್ನರುಹಿ, ನಮ್ಮ ಸಂಗಡ ಸೊಸೆಯನ್ನೂ ಕರೆದೊಯ್ಯುವೆವೆಂದು ಹೇಳಿದೆನು. ಅವರು ಒಮ್ಮೆಲೆ ನನ್ನ ಆ ಬೇತಿಗೆ ಒಪ್ಪಲಿಲ್ಲ; ಆದರೆ ನಾನು ಯುಕ್ತಿ-ಪ್ರಯುಕ್ತಿಗಳಿಂದ ಅವರನ್ನು ಒಡಂಬಡಿಸಿದೆನು. ಬಳಿಕ ನಾನು ಮನೆಗೆ ಹಿಂದಿರುಗಿದೆನು. ಆಗ ನಮ್ಮ ಬೀಗನು-ನಾನಾರಾಯನು--ನನ್ನನ್ನುದ್ದೇಶಿಸಿ:—ಗುರುಭಟ್ಟರೇ, ನಾನೂ ಈಗ ನಿಮ್ಮ ಬೆನ್ನಹಿಂದೆಯೇ ನಿಮ್ಮಲ್ಲಿಗೆ ಬರುತ್ತೇನೆ. ಎಲ್ಲಿಯಾದರೂ ಹೊರಗೆ ಹೋಗುವದಿದ್ದರೆ ನಾನು ಬರುವ ವರೆಗೆ ಹೋಗಬೇಡಿರಿ, ಎಂದು ಹೇಳಿದನು.

ನಾನಾರಾಯನು ಹೀಗೆ ಹೇಳಿದ ಕಾರಣವೇನೆಂಬದನ್ನು ಯೋಚಿಸುತ್ತ ನಾನು ಸಾವಕಾಶವಾಗಿ ಮನೆಗೆ ಬಂದು ತಲುಪುವಷ್ಟರಲ್ಲಿ ಆತನೂ ಬಂದೇ ಬಿಟ್ಟನು. ಅವನು ಬಂದವನೇ:—"ಗುರುಭಟ್ಟರೇ, ಇಂದು ನೀವೆಲ್ಲರೂ ನಮ್ಮಲ್ಲಿಗೆ ಊಟಕ್ಕೆ ಬರ ಬೇಕು. ಒಳಗೆ ಹೇಳಲಿಕ್ಕೆ ಹೆಂಗಸರು ಈಗ ಬರಬಹುದು. ಊಟವಾದ ಬಳಿಕ ಶಾರದೆಯನ್ನು ಕರಕೊಂಡು ಬರುವಿರಂತೆ ಅವಳೊಡನೆ ನನ್ನ ಚಿಕ್ಕ ಮಗಳನ್ನೂ ಕಳಿಸುವೆವು" ಎಂದು ಹೇಳಿದನು.

ನಾನು ಅದಕ್ಕೆ ಕೇವಲ ಲೌಕಿಕ ದೃಷ್ಟಿಯಿಂದ:—"ನಾನಾರಾಯರೇ, ನೀವು ಸುಮ್ಮನೆ ಇಷ್ಟು ತೊಂದರೆಯನ್ನೇಕೆ ತಕ್ಕೊಳ್ಳುವಿರಿ? ನಾವು ನಿಮ್ಮ ಬೀಗರೇ ಇರು ವೆವು. ಇಂದಿನ ಒಂದು ಊಟದಿಂದ ಬೇರೆ ಪೂರೈಸುವಂತಿಲ್ಲವಷ್ಟೆ?" ಎಂದೆನ್ನಲು, ನನ್ನ ಈ ಮಾತಿಗೆ ಕೊಡಬೇಕಾದ ಉತ್ತರವನ್ನು ಅವರು ಕೊಟ್ಟೇಬಿಟ್ಟರು; ಹಾಗು ಮನೆಗೆ ಹೋಗುವದಕ್ಕೆಂದು ಎದ್ದು ನಿಂತರು. ಬಳಿಕ ಅವರು ಮೋರಪ್ಪನ ಕಡೆಗೆ ಹೊರಳಿ: ಮೋರಪ್ಪನವರೇ, ನೀವು, ಅಳಿಯದೇವರು, ಹುಡುಗರು ಎಲ್ಲರೂ ನಮ್ಮ ಲ್ಲಿಗೆ ಇಂದು ಊಟಕ್ಕೆ ಬರತಕ್ಕದ್ದೀ, ಎಂದು ಹೇಳಿ ದಾರೀ ಹಿಡಿದರು.

ನಾನಾರಾಯನು ಹೊರಟು ಹೋದುದನ್ನು ತಿಳಿದು ನನ್ನ ಗೃಹಿಣಿಯು ತಡ ವರಿಸುತ್ತ ನಡುಮನೆಯ ಬಾಗಿಲವರೆಗೆ ಬಂದು ಒಳ್ಳೇ ಉತ್ಸುಕತೆಯಿಂದ ನನ್ನನ್ನು ಪ್ರಶ್ನಿಸಿ:—ಇಂದು ಬಾಳನ ಮಾವನ ಮನೆಗೆ ನಮಗೆಲ್ಲರಿಗೂ ಆಮಂತ್ರಣ ಬಂದಿದೆ ಯೇ? ಭಲೆ! ಭಲೆ!! ನಮ್ಮ ಬೀಗರೊಳ್ಳೇ ಉದಾರರಾದರೆನ್ನಬೇಕು! ಅಥವಾ ಅವರ ಮನೆಯು ಯಾವುದೊಂದು ದೇವರ ಹರಕೆ-ಗಿರಕೆಯಿದ್ದೀತು. ಅದರಲ್ಲಿ ನಮಗೂ ಆಮಂತ್ರಣ ಕೊಡುವ ಬೇತು ಮಾಡಿರಬಹುದು. ಹಾಗಿಲ್ಲದಿದ್ದರೆ ಆ ಕವಡಿ ಚುಂಬಕ ಚಿನಿವಾಲನಿಗೆಲ್ಲಿ ಖರ್ಚು ಮಾಡಲಿಕ್ಕೆ ಬೇಕು? ಇತ್ಯಾದಿ ಶಬ್ದಗಳಿಂದ ಅವ ರನ್ನು ಆಡಿಕೊಳ್ಳತೊಡಗಿದಳು. ಇಷ್ಟರಲ್ಲಿ ನಾನಾರಾಯನ ಹೆಂಡತಿಯು ಕೈಯಲ್ಲಿ ಕುಂಕುಮದ ಕರಂಡಕವನ್ನು ಹಿಡಿದು, ಬಗಲಲ್ಲಿ ಒಂದು ಚಿಕ್ಕ ಕೂಸನ್ನೆತ್ತಿಕೊಂಡು ನಮ್ಮ ಮನೆಗೆ ಆಮಂತ್ರಣ ಹೇಳಲಿಕ್ಕೆಂದು ಬಂದಳು. ಕೂಡಲೆ ಅವರೀರ್ವ ರಲ್ಲಿ ಒಳಗೆ ಎಷ್ಟೋ ಹೊತ್ತಿನ ವರೆಗೆ ಸಂಭಾಷಣ ನಡೆಯಿತು. ನಾನು ಅತ್ತ ಕಡೆಗೆ ಲಕ್ಷ್ಯಕೊಡಲಿಲ್ಲ. ಯಾಕಂದರೆ ಅದು ಹೆಂಗಸರ ನಿತ್ಯದ ಕೆಲಸವೇ ಆಗಿತ್ತು.

ಅಂದು ಬೀಗರ ಮನೆಯಲ್ಲಿ ಸಮೀಚೀನ ಊಟವಾಯಿತು; ರಾತ್ರಿಯಲ್ಲಿ ನಮ್ಮ ಮಿತ್ರ ಭಾನಂಭಟ್ಟರಲ್ಲಿ ಯಥೇಚ್ಛ ಫಲಾಹಾರವೂ ಆಯಿತು. ಮರುದಿನ ಬೆಳಗಿನ ನಾಲ್ಕು ಹೊಡೆಯುವ ಮೊದಲೇ ಬಾಡಿಗೆಯವನಿಗೆ ಚಕ್ಕಡಿ ಹೂಡಿ ತಂದು ನಮ್ಮ ಮನೆಯ ಬಾಗಿಲಿಗೆ ನಿಲ್ಲಿಸಲಿಕ್ಕೆ ತಿಳಿಸಿದೆವು. ಮೋರಪ್ಪನೂ ನಮ್ಮ ಜೊತೆಗೆ ಬೆಂಗಳೂರಿಗೆ ಬರತಕ್ಕವನಿದ್ದನು. ಊರಿಗೆ ಹೋಗುವ ಲವಲವಿಕೆಯ ಮೂಲಕ ಅಂದು ರಾತ್ರಿ ಹುಡುಗರು-ಹುಪ್ಪಡಿಗಳಿಗೆ ಕೂಡ ಬೇಗನೆ ನಿದ್ರೆ ಹತ್ತಲಿಲ್ಲ. ಹುಡು ಗರು ಹೇಗಾದರೊಮ್ಮೆ ಬಿದ್ದುಕೊಂಡ ಬಳಿಕ ನಾನೂ ಮೋರಪ್ಪನೂ ಎಷ್ಟೋ

ಹೊತ್ತಿನ ವರೆಗೆ ಹರಟೆ ಹೊಡೆಯುತ್ತ ಪಡಸಾಲೆಯ ಮೇಲೆಯೇ ಕುಳಿತಿದ್ದೆವು. ಒಳಗೆ ನನ್ನ ಗೃಹಿಣಿಗೂ ನಿದ್ದೆ ಬರಲಿಲ್ಲ; ಮನಸ್ಸಿಗೆ ಸಮಾಧಾನವೂ ಇರಲಿಲ್ಲ; ಅದರಿಂದ ಅವಳೂ ನಡುಮನೆಯ ಬಾಗಿಲಿಗೆ ಬಂದು ಕುಳಿತು:— ಇಂದು ಇಂಥಿಂಥವರು ನನಗೆ ಒಳ್ಳೊಳ್ಳೇ ಖಣ ಕೊಟ್ಟು ಉಡಿತುಂಬಿದರು; ಇಂಥಿಂಥವರಿಂದ ಇನ್ನು ಬರತಕ್ಕ ಬಾಕಿಯಿದೆ, ಎಂದು ಹೇಳುತ್ತಿರಲು, ಅವಳಿಗೆ ತಾನಿನ್ನು ಪರಸ್ಥಳಕ್ಕೆ ಹೊರಟದ್ದರಿಂದ ಮನಸ್ಸಿಗೆ ಬಹಳ ಕೆಡಕೆನಿಸಿತು. ಹಗಲೆಲ್ಲ ಸಾಮಾನು-ಸಟ್ಟು ಗಳಿಂದ ತುಂಬಿದ್ದ ನಮ್ಮ ಮನೆಯು ಒಂದು ರೀತಿಯಾಗಿ ಹಾಳು ಹಾಳು ಸುರಿಯ ತೊಡಗಿತು. ಪಡಸಾಲೆಯಲ್ಲಿ ಒಂದು ಕಡೆಗೆ ಸಂಗಡ ಒಯ್ಯತಕ್ಕ ಸಾಮಾನು ಇಡಲ್ಪಟ್ಟಿದ್ದು, ನಡುಮನೆಯಲ್ಲಿ ಹುಡುಗರು ಬಿದ್ದುಕೊಂಡಿದ್ದವು; ಮತ್ತು ಒಳಗೆ ಒಂದು ಮಿಣು ಮಿಣುಕಾದ ದೀಪವು ಉರಿಯುತ್ತಿತ್ತು! ಆಗಿನ ಆ ನಮ್ಮ ಮನೆಯ ದೃಶ್ಯವು ನನಗೂ ಕೂಡ ಬಹು ಭಯಾನಕವಾಗಿ ತೋರಿತು. ಅಂದ ಮೇಲೆ ನನ್ನ ಗೃಹಿಣಿಗೆ ಹೇಗೆನಿಸಿರಬಹುದೆಂಬದನ್ನು ಆಗಿನ ಆಕೆಯ ಇಳಿಮೋರೆ, ಚಿವುಗಣ್ಣು ಇವು ಗಳ ಮೇಲಿಂದ ಬರೆದು ತಿಳಿಸಲವಶ್ಯವಿಲ್ಲ.

ಆ ರಾತ್ರಿ ನಾವು ಮೂವರೂ ನಿದ್ದೆ ಮಾಡಲಿಲ್ಲ; ನಿದ್ದೆಮಾಡಲಿಲ್ಲೆನ್ನುವದಕ್ಕಿಂತ ಅದು ನಮಗೆ ಬರಲೇ ಇಲ್ಲೆನ್ನುವದು ಹೆಚ್ಚು ಸಯುಕ್ತಿಕವಾದೀತು. ವಿಧವಿಧದ ಆಲೋಚನೆಯಲ್ಲಿಯೇ ಆ ಭಯಾನಕ ರಾತ್ರಿಯನ್ನು ಕಳೆದೆವು. ಮೂರನೇ ಪ್ರಹ ರವು ಮುಗಿಯಲು, ಮೋರಪ್ಪನು ಚಟಕ್ಕನೆ ಎದ್ದು: ನಾನಿನ್ನು ಬಾಡಿಗೆಯವನನ್ನು ಕರೆತರುವೆನು; ಆ ಹಳ್ಳಿಯ ಜನರಿಗೆ ವೇಳೆಯ ಮಹತ್ವವೇ ತಿಳಿಯದು. ತಡವಾಯಿ ತೆಂದರೆ ಮುಹೂರ್ತವು ತಪ್ಪಿ ದಾರಿಯಲ್ಲಿ ಸುಮ್ಮನೆ ತೊಂದರೆಗೊಳಗಾಗಬೇಕಾ ದೀತು, ಎಂದು ಹೇಳಿದವನೇ ಮನೆಯಿಂದ ಹೊರಬಿದ್ದನು. ಮುಂದೆ ಸ್ವಲ್ಪ ಹೊತ್ತಿ ನಲ್ಲಿಯೇ ಚಕ್ಕಡಿಯು ಬಂದು ನಮ್ಮ ಬಾಗಿಲಿಗೆ ನಿಂತಿತು. ಬಳಿಕ ನಾನೂ ಮೋರಪ್ಪನೂ ಕೂಡಿ ಗಾಡಿಯುವನಿಂದ ಪಡಸಾಲೆಯ ಮೇಲಿನ ಗಂಟು ಮೂಟೆಗಳ ನ್ನೆಲ್ಲ ಚಕ್ಕಡಿಯಲ್ಲಿ ತುಂಬಿಸತೊಡಗಿದೆವು ಸಾಮಾನುಗಳನ್ನು ಹೊತ್ತುಕೊಂಡು ಹೋಗುವಾಗ "ಏನರೀಽಪಾ, ಏಟು ಒಜ್ಜೇವಯ್ತೆಲ್ಲಾ? ಮುಂಕ್ಕಟ ತಿಳಿಸಿದ್ದರೆ ನಾನು ಈಟ ಬಾಡಿಗ್ಗೆ ಒಪ್ಪುತ್ತಿದ್ದಿಲ್ಲ. ಧಣೇರ, ಕುಸಿ ಕೊಡಬೇಕು ನೋಡ್ರಿ" ಎಂದು ಆಗಾಗ್ಗೆ ಅನ್ನುತ್ತ ಹೇರಿದನು. ನಾವು ಸಾಮಾನು ಹೇರಿದ ಬಳಿಕ ಮೋರಪ್ಪನು ನಮ್ಮ ಬೀಗರ ಮನೆಗೆ ಹೋಗಿ ಅವರನ್ನು ಎಬ್ಬಿಸಿ ಬಂದನು. ಯಾಕಂದರೆ ನಮ್ಮ ಗಾಡಿಯು ಅವರ ಮನೆಯ ಮುಂದೆಯೇ ಹಾಯ್ದು ಹೋಗಬೇಕಾಗಿತ್ತು. ಹೋಗುವಾಗ ಅವರಿಗೆ ಭೆಟ್ಟಿಯಾಗಿ, ಅವರ ಮಗಳನ್ನು ಅವರಿಗೆ ಭೆಟ್ಟಿ ಮಾಡಿಸಿ ಕೊಂಡು ಹೋಗಬೇಕಾಗುತ್ತಿತ್ತು.

ಚಕ್ಕಡಿ ಹೇರಿ ಸಿದ್ಧವಾದ ಕೂಡಲೆ ನಾವು ನಮ್ಮ ಹುಡುಗರನ್ನೆಲ್ಲ ಎಬ್ಬಿಸಿ, ಮೋರೆ ತೊಳಿಸಿ, ದೇವರಿಗೆ ನಮಸ್ಕಾರ ಮಾಡಹಚ್ಚಿದೆವು. ನಾವೂ ನಮ್ಮ ಕುಲ

ದೇವರಿಗೆ ಸಾಷ್ಟಾಂಗ ಪ್ರಣಿಪಾತ ಗೈದೆವು. ಒಯ್ಯತಕ್ಕ ಜೀನಸುಗಳೇನಾದರೂ ಒಳಗೆ ಉಳಿದಿವೆಯೇನೆಂಬದನ್ನು ನಾನೂ ನನ್ನ ಗೃಹಿಣಿಯೂ ಮೂರು ಮೂರು ಸಾರೆ ನೋಡಿದೆವು. ಬಳಿಕ "ವಕ್ರತುಂಡ ಮಹಾ ಕಾಯ ಸೂರ್ಯ ಕೋಟಿ ಸಮ ಪ್ರಭ | ನಿರ್ವಿಘ್ನಂ ಕುರು ಮೇ ದೇವ ಸರ್ವ ಕಾರ್ಯೇಷು ಸರ್ವದಾ | " "ತದೇವ ಲಗ್ನಂ ಸುದಿನಂ ತದೇವ" ಎಂದಂದು, ಪ್ರಯಾಣ ಶ್ಲೋಕಗಳನ್ನು ಪಠಿಸುತ್ತ ಮನೆಯಿಂದ ಹೊರಬಿದ್ದೆವು. ಬಾಗಿಲುಗಳಿಗೆ ಕೀಲಿ ಹಾಕಿದೆವು. ಹುಡುಗರು ಈ ಮೊದಲೇ ಗಾಡಿಯವನ ಸಹಾಯದಿಂದ ಚಕ್ಕಡಿಯನ್ನು ಹತ್ತಿ ತಮತಮಗಿಷ್ಟವಾದ ಸ್ಥಳದಲ್ಲಿ ಕುಳಿತುಕೊಳ್ಳುವ ಸಲುವಾಗಿ ಬಡಿದಾಡತೊಡಗಿದ್ದವು. ನಾನು ನನ್ನ ಗೃಹಿಣಿಗೂ ಗಾಡಿಯನ್ನೇರ ಹೇಳಿದೆನು. ಅದಕ್ಕೆ ಅವಳು:-"ಆ ಜಾನಕೀಬಾಯಿಗೆ ಹೇಳಿ ಬರುವೆನು; ಈ ಸಾವಿತ್ರೀಬಾಯಿಯು ನಾಳೆ ಹೋಗುವಾಗ ಬಂದೇ ತೀರಬೇಕೆಂದು ಆಗ್ರಹ ಮಾಡಿರುತ್ತಾಳೆ. ಅಗೋ, ಆ ಸುಭದ್ರಿಯ ಮನೆಯು ದಾರಿಯಲ್ಲೇ ಇದೆ. ನಾನು ಅವರೆಲ್ಲರಿಗೆ ಭೆಟ್ಟಿಯಾಗಿ ಬಳಿಕ ಹತ್ತುವೆನು. ಗಾಡಿಯು ಸಾಗಲಿ" ಎಂದಂದು ಹೊರಟೇ ಬಿಟ್ಟಳು. ನಾನೂ ಮೋರಪ್ಪನೂ ಚಕ್ಕಡಿಯ ಹಿಂದೆ ನಡೆದೆವು. ಬಾಡಿಗೆಯವನು ಗಾಡಿಯ ಮೂಕಮರದ ಮೇಲೂ ಗಾಲಿಗಳ ಮೇಲೂ ನೀರು ಹಾಕಿಸಿ, ಬಸವಣ್ಣನಿಗೆ ಶರಣು ಹೊಡೆದು, ಎತ್ತುಗಳ ಡುಬ್ಬದ ಮೇಲೆ ಚಪ್ಪರಿಸಿ ಗಾಡಿಯನ್ನು ಬಿಟ್ಟನು.

ನಮ್ಮ ಬೀಗರ ಮನೆಯು ಸಮೀಪಿಸಿತು. ಅಷ್ಟರಲ್ಲಿ ನನ್ನ ಗೃಹಿಣಿಯು ಸಮೀಪದ ಒಂದು ಮನೆಯ ಬಾಗಿಲಿಗೆ ಹೋಗಿ "ಯಮುನಕ್ಕಾ, ಯಮುನಕ್ಕಾ! ಬಾಗಿಲ ತೆರೆಯಿರೇ ನಮ್ಮವ್ವಾ" ಎಂದು ಮೂರು ಮೂರು ಸಾರೆ ಒದರಿದಳು; ಆದರೆ ಒಳಗಿನಿಂದ ಯಾರೂ ಪಿಟ್ಟೆನ್ನಲಿಲ್ಲ; ಬಾಗಿಲವನ್ನೂ ತೆರೆಯಲಿಲ್ಲ. ಅದರಿಂದ ನಿರುಪಾಯಳಾಗಿ ಅವಳು ಇನ್ನು ಮುಂದೆ ಯಾರನ್ನೂ ತಾನಾಗಿ ಭೆಟ್ಟಿಯಾಗುವ ಉಸಾಬರಿಯನ್ನು ಬಿಟ್ಟು ಬಿಟ್ಟಳು; ಯಾಕಂದರೆ ಅದರಿಂದ ತನ್ನ ಋಣಗಳ ವಸೂಲಿಯು ಕಟ್ಟಾದ್ದಲ್ಲದೆ ನಮ್ಮೆಲ್ಲರಿಂದ ಚೇಷ್ಟೆ ಮಾಡಿಸಿಕೊಳ್ಳಬೇಕಾದೀತೆಂಬ ಗಹನ ವಿಚಾರವನ್ನು ಅವಳು ಮಾಡಿದಂತೆ ತೋರಿತು ನಮ್ಮ ಬೀಗರ ಮನೆಯ ಕದವು ಮಾತ್ರ ತೆರೆದಿತ್ತು. ಇದುವರೆಗೆ ಉದ್ವಿಗ್ನವಾಗಿದ್ದು, ದಾರಿಗೆ ಹತ್ತಿದ್ದರಿಂದ ತುಸ ಶಾಂತವಾಗಿದ್ದ ನನ್ನ ಮನಸ್ಸು ಅಲ್ಲಿಗೆ ಹೋಗುತ್ತಲೆ ಮತ್ತೆ ಪೂರ್ವಸ್ಥಿತಿಯನ್ನೈದಿತು. ಹೊಟ್ಟೆಯ ಮಗಳನ್ನು ಮೊದಲನೇ ಸಾರೆ ಅತ್ತೆಯ ಮನೆಗೆ ಕಳಿಸುವಾಗ ತಂದೆ-ತಾಯಿಗಳಿಗಾಗುವ ದುಃಖವು ನಿಜವಾಗಿಯೂ ಬಹು ಭಯಂಕರವಾಗಿರುತ್ತದೆ! ಮಕ್ಕಳನ್ನು ಎರಡನೆಯವರ ಮನೆಗೆ ಕಳಿಸುವಾಗ ಅವರ ಮನಸ್ಸಿನ ಸ್ಥಿತಿಯು ಎಂತಾಗುವದೋ ಅದನ್ನು ಅವರೇ ಬಲ್ಲರು. ನಾವಾದರೂ ಹೆಣ್ಣು ಮಕ್ಕಳ ತಂದೆ-ತಾಯಿಗಳೇ ಆಗಿದ್ದೆವು. ನಮ್ಮ ಹಿರಿಯ ಮಗಳನ್ನು ಅತ್ತೆಯ ಮನೆಗೆ ಕಳಿಸುವಾಗಿನ ಪ್ರಸಂಗವು ನಮಗಿನ್ನೂ ಚೆನ್ನಾಗಿ ನೆನಪಿದ್ದಿತು. ಅದರದೇ ಇದು ಪುನರಾವೃತ್ತಿಯಾಗಿತ್ತೆನ್ನ

ಲಿಕ್ಕೆ ಅಡ್ಡಿಯಿಲ್ಲ. ತಾವು ಇದು ವರೆಗೆ ಜೀವಕ್ಕಿಂತಲೂ ಹೆಚ್ಚು ಮಮತೆಯಿಂದ ಬೆಳಿಸಿದ ತಮ್ಮ ಮಾಂಸದ ಸಜೀವ ಗಂಟನ್ನು ಅಂದರೆ, ತಮ್ಮ ಪಂಚ ಪ್ರಾಣಗಳ ಅಂಶವನ್ನು ಎಲ್ಲ ಬಗೆಯಿಂದಲೂ ಎರಡನೆಯವರ ಸ್ವಾಧೀನ ಮಾಡುವದು ಸಾಮಾನ್ಯ ಕೆಲಸವೇ? ಹೀಗೆ ಮಾಡಿದರೂ ಆ ವಸ್ತುವಿನ ಮೇಲೆ ಎಲ್ಲ ಬಗೆಯಿಂದಲೂ ಅವರ ಸ್ವಾಮಿತ್ವವೇ ಪ್ರಸ್ಥಾಪಿತವಾಗುವದು; ಮತ್ತು ಆ ಸ್ವಾಮಿತ್ವ ನಡೆಯಿಸುವವರು ಆ ತಮ್ಮ ಮಗಳಿಗೆ ಕೇವಲ ಅಪರಿಚಿತರು. ಮೇಲಾಗಿ ಅವರೆಲ್ಲರೂ ಕೃತ ಉಪಕಾರ ವನ್ನು ಸ್ವಲ್ಪವೂ ಸ್ಮರಿಸದೆ, ಕನ್ಯಾದಾನ ಮಾಡಿಕೊಟ್ಟ ಬಗ್ಗೆ ಆಭಾರಮನ್ನಿಸದೆ, ತಮ್ಮ ದೊಡ್ಡಿಸ್ತಿಕೆಯನ್ನೂ ಮಾನ-ಮರ್ಯಾದೆಗಳನ್ನೂ ಅದು ಕೊಡಲಿಲ್ಲ, ಇದು ಬರಲಿಲ್ಲ ಎಂಬದನ್ನೂ ಹೇಳಿಕೊಳ್ಳುವಂತಹರು. ಅದರಿಂದ ಆ ಕನ್ಯೆಯ ತಂದೆ-ತಾಯಿ ಗಳಿಗೆ ಅವಳ ಅಲ್ಪಕಾಲದ ವಿಯೋಗದ ಬಗ್ಗೆಯೂ ಏನೆನಿಸೀತೆಂಬದರ ಕಲ್ಪನೆಯು ಆದಾರಿಗಾಗಬೇಕು? ಬರಿಯ ಕಲ್ಪನೆಯಿಂದಲೇ ಅಪರಿಮಿತವಾದ ದುಃಖವಾಗುತ್ತಿ ರಲು, ಅದು ಪ್ರತ್ಯಕ್ಷ ಅನುಭವಕ್ಕೆ ಬರುತ್ತಿರುವಾಗ ಆ ದುಃಖವು ಯಾವ ಮಜಲಿಗೆ ಮುಟ್ಟಬಹುದೆಂಬದನ್ನು ಹೇಗೆ ಹೇಳಬೇಕು? ತಮ್ಮ ಮಗಳಿಗೆ ಯಾರಾದರೂ ಕೊಂಚ ಬಿರುಸು ಮಾತನಾಡಿದರೆ ನಾಗರ ಹಾವಿನಂತೆ ಭುಸುಗುಟ್ಟುವ ತಾಯಿಯು ತಾನಾಗಿ ತನ್ನ ಮಗಳನ್ನು ದುಷ್ಟ ಅತ್ತೆಯ ಸ್ವಾಧೀನಪಡಿಸುವಾಗ ಅವಳ ಮನಸ್ಸಿಗೆ ಏನೆನಿಸುತ್ತಿರಬಹುದು? ಅವಳ ಕೋಮಲವಾದ ಅಂತಃಕರಣಕ್ಕೆ ಇಷ್ಟು ಕಾಠಿ ಣ್ಯವು ಸುಮ್ಮ ಸುಮ್ಮನೆ ಎಂದಾದರೂ ಪ್ರಾಪ್ತವಾದೀತೆ? ಅಲ್ಲದೆ ಪಶುವಿನ ಬಳಿ ಯಲ್ಲಿದ್ದ ಪಶುವು ಸ್ವಲ್ಪ ಹೊತ್ತು ಅಗಲಿದರೂ ಅವುಗಳ ಜೀವಕ್ಕೆ ಅಸ್ವಸ್ಥತೆಯುಂಟಾ ಗುತ್ತದೆ. ಮೂಕವೃತ್ತಿಯ ಮೂಲಕ ಅವುಗಳಿಗೆ ಅದನ್ನು ಚೆನ್ನಾಗಿ ವ್ಯಕ್ತಪಡಿಸ ಲಿಕ್ಕೆ ಬಾರದಿದ್ದರೂ ಅದು ಅವುಗಳ ಹಾವಭಾವಗಳಿಂದ ಸ್ಪಷ್ಟವಾಗಿ ತೋರುತ್ತದೆ. ಹೆಣ್ಣು ಹುಡುಗರಂತೂ ಹೇಳಿ ಕೇಳಿ ಸಜ್ಞಾನ ಪ್ರಾಣಿಗಳು. ಮಕ್ಕಳ ಸಲುವಾಗಿ ತಾಯಿಯು ಎಷ್ಟು ಕ್ಲೇಶಪಡಬೇಕಾಗುತ್ತದೆಂಬದನ್ನೇನು ಹೇಳಬೇಕಾಗಿದೆಯೋ? ಮತ್ತು ಆ ಮಕ್ಕಳ ವಿಯೋಗವು ಸಾಮಾನ್ಯ ದುಃಸಹವಾದದ್ದೇ? ತಮ್ಮ ದೇಹ, ಗುಣ ಹೆಚ್ಚೇನು, ತಮ್ಮ ದೈವವೂ ಇಡಿ ಜೀವಿತದ ಸಾಫಲ್ಯವೂ ಆದ ವಸ್ತುವನ್ನು ತಾವಾಗಿ ಮಂದಿಯ ಸ್ವಾಧೀನಗೊಳಿಸುವದು; ಮತ್ತು ಹಾಗೆ ಮಾಡುವಾಗ ತಮ್ಮನ್ನು ತಾವೇ ಕ್ಷುಲ್ಲಕವೆಂದೆಂದುಕೊಳ್ಳುವದು. ಇಂಥ ಈ ಸಂಸಾರದೊಳಗಿನ ಅನುಪಮೇಯ ಚಮ ತ್ಕಾರಗಳಿಗೆ ಸ್ವಸಂತೋಷದಿಂದ ಆದಾರು ಭಾಗಿದಾರರಾಗುವರೋ ಆಗಲಿ; ಆದರೆ ನಾನು ನನ್ನ ಸ್ವಂತದ ಹಾಗು ನನ್ನಂತೆಯೇ ಸಂಸಾರಿಕರಾದವರ ಮತದಂತೆ ಈ ಸಂಸಾರದಲ್ಲಿ ತೀರ ಅಸಹ್ಯವಾದ ಹಾಗು ಪೂರ್ಣ ಕ್ಲೇಶಕರವಾದ ಇಂಥ ದುಃಖಕ್ಕೆ ತಾವಾಗಿ ಒಪ್ಪುವದೂ, ಆ ದುಃಖವು ಸ್ಪಷ್ಟವಾಗಿ ಕಾಣುತ್ತಿರಲಿಕ್ಕೂ ಅದರ ವಿಭಾಗ ವನ್ನೇ ಮತ್ತೆ ಮತ್ತೆ ಎತ್ತಿಕೊಳ್ಳಲು ಪ್ರಯತ್ನಿಸುವದೂ 'ಯದ್ಯಪಿ ಲೋಕೇ ಶರಣಂ ಮರಣಂ ತದಪಿ ನ ಮುಂಚತಿ ಪಾಪಾಚರಣಂ' ಎಂಬಂತೆಯೇ ಆಗಿರುವದು. ಇರಲಿ.

ಇದು ವಂಶಪರಂಪರೆಯಿಂದ ಬಂದ ರೂಢಿಯಾಗಿದೆ. ಇದಕ್ಕೆ ಬೇರೆ ಉಪಾಯವು ಇಲ್ಲವೆಂಬದೇ ನಿಶ್ಚಯವು. ನಮ್ಮ ಸೊಸೆಯನ್ನು ನಾವು ನಮ್ಮೊಡನೆ ಬೆಂಗಳೂರಿಗೆ ಕರೆದೊಯ್ಯುವದನ್ನು ನಿಶ್ಚಯಿಸಿದೆವು. ಆದರಲ್ಲಿ ನಮಗೆ ಕಷ್ಟವೇನೆನಿಸಬೇಕು? ಆದರೆ ನಮ್ಮ ಬೀಗರಿಗೆ ಅದು ಪರಮ ದುಃಸಹವಾಗಿ ತೋರಿದ್ದರೆ ಸೋಜಿಗವಲ್ಲ! ಅವರು ಆ ಹುಡುಗಿಯ ಉಡಿ ತುಂಬಿದರು; ಅವಳ ತಾಯಿಯು ತನ್ನ ಕಣ್ಣೀರುಗಳನ್ನು ತನ್ನ ಸೀರೆಯ ಸೆರಗಿನ ಮೇಲೆ ಕೆಡವಿಕೊಳ್ಳುತ್ತ ಅವಳನ್ನು ಒತ್ತಾಯದಿಂದ ದಬ್ಬುತ್ತಲೆ ಕರೆತಂದಳು! ಆ ತಾಯಿಯ ಬಾಯಿಂದ ಶಬ್ದಗಳೇ ಹೊರಡದಾದವು! ದುಃಖವು ಒತ್ತರಿಸಿ ಬಂದು ಗಂಟಲಿಗೆ ಆತುಕೊಂಡಿತ್ತು. ಅವಳ ಗಂಡನಾದ ನಾನಾರಾಯರಾದರೂ ಹತ್ತಿರವೇ ನಿಂತಿದ್ದು "ಹೂಂ, ಮುಗಿಸಿರಿ ಬೇಗನೆ" ಎಂದು ನಡುನಡುವೆ ಅನ್ನುತ್ತಿದ್ದರು; ಆದರೆ ಅವರ ಆ ಶಬ್ದಗಳು ದುಃಖದಿಂದ ತೀರ ನೆನೆದಿದ್ದವು! "ತಂಗೀ, ಮೈನಕ್ಕಾ, ಹೋಗಿ ಬಾ. ನಾಳೆ ವೈಶಾಖಕ್ಕೆ ನಿನ್ನನ್ನು ಕರೆಕಳುಹುತ್ತೇನೆ. ಯೋಚಿಸಬೇಡ. ನಿನ್ನೊಡನೆ ಗೋದಾವರಿಯೂ ಬರುತ್ತಾಳೆ. ತಿಳಿಯಿತೇ? ಅಲ್ಲಿ ಅತ್ತೆ-ಮಾವಂದಿರ ಮಾತು ಕೇಳಿಕೊಂಡಿರು" ಎಂಬ ಶಬ್ದಗಳು ಅವರ ಬಾಯಿಂದ ಹೊರಗೆ ಹೊರಡುತ್ತಿದ್ದರೂ ಒಳಗೆ ಹೊಟ್ಟೆಯಲ್ಲೇನು ನಡೆದಿತ್ತು? ಎಲ್ಲ ಕಡೆಗೂ ಗಲಿಬಿಲಿಯು!

ಬಳಿಕ ನಾನಾರಾಯರು ನನ್ನ ಬಳಿಗೆ ಬಂದು:—"ಗುರುಭಟ್ಟರೇ, ನಿಮಗೇನು ಹೇಳತಕ್ಕದ್ದಿದೆ? ನೀವು ಕುಟುಂಬವತ್ಸಲರೇ ಆಗಿರುವಿರಿ. ಇದಕ್ಕೂ ಹೆಚ್ಚಿಗೆ ನಾನೇನು ಹೇಳಲಿ? ಮಾಯಾಪಾಶವು ಬಹು ಕಠಿಣವಾದದ್ದು!" ಎಂದು ಬಹು ಕಷ್ಟದಿಂದ ಹೇಳಿದರು. ಅತ್ತ ಅವರ ಹೆಂಡತಿಯು ತನ್ನ ಅಳುವನ್ನು ಬಹು ಕಷ್ಟದಿಂದ ಹತ್ತೊತ್ತಿಕೊಂಡರೂ ಅದು ನಿಲ್ಲದ್ದರಿಂದ, ಅಳುವ ದನಿಯಿಂದಲೇ ನನ್ನ ಗೃಹಿಣಿಯನ್ನು ಕುರಿತು:--"ಕಾವಕ್ಕಾ, ಈ ನಮ್ಮ ಮೈನಕ್ಕನನ್ನು ನಿಮ್ಮ ಸ್ವಾಧೀನ ಮಾಡಿಬಿಟ್ಟಿದ್ದೇನೆ. ನೀವು ಬುದ್ಧಿವಂತರಿರುತ್ತೀರಿ. ದೊಡ್ಡ ಗುಣದವರಿರುತ್ತೀರಿ. ನಿಮಗೆ ಹೇಳತಕ್ಕದ್ದೇನೂ ಇರುವದಿಲ್ಲ.........." ಇಷ್ಟೇ ಮಾತಾಡಿ ಅವಳು ತಡೆಯಲಾರದ ತನ್ನ ಅಳುವನ್ನು ತಡೆಯಲಿಕ್ಕೆ ಮತ್ತೆ ಪ್ರಯತ್ನಿಸ ಹತ್ತಿದಳು! "ಈಕೆಯ ಚಿಂತೆಯನ್ನು ಬಿಡಿರಿ"ಂದು ನನ್ನ ಗೃಹಿಣಿಯಾದರೂ ಹೇಳತಕ್ಕ ಸಂಗತಿಗಳನ್ನು ಅವರಿಗೆ ಹೇಳಿದಳು. ಅಷ್ಟರಲ್ಲಿ ನಾನು:—"ನಾನಾರಾಯರೇ, ನೀವು ಹುಚ್ಚರ ಹಾಗೆ ಹೀಗೇಕೆ ಮಾಡುವಿರಿ? ನಮಗೂ ಎರಡು ಮಂದಿ ಹೆಣ್ಣು ಹುಡಗರಿರುತ್ತಾರೆ. ನಾವು ಈ ದುಃಖವನ್ನು ಅನುಭವಿಸಿರುತ್ತೇವೆ. ಅಂತೆಯೇ ನಾವು ನಿಮಗೆ ತಿಳಿಸುವದೇನಂದರೆ, ನೀವು ನಿಮ್ಮ ಮಗಳ ಚಿಂತೆಯನ್ನು ಕೊಂಚವೂ ಮಾಡಬೇಡಿರಿ. ನಮ್ಮ ಎರಡು ಜನ ಹುಡುಗೆಯರಂತೆ ಈ ಮೂರನೆಯವಳೊಬ್ಬಳು, ತಿಳಿಯಿತೇ! ಈ ವಿಷಯದಲ್ಲಿ ನಾವು ಯಾರೂ ಸ್ವಲ್ಪವೂ ಭೇದಭಾವವನ್ನೆಣಿಸಲಾರೆವೆಂಬದನ್ನು ಖಂಡಿತವಾಗಿ ನಂಬಿರಿ."

ನನ್ನ ಈ ಆಶ್ವಾಸನದ ಮಾತುಗಳನ್ನು ಕೇಳಿ ಅವರಿಗೆ ಬಹು ಮಟ್ಟಿಗೆ ಸಮಾಧಾನವೆನಿಸಿತು. ನಾವು ನಮ್ಮ ಸೊಸೆಯನ್ನು ಕರೆದುಕೊಂಡು ಹೋಗಲಿಕ್ಕೆ ನಮ್ಮ ಬೀಗರ ಮನೆಯ ಬಳಿಯಲ್ಲಿ ತುಸ ಹೊತ್ತು ನಿಂತಿರಲು, ನನ್ನ ಸ್ನೇಹಿತರೊಳಗಿನ ೧೫-೨೦ ಜನ ಸ್ನೇಹಿತರು ನನ್ನನ್ನು ಕಳಿಸಲಿಕ್ಕೆಂದು ಅಲ್ಲಿಗೆ ಬಂದು ಸೇರಿದರು. ರಾತ್ರಿಯ ಸಮಯವಾದದ್ದರಿಂದ ಮಂದಿಯ ನಿದ್ರೆಯನ್ನು ಸುಮ್ಮ ಸುಮ್ಮನೆ ಕೆಡಿಸಬಾರದೆಂದು ನಾನು ಅವರವರ ಮನೆಗೆ ಹೋಗಿ ಅವರಿಗೆ ಹೇಳಿ ಬಂದಿರಲಿಲ್ಲ. ಮೊದಲನೇ ದಿನವೇ ಎಲ್ಲರ ಅಪ್ಪಣೆಯನ್ನು ಪಡಕೊಂಡಿದ್ದೆನು; ಆದರೂ ಕಲೆಯುತಕ್ಕ ಆ ಜನರು ಕಲೆತೇಬಿಟ್ಟರು. ಕೆಲ ಜನ ಹೆಣ್ಣುಮಕ್ಕಳೂ ಬಂದರು. ಆ ಮೇಲೆ ಮಾತಾಡುತ್ತಾಡುತ್ತ ನಾವೆಲ್ಲರೂ ಶ್ರೀಗಣಪತಿಯ ಗುಡಿಯವರೆಗೆ ನಡೆದೆವು. ಗುಡಿಯಲ್ಲಿ ಟೆಂಗಿನಕಾಯಿ ದುಡ್ಡುಗಳನ್ನಿಟ್ಟು, ನಮ್ಮ ಮನೆಯವರೆಲ್ಲರಿಗೂ ಗಣಪತಿಗೆ ಸಾಷ್ಟಾಂಗ ನಮಸ್ಕಾರ ಮಾಡಲಿಕ್ಕೆ ಹೇಳಿದೆನು; ಹಾಗು ನಾವೆಲ್ಲರೂ ಬಂಡಿಯನ್ನೇರಿದೆವು. ಹಿಂದಿನಿಂದ ಬರುತ್ತಿರುವ ಜನರ ನಮಸ್ಕಾರಗಳನ್ನು ಸ್ವೀಕರಿಸಿ, ಪ್ರತಿನಮಸ್ಕಾರಗಳಿಂದ ಅವರಿಗೆ ಮನೆಗೆ ಹಿಂದಿರುಗಲು ಹೇಳಿದೆವು; ಆದರೂ ಅವರು: "ನಾವು ಹಿಂದಿರುಗುವೆವು; ಮತ್ತೆ ಎರಡು ಹೆಜ್ಜೆ ಬಂದರೆ ತಪ್ಪೇನು? ಬೇಗನೆ ಮರಳಿ ಬರ್‍ರಿ. ಅಲ್ಲಿಯೇ ಸ್ಥಿರವಾಗಿರಬೇಡಿರಿ. ನಮ್ಮೆಲ್ಲರನ್ನು ಮರೆಯಬೇಡಿರಿ. ಬೆಂಗಳೂರಲ್ಲಿ ಆ ನಮ್ಮ ಅವನಿಗೆ ನಾನು ಹೀಗೆ ಹೀಗೆ ಹೇಳಿದೆನೆಂದು ಹೇಳಿರಿ" ಇತ್ಯಾದಿ ನಿರೂಪಗಳ ಮೇಲೆ ನಿರೂಪಗಳನ್ನು ಹೇಳುತ್ತ, ಬರುತ್ತಲೇ ಇದ್ದರು. ಅವರೆಲ್ಲರಿಗೂ ಒಮ್ಮೆ ಗೋಣು ಅಲ್ಲಾಡಿಸಿ, ಇನ್ನೊಮ್ಮೆ ಹೂಂಕಾರ ಕೊಡುತ್ತ ನಾನು ಉತ್ತರವೀಯುತ್ತಿದ್ದೆನು.

ಹೀಗಾಗುತ್ತಾಗುತ್ತ ಊರ ಹೊರಗಿನ ಅಗಸಿಯ ವರೆಗೂ ಅವರು ಬಂದರು. ಬಳಿಕ ಅವರಲ್ಲಿಯ ಒಬ್ಬೊಬ್ಬರೇ ಹಿಂದಿರುಗ ಹತ್ತಿದರು. ನಾನಾರಾಯರು ಮಾತ್ರ ಚಕ್ಕಡಿಯ ಡಂಬರಿಗೆಯನ್ನು ಹಿಡಿದುಕೊಂಡು ನಮ್ಮ ಹಿಂದೆ ಬಂದೇ ಬಂದರು. ಕಡೆಗೆ ನಾನು ಅವರಿಗೆ:—"ನಾನಾರಾಯರೇ, ನೀವು ಅದೆಷ್ಟು ದೂರ ಕಳಿಸಬರುವವರು? ಅಗೋ, ಚಿಕ್ಕಮೈಲಾರವು ಕೂಡ ಬಂತು. ನೀವಿನ್ನು ಹಿಂದಿರುಗಿರಿ. ಯಾವುದನ್ನೂ ಯೋಚಿಸಬೇಡಿರಿ. ಬರ-ಹೋಗುವವರ ಸಂಗಡ ನಾನು ಕ್ಷೇಮ-ಸಮಾಚಾರವನ್ನು ತಿಳಿಸುತ್ತಿರುತ್ತೇನೆ. ನೀವೂ ಹೇಳಿಕಳಿಸಿರಿ. ಅಂದರಾಯಿತಲ್ಲವೆ?" ಎಂದು ಗಟ್ಟಿಮುಟ್ಟಾಗಿ ಹೇಳಿದ ಬಳಿಕ ಅವರೊಮ್ಮೆ ನಿಂತುಕೊಂಡರು; ಹಾಗು ನಮ್ಮ ಬಂಡಿಯು ಕಣ್ಣಿಗೆ ಕಾಣಿಸುವವರೆಗೂ ಅಲ್ಲಿಯೇ ನೋಡುತ್ತ ನಿಂತು, ಬಳಿಕ ಹಿಂದಿರುಗಿದರು.

ನಮ್ಮ ಸರ್ಪಪುರಿಯ ಜನರೆಲ್ಲರೂ ಹೊರಟು ಹೋದ ಬಳಿಕ ನನ್ನ ಮನಸ್ಸು ಮತ್ತೆ ಚಂಚಲವಾಯಿತು. ಆ ಬಂಡಿಯಲ್ಲಿ ಮೋರಪ್ಪನೂ ನಾನೂ ಇಬ್ಬರೇ ವಯಸ್ಸಾದ ಗಂಡಸರು. ಆಗ ನನ್ನ ಕಂಠವು ಬಿಗಿದು ಬಂದಿತ್ತು. ಅದರಿಂದ ಎಷ್ಟೋ

ಹೊತ್ತಿನ ವರೆಗೆ ನಮ್ಮ ಬಾಯಿಂದ ಶಬ್ದಗಳೇ ಹೊರಡಲಿಲ್ಲ. ರೇಲ್ವೆ ಸ್ಟೇಶನ್ನಿಗೆ ಹೋಗುವ ವರೆಗೂ ಮನೆಯ ಕಡೆಯ ಧ್ಯಾಸವೇ ಇದ್ದಿತು; ಆದರೆ ಹರಿಹರದ ತಿಕೀಟು ತಕ್ಕೊಂಡು ರೈಲು ಹತ್ತಿದ ಬಳಿಕ ಆ ತೀವ್ರವಾದ ರೈಲಿನ ವೇಗದ ಮೂಲಕವೋ ಏನೋ ನಮ್ಮ ಮನೆಯ ಕಡೆಯ ಚಿಂತೆಯು ಮೆಲ್ಲ-ಮೆಲ್ಲನೆ ಹಿಮ್ಮೆಟ್ಟತೊಡಗಿತು.

ನಾವು ಹರಿಹರದಲ್ಲಿಳಿದು ನಮ್ಮ ಬೀಗರ ಮನೆಯಲ್ಲಿ ನಮ್ಮ ಮಾಲತಿಯನ್ನು ಬಿಟ್ಟು, ಮರುದಿನವೇ ಮುಂದಕ್ಕೆ ಪ್ರಯಾಣ ಮಾಡಿದೆವು. ರೈಲಪ್ರವಾಸದಿಂದ ಒಂದೇ ದಿನದಲ್ಲ ನೂರಾರು ಹರದಾರಿ ಪ್ರವಾಸವನ್ನು ಸುಖವಾಗಿ ಮಾಡಬಹುದಾಗಿದ್ದರೂ, ಎತ್ತಿನ ಬಂಡಿಯ ಪ್ರವಾಸದಷ್ಟು ಮನೋರಂಜನವು ಅದರಲ್ಲಿಲ್ಲೆಂದು ನಮ್ಮಂತಹ ಹಳೇ ಪೀಳಿಗೆಯ ಜನರಿಗೆ ಅನಿಸದಿರಲಾರದು. ನಾವು ನಿಯಮಿತ ವೇಳೆಗೆ ಬೆಂಗಳೂರಿಗೆ ತಲುಪಿದೆವು. ನಮ್ಮ ಪೂರ್ವ ಸೂಚನೆಯ ಮೇರೆಗೆ ನಮ್ಮ ಯಜಮಾನರಾದ ಕಟ್ಟೀಮನೆ ವಾಸುದೇವರಾಯರ ಆಳು ರೇಲ್ವೆಸ್ಟೇಶನ್ನಿನಲ್ಲಿ ಕಾದಿದ್ದನು; ಹಾಗು ಆತನು ಬಾಡಿಗೆಯ ಗಾಡಿಗಳನ್ನು ಮಾಡಿ, ನಮ್ಮೆಲ್ಲರನ್ನೂ ನಮ್ಮ ಯಜಮಾನರ ಮನೆಗೆ ಕರೆದೊಯ್ದನು.

ನಾನು ಬೆಂಗಳೂರಿಗೆ ತಲುಪಿ, ನಮ್ಮ ಯಜಮಾನರ ಮನೆಯಲ್ಲಿ ಸಕುಟುಂಬವಾಗಿ ಪ್ರವೇಶಿಸಿದ ಕೂಡಲೆ ನನಗೆ ಮತ್ತೊಮ್ಮೆ ಸ್ವಗ್ರಾಮ ತ್ಯಾಗದಂತಹ ದುಃಖವಿನ್ನೊಂದಿಲ್ಲವೆಂದೆನಿಸಿತು!

---

## ೫ ಮುತ್ತಲಿಗೆ ಮೂರೇ ಎಲೆ!



ಸರ್ಪುರಿಯನ್ನು ಬಿಟ್ಟು ಬರುವಾಗ ಒಂದು ಬಗೆಯಿಂದ ಪ್ರಕ್ಷುಬ್ಧವಾಗಿದ್ದ ಮನಸ್ಸು ಬೆಂಗಳೂರ-ಬಸವನಗುಡಿಗೆ ತಲುಪಿದ ಬಳಿಕ ಕ್ರಮೇಣ ಶಾಂತವಾಗಹತ್ತಿತು. ಆ ಪಟ್ಟಣದ ವೈಭವ, ಅಲ್ಲಿಯ ಜನರ ರೀತಿ-ನಡಾವಳಿಗಳನ್ನು ನೋಡಿ ಮೊದಮೊದಲು ನಾವೆಲ್ಲರೂ ದಂಗಾಗಿಬಿಟ್ಟೆವು. ನನ್ನ ಗೃಹಿಣಿಗೂ ನಾವೀನ್ಯದ ಮೂಲಕ ಒಳ್ಳೇ ಸಮಾಧಾನವೆನಿಸಿತು. ಹುಡುಗರಂತೂ ಹೇಳಿ ಕೇಳಿ ಹುಡುಗರೇ! ಆದರೆ ಮೋರಪ್ಪನು ಮಾತ್ರ ಅದಾವ ಕಾರಣದಿಂದಲೋ ಏನೋ ಬೆಂಗಳೂರಿಗೆ ತಲುಪಿದಾಗಿನಿಂದ ತುಸ ಚೀತಾಗ್ರಸ್ತನಾದಂತೆ ತೋರತೊಡಗಿದ್ದನು.

ನನ್ನ ಗೃಹಿಣಿಯು ದಾರಿಯಲ್ಲಿ ಮೋರಪ್ಪನನ್ನು ಕುರಿತು:—"ಮೋರಪ್ಪನವರೇ, ಈ ಬೆಂಗಳೂರ-ಮಹಿಸೂರುಗಳಲ್ಲಿ ಈಗ ಟೀಪುವಿನ ರಾಜ್ಯವಿಲ್ಲವಷ್ಟೆ? ಆ

ನೀಚನು ಏನೇನು ಅತ್ಯಾಚಾರ ಮಾಡಿದನೆಂಬದನ್ನು ಸ್ಮರಿಸುವದು ಕೂಡ ಬೇಡ. ಇಂಗ್ಲಿಷರು ಆತನನ್ನು ಗತಿಗಾಣಿಸಿದ್ದೇ ವಿಹಿತವಾಯಿತು!" ಅದಕ್ಕೆ ವೋರಪ್ಪನು ಒಳ್ಳೇ ಗಾಂಭೀರ್ಯದಿಂದ:—"ಛೇ! ಛೇ! ಸದ್ಯಕ್ಕೆ ಅವನ ರಾಜ್ಯವಿಲ್ಲ; ಆದರೂ ಆತನೊಳ್ಳೇ ಧರ್ಮಾತ್ಮನಿದ್ದನು. ಆತನ ಮುಖ್ಯಮಂತ್ರಿಯಾದ ಪೂರ್ಣಯ್ಯ ನೇನು ಸಾಮಾನ್ಯನೇ? ಎಂಥ ದಾನಶೂರನವನು? ಎಂಥ ವಿದ್ವಾಂಸನು? ಗುರು ಭಟ್ಟರೇ, ನಾನೇನು ಹೇಳಲಿ? ಕೇವಲ ಅನ್ನದಾತನವನು! ಪೂರ್ಣಯ್ಯನ ಛತ್ರ ಗಳಿಲ್ಲದ ಊರುಗಳು ಈ ಮೈಸೂರ ಸೀಮೆಯಲ್ಲಿ ಇಲ್ಲವೇ ಇಲ್ಲ! ಅವರ ನೆನಪನ್ನು ಎಷ್ಟೆಂದು ಮಾಡಬೇಕು! ಹೋಯಿತು, ಬ್ರಾಹ್ಮಣರಿಗೆ ಅನುಕೂಲವಾಗಿದ್ದ ರಾಜ್ಯವೇ ಹಾಳಾಗಿ ಹೋಯಿತು! ದೇವರಿಚ್ಛೆ! ಆದರೆ ಅತ್ತಿಗೀ, ಈಗ ನಿಮಗಾ ಟೀಪೂಸುಲ್ತಾನರ ನೆನಪೇಕಾಯಿತರಿ?" "ಆತನು ಮಹಾ ಚಾಂಡಾಲನಿದ್ದನು. ಆತನು ಯಾವ ಊರಿಗೆ ಹೋಗುತ್ತಿದ್ದನೋ ಅಲ್ಲಿಯ ಬಹು ಜನ ಹೆಂಗಸರು ಪಾತಿವ್ರತ್ಯರಕ್ಷಣೆಗಾಗಿ ಕೆರೆ-ಬಾವಿಗಳ ಪಾಲಾಗ ಬೇಕಾಗುತ್ತಿತ್ತಂತೆ. ಆ ವಿಷಯಲೋಲುಪನು ಪೂರ್ಣಯ್ಯನ ಮನೆಯವರಿಗೂ ಪೀಡೆಕೊಟ್ಟನಂತೆ. ಈಗ ನಾವಾಗಿ ನಮ್ಮ ಮಕ್ಕಳು ಸೊಸೆಯರೊಡನೆ ಈ ಬೆಂಗಳೂರಿಗೆ ಬಂದು ಆತನ ಉಪಟಳಕ್ಕೆಲ್ಲಿ ಈಡಾಗುವೆವೋ ಎಂದು ಅನಿಸಿದ್ದರಿಂದ ನಾನು ಹಾಗೆ ಅಂದೆನು" ಎಂದು ನನ್ನ ಗೃಹಿಣಿಯು ಹೇಳುತ್ತಿರಲು, ನಮ್ಮ ಬಾಳನು:—"ಅವ್ವಾ, ಇನ್ನೆಲ್ಲಿ ಟೀಪುವು? ಆತನು ಇ. ಸ. ೧೭೯೯ರಲ್ಲಿ ಶ್ರೀರಂಗಪಟ್ಟಣದ ಕೋಟೆಯಲ್ಲಿ ಸತ್ತು ಹೋಗಿರುವನು. ಆ ಮಾತಿಗೀಗ ನೂರು-ನೂರಾಇಪ್ಪತ್ತು ವರ್ಷಗಳಾಗಿ ಹೋದವು" ಎಂದು ಅಂದನು.

ನಮ್ಮ ಬಾಳನ ಈ ಉತ್ತರವನ್ನು ಕೇಳಿ ನನಗೊಳ್ಳೇ ಮೋಜೆನಿಸಿತು ಈ ನಿನ್ನಿನ ಪೋರನು ಮುತ್ತಜ್ಜನಂತೆ ಹೀಗೆ ಹೇಳುವನಲ್ಲ! ಈತನಿಗೆ ಇದೆಲ್ಲ ಹೇಗೆ ಗೊತ್ತಾಯಿತು? ಈ ಬಗ್ಗೆ ನಾನು ಆತನಿಗೆ ಪ್ರಶ್ನೆಮಾಡತಕ್ಕವನು. ಇಷ್ಟರಲ್ಲಿ ಬಾಳನೇ ಮತ್ತೆ—"ವೋರಪ್ಪನವರೇ, ಟೀಪುವು ಬಹು ಶೂರನಿದ್ದನಂತೆ; ಆದರೆ ಮಹಾ ಗರ್ವಿಷ್ಠನಂತೆ! ಇಂಗ್ಲಿಷರೂ ಮರಾಟರೂ ಒಂದಾಗದಿದ್ದರೆ ಆತನು ಹಣಿಯುತ್ತಿದ್ದಿಲ್ಲ. ಅಹುದೇನರೀ?" ಎಂದು ಕೇಳಿದನು. ಆತನ ಆ ಭಾಷಣವನ್ನು ಕೇಳಿದ ಬಳಿಕಂತೂ ಈ ಹುಡುಗನು ಕೇವಲ ಬೃಹಸ್ಪತಿಯೇ ಆಗಿರುತ್ತಾನೆ. ಹುಟ್ಟಿದ ಕೂಡಲೆ 'ಓಂ' ಪ್ರಣವವನ್ನುಚ್ಚರಿಸುವ ಅವತಾರಿಕನಂತೆಯೇ ನಮ್ಮ ಬಾಳನಿರುವನೆಂದು ನನಗನಿಸತೊಡಗಿತು. ಯಾಕಂದರೆ ಟೀಪುವೆಲ್ಲಿದ್ದ, ಶ್ರೀರಂಗಪಟ್ಟಣದ ಯುದ್ಧವೆಂದಾಯಿತು, ಆತನು ಗರ್ವಿಷ್ಠನಿದ್ದನೋ ನಿಗರ್ವಿಯಿದ್ದನೋ ಇದಾರಿಗೆ ಗೊತ್ತು? ನಾನು ದಶಗ್ರಂಥಿಯ ಬ್ರಾಹ್ಮಣನಾಗಿದ್ದರೂ ಯಾವ ಮಂತ್ರದಲ್ಲಿಯೂ ನನಗೆ ಇದಾವದೂ ಕಂಡು ಬಂದಿರಲಿಲ್ಲ. ಇರಲಿ.

ನಾವು ಬೆಂಗಳೂರಿಗೆ ಸುಮಾರು ೧೦-೧೨ ಗಳಿಗೆ ಹೊತ್ತೇರಿದಾಗ ತಲುಪಿದೆವು. ನಮ್ಮ ಯಜಮಾನರು ಮನೆಯಲ್ಲೇ ಇದ್ದರು. ಅವರು ಊಟ ಮಾಡಿ ಕೈ ತೊಳೆ

ಯಲು ಹೊರಗೆ ಬಂದಿದ್ದರು. ಆಗ ನಾನು ಮೋರಪ್ಪನನ್ನು ಕುರಿತು ಮೆಲ್ಲನೆ— "ಇವರು ಇಂದು ಇಷ್ಟು ಬೇಗನೇಕೆ ಊಟ ಮಾಡಿರುವರು?" ಎಂದು ಕೇಳಲು, "ಹತ್ತು ಗಂಟೆಗೆ ಕಚೇರಿಗೆ ಹೋಗಬೇಕಲ್ಲವೆ? ಬೆಳಿಗ್ಗೆ ಎದ್ದು ಯಥಾವಿಧಿಯಾಗಿ ಸ್ನಾನ-ಸಂಧ್ಯೆ ದೇವತಾರ್ಚನೆಗಳನ್ನು ಮಾಡಿಕೊಂಡು ಕೆಲಸಕ್ಕೆ ಬರಲು ಅನುಕೂಲ ವಾಗಬೇಕೆಂದು ಸರಕಾರದವರು ಈ ಅನುಕೂಲತೆಯನ್ನು ಜರುಗಿಸಿರುವರು." ಎಂದು ಮೋರಪ್ಪನು ಹೇಳಿದನು.

ಬಳಿಕ ನಾವೂ ವಾಸುದೇವರಾಯರೂ ಪರಸ್ಪರರ ಯೋಗಕ್ಷೇಮವನ್ನು ಕೇಳಿ ಕೊಂಡೆವು. ಆ ಮೇಲೆ ವಾಸುದೇವರಾಯನು ಒಳಗೆ ಹೋಗಿ ತನ್ನ ಪತ್ನಿಯನ್ನು ಕುರಿತು:—"ಏನೇ, ಇಂದು ಈ ನಮ್ಮ ಉಪಾಧ್ಯಾಯರು ಕುಟುಂಬ ಸಹಿತವಾಗಿ ಬಂದಿದ್ದಾರೆ ಈ ಗುರುಭಟ್ಟರು ಸರ್ಗಪುರಿಯಿಂದ ಬರತಕ್ಕವರಿರುತ್ತಾರೆಂದು ನಾನು ಈ ಮೊದಲೇ ಹೇಳಿರಲಿಲ್ಲವೆ?" ಕೂಡಲೆ ಅವಳು ಅಡಿಗೆಯ ಮನೆಯ ಬಾಗಿಲೊಳ ಗಿಂದಲೇ ನಸು ಲಜ್ಜೆಯಿಂದ ಹೊರಗೆ ಬೊಗ್ಗಿ ನೋಡಿದಳು. ಬಂದ ಅತಿಥಿಗಳಲ್ಲಿ ಹೆಂಗಸರೂ ಇರುವದನ್ನು ಕಂಡು ಅವಳಿಗೆ ತುಸ ಸಮಾಧಾನವೆನಿಸಿತು. ಬಳಿಕ ಅವಳು ಮುಂದೆ ಬಂದು ನನ್ನ ಗೃಹಿಣಿಯನ್ನು ಕುರಿತು "ಬನ್ನಿರಿ; ಇತ್ತ ಒಳಗೆ ಬನ್ನಿರಿ. ಸಾಮಾನು-ಸಟ್ಟುಗಳನ್ನೆಲ್ಲ ಗಂಡಸರು ಸರಿಯಾಗಿ ಇಡುವರು. ಹುಡು ಗರು-ಹುಪ್ಪಡಿಗಳು ಹಸಕೊಂಡಿರಬಹುದು. ನೀವು ಮೊದಲು ಅವರಿಗೆ ಉಣಿಸಿರಿ. ಆ ಮೇಲೆ ನಾವೆಲ್ಲರೂ ಕೂಡಿ ಊಟ ಮಾಡೋಣವಂತೆ. ಈ ನಿಮ್ಮ ಮಗಳ ಹೆಸ ರೇನು? ಮತ್ತು ಹೀಗೆ ನಾಚುತ್ತ ಬರುವ ಈ ಹುಡುಗಿಯು ನಿಮ್ಮ ಸೊಸೆಯೇನು? ಒಳ್ಳೇದಾಯಿತು. ಬಡವರ ಮನೆಗೆ ಭಾಗೀರಥಿ ಬಂದಂತಾಯಿತು" ಮುಂತಾದ ಉಪ ಚಾರದ ಮಾತುಗಳನ್ನಾಡಿದಳು.

ವಾಸುದೇವರಾಯರು ನಮ್ಮ ಸಾಮಾನುಗಳನ್ನೆಲ್ಲ ತಮ್ಮ ಆಳಿನ ಕಡೆಯಿಂದ ತಮ್ಮ ಮನೆಯೊಳಗಿನ ಒಂದು ವಿಶಿಷ್ಟ ಭಾಗದಲ್ಲಿಡಿಸಿದರು; ಮತ್ತು ತಮ್ಮ ತಮ್ಮ ನಾದ ಗೋಪಾಲರಾಯನನ್ನು ಕುರಿತು:—"ಗೋಪಾಲಾ, ಈ ನಮ್ಮ ಪುರೋ ಹಿತರ ವ್ಯವಸ್ಥೆಯನ್ನು ಸರಿಯಾಗಿರಿಸು. ಇವರ ಸ್ನಾನ, ಸಂಧ್ಯೆ, ದೇವತಾರ್ಚನೆ, ಊಟ, ವಾಮಕುಕ್ಷಿಗಳಾಗುವಷ್ಟರಲ್ಲಿ ಕಚೇರಿಯಿಂದ ನಾನೂ ಬರುತ್ತೇನೆ" ಎಂದು ಹೇಳಿ ಲಗುಬಗೆಯಿಂದ ಕಚೇರಿಗೆ ಹೊರಟುಹೋದರು. ಅವರು ನಮ್ಮ ಯಜಮಾನ ರೇ. ಅಂದಬಳಿಕ ಅವರಲ್ಲೇತರ ಸಂಕೋಚವು? ಹೆಂಗಸರು-ಹುಡುಗರ ಪರಿಚಯ ವಿರಲಿಲ್ಲ; ಆದರೆ ಹೆಣ್ಣುಮಕ್ಕಳ ಸ್ನೇಹವನ್ನೇನು ಹೇಳುವದಿದೆ? ಅದು ಆಗಲೆ ಕೂಡಿ ಹೋಯಿತು. ಐದು ಗಳಿಗೆ ಹೊತ್ತಿರಲಿಕ್ಕೆ ವಾಸುದೇವರಾಯರು ಮನೆಗೆ ಬಂದರು. ಆಗ ನಮ್ಮ-ಅವರಲ್ಲಿ ಎಷ್ಟೋ ಸಂಭಾಷಣವಾಯಿತು. ನಾವು ಬೆಂಗಳೂರಿಗೆ ಏಕೆ ಬಂದೆವು; ಉದ್ದೇಶವೇನು; ಮುಂದೇನು ಮಾಡುವದು? ಮುಂತಾದ್ದನ್ನೆಲ್ಲ ಅವರು ನನ್ನಿಂದ ಕೇಳಿಕೊಂಡರು. ನನ್ನ ಆ ಬೇತು ವಾಸುದೇವರಾಯರ ಮನಸ್ಸಿಗೆ

ಬಂತು. ಅದರಿಂದ ಅವರು:—"ಗುರುಭಟ್ಟರೇ, ನೀವು ಹೀಗೆ ಮಾಡಿದ್ದು ಬಹಳೇ ಚೆನ್ನಾಯಿತು. ನಿಮ್ಮ ಹುಡುಗನಾದರೂ ಚಪಲನಾಗಿ ಕಾಣುತ್ತಾನೆ. ಅದರಿಂದ ಈತನು ದೈವತೆರೆಯದಿಲಾರನೆಂದು ಖಂಡಿತವಾಗಿಯೂ ಹೇಳಬಹುದು."

ವಾಸುದೇವರಾಯರ ಈ ಮಾತುಗಳನ್ನು ಕೇಳಿ ನಾನು:—ಈಗಲಂತೂ ಹಾಗೆ ಕಾಣುತ್ತದೆ. ದಾರಿಯಲ್ಲಿ ಒಳ್ಳೇ ಶಕುನಗಳಾಗಿರುತ್ತವೆ. ಮೋರಪ್ಪನವರೇ, ನಾವು ರೈಲಿನಿಂದಿಳಿದು ಊರಲ್ಲಿ ಪ್ರವೇಶಿಸಿದೊಡನೆಯೇ ಸವತ್ಸವಾದ ಧೇನುವು ಎದುರಿಸಲಿಲ್ಲವೆ?" ಎಂದೆನ್ನಲು, "ಭಲೆ! ಹೀಗಾಯಿತಲ್ಲವೆ? ಒಳ್ಳೇ ಶುಭ ಶಕುನ ವಾದಂತಾಯಿತು!" ಎಂದು ರಾಯರು ನುಡಿದರು. ಅಂದು ಶನಿವಾರವೇ ಇದ್ದುದ ರಿಂದ ರಾತ್ರಿಯಲ್ಲಿ ನನಗೆ ಊಟವಿರಲಿಲ್ಲ ಮರುದಿನ ರವಿವಾರವಿದ್ದ ಮೂಲಕ ವಾಸುದೇವರಾಯರ ಕಚೇರಿಗೆ ರಜೆಯಿದ್ದಿತು. ಅದರಿಂದ ಅಂದೇ ಬೇರೆ ಮನೆ ಮಾಡುವ ವ್ಯವಸ್ಥೆ ಮಾಡಬೇಕೆಂದು ನಾನು ಅಂದೆನು. "ಅದೇಕಿಷ್ಟು ಅವಸರ? ನಿಮಗೆ ಇಲ್ಲೇನು ಕೊರತೆಯಾಗಿದೆ?" ಎಂದು ರಾಯರು ಕೇಳಲು, "ನಾಲ್ಕೆಂಟು ದಿನಗಳ ಮಾತಲ್ಲ. ಇಲ್ಲಿಯೇ, ನಿಮ್ಮ ಆಶ್ರಯದಲ್ಲಿಯೇ ನಿರಂತರವಾಗಿರಬೇಕಾಗಿದೆ. ಅಂದ ಮೇಲೆ ಬಿಡಾರ ಮಾಡಲಿಕ್ಕೆ ಸುಮ್ಮನೆ ತಡವೇಕೆ ಮಾಡಬೇಕು? ನಾಳೆಯೇ ಸ್ವತಂತ್ರವಾದ ಮನೆಯನ್ನು ನೋಡಬೇಕು." ಎಂದಂದೆನು; ಹಾಗು ರವಿವಾರ ದಿನವೇ ಬೇರೆ ಮನೆ ಮಾಡುವದನ್ನು ನಾನು ನಿಶ್ಚಯಿಸಿದೆನು. ಯಾಕಂದರೆ ಇಂಥ ಕೆಲಸಗಳಲ್ಲಿ ತಮ್ಮದು ತಾವೇ ಯೋಚಿಸಬೇಕು. ನಾನೊಬ್ಬನು ಹೋಗಿದ್ದರೆ ಆ ಮಾತೇ ಬೇರೆ; ಆದರೆ ನನ್ನ ಜೊತೆಗೆ ಹೆಂಡಿರು-ಮಕ್ಕಳ ದೊಡ್ಡ ದಂಡಿದ್ದಿತು. ಅವರೆಲ್ಲರೊಡನೆ ಮಂದಿಯ ಮನೆಯಲ್ಲಿರುವದೆಂದರೆ, ಅಪಮಾನಕಾರಕ ಸಂಗತಿಗಳ ಸುರಿಗೆಯನ್ನು ತಾನಾಗಿ ತನ್ನನ್ನು ಸುತ್ತವರಿದುಕೊಂಡಂತೆಯೇ ಸರಿ!

ಮರುದಿವಸ ಅದೇ ಓಣಿಯಲ್ಲೊಂದು ಅನುಕೂಲವಾದ ಮನೆಯನ್ನು ನೋಡಿದೆವು; ಮತ್ತು ಅಲ್ಲಿಗೆ ನಮ್ಮ ಸಾಮಾನು-ಸಟ್ಟುಗಳನ್ನೆಲ್ಲ ಒಯ್ದೆವು. ನಾವು ಬಾಡಿಗೆಯ ಮನೆಯಲ್ಲಿರಹತ್ತಿದ ಬಳಿಕ ಸ್ವಂತದ ಮನೆಯ ಬೆಲೆಯ ಅನುಭವವು ನಮಗೆ ಒಳಿತಾಗಿ ಬರತೊಡಗಿತು. ಸ್ವಗ್ರಾಮ, ಸ್ವಜನ, ಸ್ವಗೃಹ ಮುಂತಾದವು ಗಳಲ್ಲಿ ಸ್ವತ್ವವು ಹೇಗಿರುತ್ತದೆಂಬದನ್ನು ನಾವೆಲ್ಲರೂ ಉದಾಹರಣೆ ಸಹಿತವಾಗಿ ಅಲ್ಲಿ ಕಲಿಯಲುಪಕ್ರಮಿಸಿದೆವೆಂದೆಂದರೆ ಅತಿಶಯೋಕ್ತಿಯಾಗಲಾರದು.

ನಾನು ಮನೆಮಾಡಿದ ಕೂಡಲೆ ನಮ್ಮ ಬಾಳನನ್ನು ಸಾಲೆಗೆ ಹಾಕುವ ವ್ಯವಸ್ಥೆಯನ್ನು ನಮ್ಮ ವಾಸುದೇವರಾಯರು ಬಹು ಚನ್ನಾಗಿ ಮಾಡಿದರು. ನಮ್ಮ ಬಾಳನನ್ನು ಮಾಫಿಯಾಗಿ ಸೇರಿಸಿಕೊಳ್ಳುತ್ತೇನೆಂದು ಸಾಲೆಯ ಮುಖ್ಯ ಸಾಹೇಬನು ಹೇಳಿದನು; ಮತ್ತು ಅಭ್ಯಾಸ ಚೆನ್ನಾಗಿ ಮಾಡಿ ಮೇಲು ನಂಬರ ಪಡೆದರೆ, ಕಾಗದ ಪುಸ್ತಕಗಳಿಗೆಂದು ಚಿಕ್ಕ ಸ್ಕಾಲರಶಿಪ್ ಕೂಡ ದೊರೆಯುವದೆಂದು ಅಂದನು. ನಮ್ಮ ಮಗನು ದಿನಾಲು ಸಾಲೆಗೆ ಹೋಗಹತ್ತಿದನು. ಅವನು ಅಲ್ಲಿ ಆ ಸಾಹೇಬ ಜನರಲ್ಲಿ

ಅಭ್ಯಾಸ ಮಾಡತೊಡಗಿದನು ಆದರಿಂದ ಮಡಿ-ಮೈಲಿಗೆಗಳ ಸಂದೇಹವು ಮನಸ್ಸಿನಲ್ಲಿ ಬರಹತ್ತಿತು; ಆದರೆ ಮಹದಾಪೆಯು ನನ್ನ ಕಣ್ಣೆದುರಿಗೆ ದ್ರವ್ಯದರ್ಪಣವನ್ನು ತೋರಿಸಿ ಆ ಎಲ್ಲ ಅನುಮಾನ-ಸಂದೇಹಗಳನ್ನು ಕತ್ತರಿಸಿ ಬಿಡುತ್ತಿತ್ತು. ಏನೇ ಆಗಲಿ, ನಮ್ಮ ಬಾಳನು ನಾಲ್ಕು ಅಕ್ಷರ ಕಲಿತು ಗಳಿಸಹತ್ತಿದನೆಂದರೆ ಸಾಕೆಂದು ನನಗನಿಸುತ್ತಿತ್ತು; ಮತ್ತು ಹಾಗಾಗುವ ವರೆಗೆ ನಾನು ಮಡಿ-ಮೈಲಿಗೆ, ಆಚಾರ-ಅನಾಚಾರಗಳ ಕಡೆಗೆ ನೋಡಲಿಕ್ಕಿಲ್ಲೆಂಬ ನಿಶ್ಚಯುವನ್ನೇ ಮಾಡಿದೆನು. ನನ್ನ ಗೃಹಿಣಿಯು ದಿನಾಲು ಈ ಸಂಬಂಧದ ಯಾವುದೊಂದು ತಕರಾರನ್ನು ಒಳ್ಳೇ ಕೌತುಕದಿಂದ ನನ್ನೆದುರಿಗೆ ತರುತ್ತಿದ್ದಳು: "ನೋಡಿದಿರಾ, ಬಾಳನು ಬರೆಯುಲಿಕ್ಕೆಂದು ದಿನಾಲು ಗರಿಗಳನ್ನು ತರಹತ್ತಿದ್ದಾನೆ! ಅವು ಯಾವ ಹಕ್ಕಿಯು ಎಂಥ ಪುಚ್ಛಗಳೋ ಆದಾರು ಬಲ್ಲರು? ಈ ಇಂಗ್ಲಿಷ ಕಲಿಯುಲಿಕ್ಕೆ ಗರಿಗಳ ಅಗತ್ಯವೇಕೆ? ಬಾರಿಬಾರಿಗೂ ಕೈಗೆ ಉಗುಳು ಹಚ್ಚಿ ಆ ಹೊತ್ತಿಗೆಗಳ ಪಾನುಗಳನ್ನೆಲ್ಲ ಎಂಜಲ ಮಾಡುವನು! ತೊಗಲಿನ ರಟ್ಟಿನ ಹೊತ್ತಿಗೆ ತಂದಿರುವನವನು! ನಿನ್ನೆ ಆತನು ಸಂಧ್ಯಾವಂದನೆಯನ್ನೇ ಮಾಡಲಿಲ್ಲ. ಮೊನ್ನೆ ಮೈಲಿಗೆಯ ನೂಲು ತುಳಿದು ಹಾಗೆಯೇ ಊಟಕ್ಕೆ ಕುಳಿತನು. ಬೆಳಿಗ್ಗೆ ಎದ್ದು ಥೂ! ಥೂ! 'ಗೋಮಾಂಸ! ಗೋಮಾಂಸ! ಮದ್ಯ ಸೆರೆ' ಎಂದು ಪಾಠ ಮಾಡುತ್ತಾನೆ. ಒಂದು ದೇವರ ಹೆಸರೇ? ದಿಂಡರ ಹೆಸರೇ? ಸ್ತೋತ್ರವೇ? ಎಂಥ ಶಿಕ್ಷಣವಿದು! ಮೊನ್ನೆ ರಾತ್ರಿ ಗೂಗೆ ಹಾಗು ಹಡಪದವರ ಶಬ್ದಗಳನ್ನೇ ಪಾಠಮಾಡುತ್ತಿದ್ದನು!"

ಅವಳು ಹೇಳುವ ಇಂಥ ಎಷ್ಟೋ ಮಾತುಗಳನ್ನು ಕೇಳಿ ಕೇಳಿ ನನಗೂ ತಲೆಬೇಸರಿಟ್ಟಿತು. ಅವು ಬೇರೆ ಯಾರ ವಿಷಯುಕ್ಕಾದರೂ ಇದ್ದರೆ ಇಲ್ಲವೆ ಆ ಅಭ್ಯಾಸದಿಂದ ದುಡ್ಡು ದೊರೆಯಲಾರದೆಂದು ನನಗೆ ಅನಿಸಿದ್ದರೆ ನಾನು ಅವಳಿಗಿಂತಲೂ ಹೆಚ್ಚು ಆಕಾಂಡತಾಂಡವವನ್ನು ಮಾಡತಕ್ಕವನೆ! ಆದರೆ ಅಲ್ಲಿ ದುಡ್ಡೇ ದೊಡ್ಡಪ್ಪನ ಆಶೆಯಿದ್ದುದರಿಂದ, ನಾನು ಅವುಗಳನ್ನೆಲ್ಲ ಕಿವಿಗಳಿಲ್ಲದ ಕಿವುಡನಂತೆ ಕೇಳಿ ಸುಮ್ಮನಾಗುತ್ತಿದ್ದೆನು ನಾವು ಸರ್ಪಪುರಿಯನ್ನು ಬಿಟ್ಟು ಬೆಂಗಳೂರಿಗೆ ಬಂದರೂ ಎಲ್ಲ ಬಗೆಯ ಉಪಾಧಿಗಳು, ಪ್ರಾಪಂಚಿಕ ತೊಂದರೆ, ಊಟ-ಉಡಿಗೆಗಳ ಚಿಂತೆ, ಮುಂದಿನ ಬೀತ, ಹುಡುಗರು-ಹುಪ್ಪಡಿಯ ವ್ಯವಸ್ಥೆ ಮುಂತಾದ ಹಲವು ತೊಂದರೆಗಳು ಎಳ್ಳಷ್ಟು ಕಡಿಮೆಯಾಗಲಿಲ್ಲ; ಇಲ್ಲಿ ಮತ್ತೆ ಹೆಚ್ಚೇ ಆದವು! 'ದೂರಿನ ಗುಡ್ಡ ಕಣ್ಣಿಗೆ ನುಣ್ಣಗೆ' ಎಂಬದು ನಿಜವಾಯಿತು. ಊರಲ್ಲಿರುವಾಗ ಬೆಂಗಳೂರಿಗೆ ಹೋದ ಕೂಡಲೆ ಈ ಎಲ್ಲ ತೊಂದರೆಗಳು ಇಲ್ಲದಂತಾಗುವವೆಂದು ನನಗೆ ಅನಿಸುತ್ತಿತ್ತು. ಅಲ್ಲಿ ದಿನಾಲು ದುಡ್ಡು ಹೆಚ್ಚಿಗೆ ದೊರೆಯು ಹತ್ತಿತೆಂದರೆ, ನನ್ನ ತಲೆಯ ಮೇಲಿನ ಸಂಸಾರದ ಹೊರೆಯು ತುಸ ಹಗುರಾದೀತೆಂದು ನಾನು ಮನಸ್ಸಿನಲ್ಲಿ ಯೋಚಿಸಿದ್ದೆನು. ನಾನು ಬೆಂಗಳೂರಿಗೆ ಬಂದ ಮೇಲೆ ಕೆಲ ದಿನಗಳಿಗೆ ಚಾತುರ್ಮಾಸ್ಯಕ್ಕೆ ಪ್ರಾರಂಭವಾಯಿತು. ಸರ್ಪಪುರಿಯ ರೀತಿ-ರಿವಾಜುಗಳು ಇಲ್ಲರಲಿಲ್ಲ; ಆದರೆ

ಸಾವೀನ್ಯವಿದ್ದಾಗ ತುಸ ಮಾನ-ಮರ್ಯಾದೆಯು ಹೆಚ್ಚುವದೇನೋ ನಿಜ. ಪ್ರತಿ ನಿತ್ಯದ ಆ ಊಟದ ಆಮಂತ್ರಣ, ಆ ವಿಪುಲವಾದ ದಕ್ಷಿಣೆಗಳನ್ನು ನೋಡಿ ನನಗೆ ಮೊದಮೊದಲು ಬೆಂಗಳೂರಿಗೆ ಬಂದದ್ದೇ ವಿಹಿತವಾಯಿತೆಂದೆನಿಸಿತು. ಯಾವು ದೊಂದು ಉದ್ಗ್ರಂಥದ ಪಾರಾಯಣ ಮಾಡಿದರೆ ಅಂಥಿಂಥವನಿಗೂ ಇಲ್ಲಿ ನೂರಾರು ರೂಪಾಯಿಗಳ ಪ್ರಾಪ್ತಿಯಾಗುತ್ತದೆ; ಅಂದಬಳಿಕ ನನ್ನಂತಹ ಪ್ರತಿಷ್ಠಿತ ದಶ ಗ್ರಂಥೀ ಬ್ರಾಹ್ಮಣನಿಗೆ ಅದಕ್ಕೂ ಹೆಚ್ಚು ಹಣ ಸಹಜವಾಗಿ ಸಿಕ್ಕೀತೆಂದು ನಾನು ತರ್ಕಿಸಿದೆನು; ಮತ್ತು ಕೆಲದಿನಗಳ ವರೆಗೆ ಹಾಗೆ ಪ್ರತ್ಯಕ್ಷ ಅನುಭವವೂ ಬಂದಿತು. ಇತ್ತ ಪ್ರಾಪ್ತಿಯು ಹೆಚ್ಚಿತೆಂದು ಸಂತೋಷ ಪಡುವುದಾದರೆ ಅತ್ತ ಖರ್ಚೂ ಹೆಚ್ಚಾ ಯಿತು. ಲಂಕೆಯಲ್ಲಿ ಒಂದು ಕಸ್ಪಕ್ಕೆ ಒಂದು ಚಿನ್ನದ ಇಟ್ಟಂಗಿ ಸಿಗುವದೆಂದು ಹೊರಟ ಕ್ಷೌರಿಗರ ಶಂಭುವಿನಂತೆಯೇ ನನ್ನ ಗತಿಯಾಯಿತೆನ್ನಲಿಕ್ಕೆ ಅಡ್ಡಿಯಿಲ್ಲ!

ಆದಾಯದ ಮಾಸದಂತೆ ಖರ್ಚೂ ಹೆಚ್ಚಿತು. ಖರ್ಚು ಹೆಚ್ಚಿದರೆ ಹೆಚ್ಚ ಲೊಲ್ಲದೇಕೆ, ಮನಸ್ಸಿಗಾದರೂ ಸ್ವಾಸ್ಥ್ಯವಿರಬೇಕಾಗಿತ್ತು. ಅದಿಲ್ಲ. ಅದಿರುವ ದಾದರೂ ಹೇಗೆ? ನನ್ನ ಗೃಹಿಣಿಯು ಮನೆಯಲ್ಲಿ ಯಾವುದೊಂದು ಜೀನಸಿಲ್ಲೆಂದು ಅಂದರೆ ಅದನ್ನು ತರಲಿಕ್ಕೆ ದುಡ್ಡು ಖರ್ಚು ಮಾಡದ ಹೊರತು ಗತ್ಯಂತರವಿರಲಿಲ್ಲ. ಅದಕ್ಕೆ ಅವಳು "ಎಂಥ ಊರಿದು? ಇಲ್ಲಿ ಸೆಗಣಿ ಕೂಡ ಕೊಳ್ಳಬೇಕಂತೆ! ಇದೆ ಲ್ಲಿಯ ರೀತಿಯು?" ಎಂದೆನ್ನುತ್ತಿದ್ದಳು. ಅಲ್ಲಿ ಕಾಯಿಪಲ್ಲೆ, ಸೆಗಣಿ, ಕುಳ್ಳು-ಕಟ್ಟಿಗೆ, ಹಾಲು-ಮೊಸರು, ಹೂವು, ಮನೆ ಬಾಡಿಗೆ ಇವುಗಳಿಗೆಲ್ಲ ದುಡ್ಡನ್ನೇ ಅಳಿಯಬೇಕು. ಅದರಿಂದ ನಾನು ಬಹು ಪೇಚಿಗೆ ಬಿದ್ದೆನು. ಯಾಕಂದರೆ ಪ್ರತಿಯೊಂದಕ್ಕೂ ದುಡ್ಡೆಂ ದರೆ ಹೇಗೆ ಸಾಲಬೇಕು? ದುಡ್ಡಿನಿಂದಲೇ ಕೂಡ್ರಬೇಕು-ದುಡ್ಡಿನಿಂದಲೇ ಏಳಬೇಕು. ಆದರೂ ಅಲ್ಲಿ ನಮ್ಮ ಸರ್ಪಪುರಿಯಂತೆ ಅತಿಥಿ-ಅಭ್ಯಾಗತರ ಕಾಟವಿರದ್ದೊಂದು ವಿಹಿತವೇ ಆಗಿತ್ತು.

ಸರ್ಪಪುರಿಯಲ್ಲಿ ದುಡ್ಡು ದೊರಕುವದು ದುಸ್ತರ; ಇಲ್ಲಿ ದುಡ್ಡು ಸಾಲುವದೇ ದುಸ್ತರ ಒಟ್ಟಿನಲ್ಲಿ ಎರಡೂ ಒಂದೇ! ಮತ್ತು ಈ ಬೆಂಗಳೂರಲ್ಲಿ ಒಂದೆರಡು ಚಿಂತೆ ಗಳು ಹೆಚ್ಚೇ ಆದವು. ನಾವು ಸರ್ಪಪುರಿಯಲ್ಲಿರುವ ವರೆಗೆ ವಿಲಾಸದವೆನ್ನಿರಿ ಇಲ್ಲವೆ ಶ್ರೀಮಂತಿಕೆಯ, ಬೆಲೆಯುಳ್ಳ ಹಾಗು ನಿರುಪಯುಕ್ತ ಪದಾರ್ಥಗಳೆನ್ನಿರಿ ಬಹುಶಃ ಕಣ್ಣಿಗೆ ಬೀಳುತ್ತಿರಲಿಲ್ಲ. ಅದರಿಂದ ಅವುಗಳನ್ನು ಕೊಂಡುಕೊಳ್ಳುವ ಹವ್ಯಾಸವೇ ಉಂಟಾಗುತ್ತಿರಲಿಲ್ಲ; ಆದರೆ ಇಲ್ಲಿ ಅವೆಲ್ಲ ವಸ್ತುಗಳು ಮನೆಮನೆಗೂ ಮಾರಲಿಕ್ಕೆ ಬರುತ್ತಿರುವದರಿಂದ ಅವು ತಮಗೆ ಬೇಕೆಂಬ ಸಾಹಜಿಕವಾದ ಇಚ್ಛೆಯು ಪ್ರತಿ ಯೊಬ್ಬರಿಗೂ ಆಗಹತ್ತಿತು. ಹುಡುಗರು ಪ್ರತಿನಿತ್ಯ ಅವುಗಳಲ್ಲಿಯ ಒಂದೊಂದು ವಸ್ತುವನ್ನು ಒಬ್ಬೊಬ್ಬರು! ಬೇಡಿ ಹಟಮಾಡತೊಡಗಿದರು. ಬಾಳನು "ತನಗೆ ಓದ ಲಿಕ್ಕೆ ಮೇಜು ಖುರ್ಚಿಗಳೂ, ಒಳ್ಳೇ ಗ್ಯಾಸಿನ ದೀಪವೂ ಬೇಕು. ಈ ನಿಮ್ಮ ಚಿಮ ಣಿಯ ದೀಪದಿಂದ ಕಣ್ಣು ಕೆಡುತ್ತವೆ. ನಮಗೆ ಈ ಬಗಲಕಸಿಯ ಅಂಗಿ-ಮುಂಡಾ

ನಗಳು ಬೇಡ. ಕೋಟು ಜಾಕೀಟು ಪ್ಯಾಂಟುಗಳಾದರೆ, ಕಾಲಲ್ಲಿ ಬೂಟುಗಳಿದ್ದರೆ ಸಾಲೆಗೆ ಹೋಗಲಿಕ್ಕೆ ಹುರುಪು ಬರುತ್ತದೆ." ಎಂದು ಅನ್ನ ಹತ್ತಲು, ಇಂಥ ಜೀನಸು ಗಳನ್ನು ತನ್ನ ಮಗನು ಕೇಳುತ್ತಿರುವದರ ಕೌತುಕವೆನಿಸಿ,.ನನ್ನ ಗೃಹಿಣಿಯು ದಿನಾಲು "ಬಾಳನಿಗೆ ಅವುಗಳನ್ನು ಕೊಂಡು ಕೊಡುವದಿಲ್ಲವೆ?" ಎಂದು ಕಾಡಹತ್ತಿದಳು

ನನ್ನ ಗೃಹಿಣಿಗೆ ಬೆಂಗಳೂರಿಗೆ ಬಂದಂದಿನಿಂದ ನಮ್ಮ ಸರ್ಪಪುರಿಯ ಧಡೂತಿಯ ದಪ್ಪನ್ನ ಸೀರೆಗಳು ಮೈಗೆ ನಡಹತ್ತಿದವು; ಭಾರವೆನಿಸತೊಡಗಿದವು! ನೆರೆಹೊರೆಯವರಂತೆ ತಾನೂ ಚಿತ್ರವಿಚಿತ್ರ ಬಣ್ಣದ ಪತ್ತಲಗಳನ್ನುಡಬೇಕೆಂದೆನಿಸಿತು. ಅದರಿಂದ ಅವಳು ಹಾಗೆಂದು ಸ್ಪಷ್ಟವಾಗಿ ತಿಳಿಸಲಾರದೆ, ಬೇರೆಯವರು ತಂದಂತಹ ನಮೂನಮೂನೆಯ ಸೀರೆ-ಪತ್ತಲುಗಳನ್ನು ತಂದು ತಂದು ನನಗೆ ತೋರಿಸಿ, ಇವುಗಳ ಬೆಲೆಯು ಅತ್ಯಲ್ಪವಾಗಿದೆ; ಇವು ಒಳ್ಳೇ ತಾಳಿಕೆ ಬರುತ್ತವೆ; ಒಗೆಒಗೆದಂತೆ ಬಣ್ಣ ಬರುತ್ತದೆ. ಹೀಗೆ ಸ್ತುತಿ ಮಾಡುವಳು. ಅವಳ ಅಂತಸ್ಥ ಉದ್ದೇಶವಿಷ್ಟೇ, ನಾನು ಅಂಥ ಸೀರೆಗಳನ್ನು ತಂದು ಕೊಡಬೇಕು. ಸಣ್ಣ ಹುಡುಗರಾದರೂ ಹೀಗೆ ಯಾವುದೊಂದು ಹೊಸ ನಮೂನೆಯ ಆಟಿಗೆಯನ್ನು ಕಂಡ ಕೂಡಲೆ ಅದು ಅವುಗಳಿಗೆ ಬೇಕೇ ಬೇಕು. ತಮ್ಮ ಇಚ್ಛೆಗಳನ್ನು ಪೂರಯಿಸಿಕೊಳ್ಳಲಿಕ್ಕೆ ಸಿಟ್ಟು-ಸೆಡವು-ಅಳುವದು ಮುಂತಾದ ಶಸ್ತ್ರಗಳು ಅವರ ಬಳಿಯಲ್ಲಿ ಸಜ್ಜಾಗಿಯೇ ಇರುತ್ತಿದ್ದವು. ನಮ್ಮ ಚಂಪೆಯಂತೂ ಅಚ್ಛೇದ ಹುಡುಗಿ! ಅಂದ ಮೇಲೆ ಕೇಳುವದೇನು? ಆಕೆಯ ಬಾಯಿಂದ ಬಂದ ಪ್ರತಿಯೊಂದು ಜೀನಸು ತರಲೇ ಬೇಕು. ನಮ್ಮ ಸೊಸೆಯು ಮಾತ್ರ ತನ್ನ ಯಾವ ಇಚ್ಛೆಯನ್ನೂ ವ್ಯಕ್ತಪಡಿಸುತ್ತಿರಲಿಲ್ಲ. ಹಿಂಡನ್ನಗಲಿದ ಎರಳೆಯ ಮರಿಯಂತೆ ಯಾವಾಗಲೂ ಗಾಬರಿಗೊಂಡಂತೆ ತೋರುತ್ತಿದ್ದಳು; ಆದರೆ ನಾವೆಲ್ಲರೂ ಅವಳನ್ನು ಒಳ್ಳೇ ಮಮತೆಯಿಂದ ಕಾಪಾಡುತ್ತಿದ್ದದರಿಂದ ಅವಳು ಬೇಗನೆ ಮೈಚಳಿ ಬಿಟ್ಟರಹತ್ತಿದಳೆಂದರೆ ತಪ್ಪಾಗಲಿಕ್ಕಿಲ್ಲ.

ದೊಡ್ಡವರಿಂದ ಸಣ್ಣವರ ವರೆಗೆ ಪ್ರತಿಯೊಬ್ಬರಿಗೆ ದಿನಾಲು ಏನಾದರೂ ಬೇಕೇ ಆಗುತ್ತಿತ್ತು; ಆದರೆ ಅದನ್ನೆಲ್ಲ ನಾನೊಬ್ಬನೇ ಹೇಗೆ ಪೂರಯಿಸುವದೆಂಬ ಕಲ್ಪನೆಯು ಕೂಡ ಅವರಿಗಿರಲಿಲ್ಲ. ಸರ್ಪಪುರಿಯಲ್ಲಿಯ ವಿಲಾಸೀ ಪದಾರ್ಥಗಳ ಅಜ್ಞಾನವು ನನಗೊಳ್ಳೇ ಅನುಕೂಲವಾಗಿತ್ತು; ಆದರೆ ಇಲ್ಲಿ ತದ್ವಿರುದ್ಧವಾಗಿತ್ತು. ನಾನು ದಿನಾಲು ಈ ನನ್ನ ಹೆಂಡಿರು-ಮಕ್ಕಳಿಗೆ ಇವರು ಕೇಳುವ ಪದಾರ್ಥಗಳ ಬಗ್ಗೆ ನಕಾರ ಹೇಳುತ್ತ ಹೋದರೆ, ಒಂದುವೇಳೆ ಸಂಸಾರದಲ್ಲಿ ಅಸಂತೋಷವೂ ಅಪ್ರೀತಿಯೂ ಉಂಟಾದೀತೆಂದು ನನಗನಿಸಹತ್ತಿತು; ಮತ್ತು ಅದು ನಿಜವೂ ಆಗಿತ್ತು. ಸಂಸಾರವೆಂದರೇನು? ದೇಹಕ್ಕೆ ಜೀವವು ಹೇಗೆಯೋ, ಸಂಸಾರಕ್ಕೆ ಹಾಗೆ ದುಡ್ಡು! ದುಡ್ಡಿರದಿದ್ದರೆ ಹೆಂಡತಿಯು ಗಂಡನನ್ನು ಕೇಳಳು; ಮಕ್ಕಳು ತಂದೆಯನ್ನು ಮಾತಾಡಿಸರು; ನೆರೆ-ಹೊರೆಯವರು ಹಣಿಕಿ ಕೂಡ ಹಾಕರು ಮುಂತಾದ ಸಂಗತಿಗಳು ಎಲ್ಲರಿಗೂ ಅನುಭವಪ್ರದವಾಗಿವೆ.

ದುಡ್ಡು ಗಳಿಸುವ ಸಲುವಾಗಿ ಹಗಲಿರುಳು ಕಷ್ಟಪಟ್ಟರೂ ಕಡೆಗೆ ಅದು ಎರಡನೆಯವರ ಪಾಲೇ ಆಗುವದು! ಇಂಥಾದ ನೂರಾರು ಸಂಗತಿಗಳು ಮನುಷ್ಯನಲ್ಲಿ ವೈರಾಗ್ಯವನ್ನು ಹುಟ್ಟಿಸಲಿಕ್ಕೆ ಕಾರಣಗಳಾಗುವವು. ಮನುಷ್ಯನು ಆ ವೈರಾಗ್ಯದ ಬಲೆಯಲ್ಲಿ ಸಿಕ್ಕನೆಂದರೆ ತೀರಿತು; ಆತನಿಗೆ ಮತ್ತೆ ಹಲವು ಬಗೆಯ ತೊಂದರೆಗಳು ಕೈ ತೊಳೆದು ಬೆನ್ನು ಹತ್ತುವವು! ಇನ್ನು ದುಡ್ಡು ಗಳಿಸುವವನಿಗೆ ಯಾವ ತೊಂ-ದರೆಗಳಿರುತ್ತವೆ, ಅಡಚಣೆಗಳಿರುತ್ತವೆ; ಇಲ್ಲವೆ ಅದನ್ನು ವಿನಿಯೋಗಿಸುವಾಗ ಆ ಬಡವನೆಷ್ಟು ಪೇಚಾಡಬೇಕಾಗುತ್ತದೆ ಅದರ ಲಕ್ಷ್ಯಾಂಶದ ಅನುಭವವಾದರೂ ಆ ಪರಾವಲಂಬಿ ವರ್ಗದವರಿಗಿದ್ದರೆ ಎಷ್ಟೋ ಅನುಕೂಲವಾದೀತು. ಈ ಬಗೆಯ ಯೋಚನೆಗೆ ಪ್ರಾರಂಭವಾಗುತ್ತಲೆ ವೇದಾಂತವು ಮುಂದೆ ಬರಬೇಕು. ವೇದಾಂತವು ತಲೆ ಹಾಕ ಹತ್ತಿದ ಕೂಡಲೆ ಸಂಸಾರ ವಿಷಯದ ಬೇಜಾರವುಂಟಾಗಿ ಜೀವಿತವು ದುಃಖದಾಯಕವೂ ಕ್ಲೇಶಪೂರ್ಣವೂ ಎನಿಸಬೇಕು. ಕಡೆಗೆ ಪಶ್ಚಾತ್ತಾಪಕ್ಕೆ ಪ್ರಾರಂಭವಾಗಿ, ನಾನು ಈ ಲಗ್ನದ ಮಬ್ಬಿಗೇಕೆ ಬಿದ್ದೆನೋ ಎಂದೆನಿಸಬೇಕು! ಇಂಥ ಈ ಕ್ರಮವು ದಿನಾಲು ನಡೆಯುವದೇ; ಆದರೆ ಆಶೆಯೆಂಬುವವಳೊಬ್ಬ ಮಹಾ ಕೃತ್ಯೆಯು ಎಲ್ಲರಿಗೂ ಗಂಟುಬಿದ್ದಿರುತ್ತಾಳಲ್ಲವೆ? ಅವಳು ಎಲ್ಲರನ್ನೂ ಗುದ್ದಿ ಗುದ್ದಿ ಹುರಿದುಂಬಿಸುತ್ತಾಳೆ. ನಾಳೆ ಹೀಗೆ ಆದೀತು, ನಾಡದ್ದು ಹಾಗೆ ಆದೀತು, ಆ ಮೇಲೆ ಅದು ಸಿಕ್ಕೀತು, ಮತ್ತೆ ಅದು ಲಭಿಸೀತು ಹೀಗೆ ಕೊನೆಮೊದಲಿಲ್ಲದ ಪುರಾಣವನ್ನು ಅವಳು ನಮ್ಮ ಮನಸ್ಸಿಗೆ ಹೇಳಿದರೆಂದರೆ ತೀರಿತು; ನಾವು ಮತ್ತೆ ಕಿವಿಬಾಲಗಳನ್ನು ಕೊಡವಿಕೊಂಡು ಹೊರಟೆವು ನಾಯಿಕರಂತೆ ಪ್ರಯಾಣಸಿದ್ಧರಾಗಿ! ವೇದಾಂತ, ವೈರಾಗ್ಯ, ಬೇಜಾರು ಇವೆಲ್ಲ ಎತ್ತಿಂದ ಎತ್ತೋ ಓಡಿ ಹೋಗುವವು; ಮತ್ತು ಮತ್ತೆ 'ಪುನರಪಿ ಜನನಂ ಪುನರಪಿ ಮರಣಂ' ಎಂಬ ಕ್ರಮಕ್ಕೆ ಪ್ರಾರಂಭವಾಗುವದು.

ಒಟ್ಟಿನಲ್ಲಿ ಬೆಂಗಳೂರಿಗೆ ಹೋದರೂ ನನ್ನ ಮನಸ್ಸಿಗೆ ಸ್ವಾಸ್ಥ್ಯವುಂಟಾಗಲಿಲ್ಲ. ಹಗಲಿರಳೂ ಗಹನವಾದ ಚಿಂತೆ, ನಾನಾ ಬಗೆಯ ಸಂಕಟಗಳ ಅಂಜಿಕೆ, ಪರಸ್ಥಳದ ಮೂಲಕ ಇದುವರೆಗೆಂದೂ ಅನುಭವಕ್ಕೆ ಬಾರದ ಅಡಚಣಿಗಳ ಅನುಭವ, ಚಿಕ್ಕಮಗಳ ಲಗ್ನದ ಯೋಚನೆ ಹೀಗೆ ಒಂದಲ್ಲ, ಎರಡಲ್ಲ ಎಷ್ಟೋ ಚಿಂತೆಗಳುಂಟಾದವು. ಮನಸ್ಸಿನ ಚಿಂತೆಗಳನ್ನು ಯಾವನೊಬ್ಬ ಮಿತ್ರನೆದುರಿಗೆ ಕುಳಿತು ತೋಡಿಕೊಂಡರೆ ತುಸ ವಿರಾಮವೆನಿಸುವದು; ತುಸ ಮನೋರಂಜನವೂ ಆಗುವದು. ಆತನು ಬೇರೆಯವರ ಸಂಕಟಗಳನ್ನು ಹೇಳಿ, ನಿಮ್ಮ ಸಂಕಟಗಳು ಆ ಮಾನದಿಂದ ಏನೂ ಅಲ್ಲವೆಂದು ಹೇಳುವ ಪ್ರಯತ್ನ ಮಾಡುತ್ತಾನೆ; ಆದರೆ ಅಂಥ ಆ ಸನ್ಮಿತ್ರರ ಸಂಗತಿಯ ಅಭಾವವು ಈ ಬೆಂಗಳೂರಿಗೆ ಬಂದ ಮೇಲೆ ನನಗೆ ಹೆಚ್ಚಾಗಿ ತೋರಹತ್ತಿತೆನ್ನಲಿಕ್ಕೆ ಅಡ್ಡಿಯಿಲ್ಲ.

ಬೆಂಗಳೂರಲ್ಲಿ ನನ್ನ ಜೀವದ ಗೆಳೆಯನೆಂದರೆ ನಮ್ಮ ವೀರಪ್ಪನೊಬ್ಬನೇ. ಅಲ್ಲಿಗೆ ಹೋದ ಬಳಿಕ ಆತನು ತನ್ನ ಯಜಮಾನನಲ್ಲಿರುತ್ತಿದ್ದನು. ವೀರಪ್ಪನಿಗೆ

ಹೆಂಡರಿಲ್ಲ; ಮಕ್ಕಳಿಲ್ಲ. ಯಜಮಾನರ ಮನೆಯ ನಾಲ್ಕು ಕೆಲಸ ಮಾಡಿ ಉಂಡು-ಟ್ಟು ಸುಖವಾಗಿರುವದೇ ಆತನ ಸಂಸಾರ! ಆದರಿಂದ ಆತನಿಗೆ ನಮ್ಮ ಮನೆಗೆ ಬರಲಿಕ್ಕೆ ಅನುಕೂಲವಾಗುತ್ತಿರಲಿಲ್ಲ; ಒಂದು ವೇಳೆ ಬಂದರೂ ಅವನು ತನ್ನ ಯಜಮಾನನ ಸ್ತುತಿ, ಆತನ ವೈಭವ, ಆತನ ಸ್ವಭಾವ ಇವುಗಳನ್ನೇ ನಮ್ಮಲ್ಲಿ ಚರ್ಚಿಸುತ್ತ ಕೂಡ್ರುವವನು. ಅವನು ದಿನಾಲು ಇಂತಿಂಥ ಪದಾರ್ಥಗಳನ್ನು ಉಣ್ಣುತ್ತಾನೆ, ಅವನು ಇಷ್ಟು ಶ್ರೀಮಂತನಿದ್ದಾನೆ ಮುಂತಾದವುಗಳ ಶ್ರವಣದಿಂದ ನಮ್ಮ ಸಂಸಾರವೂ, ಜೀವಿತವೂ ವ್ಯರ್ಥವೆಂದು ನನಗೆ ಅನಿಸುತ್ತಿತ್ತು; ಮತ್ತು ಮೋರಪ್ಪನ ಆ ಯಜಮಾನನಂತೆ ನಾವೂ ಆಗಬೇಕು, ಮಾಡಬೇಕು ಎಂದೆನಿಸಿ, ಮನಸ್ಸಿಗೆ ಮತ್ತೆ ಹೆಚ್ಚು ಅಸ್ವಸ್ಥತೆಯೇ ಉಂಟಾಗುತ್ತಿತ್ತು. ನನ್ನ ಹುಡುಗ ನೊಡನೆ ಆತನ ಗೆಳೆಯರೂ ಒಮ್ಮೊಮ್ಮೆ ನಮ್ಮ ಮನೆಗೆ ಬರುತ್ತಿದ್ದರು. ಅವರ ಉಡಿಗೆ-ತೊಡಿಗೆಗಳನ್ನು ಕಂಡು ನಮಗೂ ನಮ್ಮ ಮಗನಿಗೂ ಅದರಂತಿರಬೇಕೆಂದೆನಿಸಬೇಕು; ಆದರೆ ಅವುಗಳನ್ನೆಲ್ಲ ತರುವದೆಲ್ಲಿಂದ? ನನ್ನ ಗೃಹಿಣಿಗೆ ಯಾರೊಬ್ಬ ಶ್ರೀಮಂತರ ಮನೆಯವರ ಗುರುತು ಪರಿಚಯವಾದರೆ ಇಲ್ಲವೆ ಅಂಥ ನೆರೆಹೊರೆಯ ಶ್ರೀಮಂತರ ಮನೆಗೆ ಕೆಲವೊಂದು ನಿಮಿತ್ಯದಿಂದ ಹೋಗುವ ಪ್ರಸಂಗ ಬಂದರೆ, ಚಂಪೆಗೆ ಅಂಥ ಮನೆತನವನ್ನೇ ನೋಡಬೇಕೆಂಬಾಗಲಿ, ಬೇರೊಂದು ಅಭಿಲಾಷೆ ತಾಳಿಯಾಗಲಿ ಆಕೆಯು ಹಿಂದಿರುಗಿ ಬಂದು ನನಗೆ ಹೇಳುತ್ತಿದ್ದಳು. ಒಟ್ಟಿನಲ್ಲಿ ಎಲ್ಲ ಕಡೆಯಿಂದಲೂ ಆಶೆಯೂ, ಹವ್ಯಾಸವೂ ಬೆನ್ನು ಹತ್ತಿದ್ದೇ. ತೃಪ್ತಿಯೆಂಬುದು ಇಲ್ಲವೇ ಇಲ್ಲ; ಮತ್ತು ತೃಪ್ತಿಯಿರದ ಮನಸ್ಸಿನ ಹವ್ಯಾಸವನ್ನೇನು ಹೇಳಬೇಕು?

ಚೆನ್ನಾಗಿ ಯೋಚಿಸಿದರೆ, ಸಿರಿವಂತಿಕೆ ಬಡತನಗಳಲ್ಲಿಯ ನಿಜವಾದ ಭೇದವು ಕೇವಲ ಬೇಡಿಕೆಯೇ ಆಗಿರುತ್ತದೆ. ಬಡವನ ಹಸಿವೆಗೂ ಶೀತನಿವಾರಣಕ್ಕೂ ಸಾಧಾರಣವಾದ ಅಂಬಲಿ-ಕಂಬಳಿಗಳು ಸಾಕಾಗುವವು; ಆದರೆ ಶ್ರೀಮಂತರಿಗೆ ಸುಗ್ರಾಸ ಭೋಜನ, ಭಾರೀ ಬೆಲೆಯ ಉಣ್ಣೆಯ ವಸ್ತ್ರ ಇವುಗಳೇ ಬೇಕಾಗುತ್ತವೆ. ಈ ಬಗೆಯ ನೈತಿಕ ಬೋಧವನ್ನು ನಾನು ನನ್ನ ಮನಸ್ಸಿಗೂ ಹೆಂಡಿರು-ಮಕ್ಕಳಿಗೂ ಬೋಧಿಸುತ್ತಿದ್ದೆನು; ಆದರೆ ಅದರ ಉಪಯೋಗವು ಎಷ್ಟಾದೀತು? ಸಿಟ್ಟು-ಸೆಡವುಗಳಿರಬಾರದು, ಲೋಭ-ಮೋಹಗಳನ್ನು ತಾಳಬಾರದು, ಗರ್ವವಿರಬಾರದು ಮುಂತಾದ ಸರ್ವ ಸಮ್ಮತಗಳಾದ, ಆದರೆ ಕೇವಲ ಅಸಾಧ್ಯಗಳಾದ ಸಂಗತಿಗಳನ್ನು ದಿನಾಲು ಬೆಳಗಿನಿಂದ ಸಂಜೆಯ ವರೆಗೆ ಪಠಿಸಿದರೂ ಬೋಧಿಸಿದರೂ ತಕ್ಕ ವೇಳೆಗೆ ಅವುಗಳ ಉಪಯೋಗವೆಷ್ಟಾಗುವದು? ಇದರಂತೆಯೇ ನನ್ನ ಬೋಧದ ಗತಿಯಾಯಿತು. ತೃಪ್ತಿಯೇ ಸುಖದ ಆಗರವು. ಅದು ಯಾರಲ್ಲಿದೆಯೋ ಅವನಂತಹ ಭಾಗ್ಯವಂತನಿಲ್ಲೆಂಬದು ನನಗೆ ಗೊತ್ತಿದೆ ಆ ತೃಪ್ತಿಯು ಇಂದಿಲ್ಲ ನಾಳೆ, ನಾಳೆಯಿಲ್ಲ ನಾಡದ್ದು ಅಥವಾ ಎಂದಾದರೂ ಪ್ರಾಪ್ತವಾದೀತೆಂಬ ನನ್ನ ಮನಸ್ಸಿನೊಳಗಿನ ಆಶೆಯು ವ್ಯರ್ಥವಾಯಿತು. ನನ್ನ ಗೃಹಿಣಿಯ, ನನ್ನ ಮಕ್ಕಳ ಹಾಗು ಸ್ವತಃ ನನ್ನ ಈ ಬಗೆಯ ಹವ್ಯಾಸ

ಗಳ ತ್ರಿವೇಣೀ ಸಂಗಮವಾದ ಬಳಿಕ, ನನ್ನೊಬ್ಬನ ವಿಚಾರಗಳ ಪ್ರಾಬಲ್ಯವು ಹೇಗುಳಿಯಬೇಕು?

ಈ ಬಗೆಯಾಗಿ ನಾನು ಘೋರ ಚಿಂತೆಗೊಳಗಾದ್ದರಿಂದ ನನ್ನ ಜೀವಕ್ಕೆ ಸೊಗಸಿರಲಿಲ್ಲ. ಮನಸ್ಸು ಯಾವಾಗಲೂ ಅಸ್ವಸ್ಥವಾದ್ದರಿಂದ ಸಂಸಾರವು ಸಾಕು ಸಾಕೆನಿಸಿತು. ಬಡತನದಂತಹ ದುರ್ಭಾಗ್ಯವಿನ್ನೊಂದಿಲ್ಲ. ದುಡ್ಡು ಲೋಕ ದೊಳಗೆ ಬಹು ಚಮತ್ಕಾರಗಳನ್ನುಂಟು ಮಾಡುತ್ತದೆ. ಬೇಕಾದಂತಹ ಧಷ್ಟ ಪುಷ್ಟ ಪುರುಷನಿದ್ದರೂ, ದುಡ್ಡಿನ ಮುಂದೆ ತೀರ ಬಡ ಆಕಳಾಗುವನು! ಸಾರಾಂಶ ವೇನಂದರೆ, ಸಂಸಾರ ಯಂತ್ರದ ಮುಖ್ಯ ಮಲಸೂತ್ರವು ದುಡ್ಡೇ! ಸುಖದ ತಂದೆ ಯೂ ದುಃಖದ ತಾಯಿಯೂ ದುಡ್ಡೇ! ಇದರಂತೆಯೇ ಮಾನಾಪಮಾನಗಳ ಮುಖ್ಯ ಬೀಜವೂ, ಅಧಿದೈವತವೂ, ಇಷ್ಟ-ಮಿತ್ರರ ಪ್ರೇಮ, ಆಪ್ತ-ಬಂಧುಗಳ ಪ್ರೀತಿ, ಸಾಧು-ಸಂತರ, ಬುವಾ-ಮಹಾರಾಜರ ಅನುಗ್ರಹ ಹಾಗು ಪ್ರತ್ಯಕ್ಷ ಈಶ್ವರನ ಕೃಪೆ ಯೂ ಕೂಡ ಈ ದುಡ್ಡಿನಿಂದಲೇ ಆಗತಕ್ಕವು; ಆದರೆ ಆ ಧನವು ನನ್ನನ್ನು ತೀರ ವೈರಿಯೆಂದು ತಿಳಿದು ಬಿಟ್ಟದೆ. ಆದರಿಂದ ಸುಖವೆಂಬುದು ನನಗೆ ಎಲ್ಲಿ ಹಾಗು ಹೇಗೆ ದೊರೆಯಬೇಕು? ಈ ಚಿಂತೆಯಿಂದ ತೀರ ಬೇಜಾರಗೊಂಡು, ಈ ಸಂಸಾರವೂ ಈ ಜೀವಿತವೂ ನನಗೆ ಸಾಕುಸಾಕೆಂದೆನಿಸಿದವು.

ಸರ್ಪಪುರಿಯನ್ನು ಬಿಟ್ಟು ಬೆಂಗಳೂರಿಗೆ ಹೊರಡುವಾಗ ಈ ತೊಂದರೆಯು ಇಲ್ಲಿ ಆಗಲಿಕ್ಕಿಲ್ಲೆಂದು ನನ್ನ ತಿಳುವಳಿಕೆಯಾಗಿತ್ತು. ಇಲ್ಲಿ ನಾಲ್ಕು ದುಡ್ಡು ಹೆಚ್ಚು ದೊರೆತಾವು; ಮತ್ತು ನನ್ನ ತೊಂದರೆಯು ನೀಗೀತು ಎಂದು ನಾನು ಭಾವಿಸಿದ್ದೆನು; ಆದರೆ ಈಗ ತದ್ವಿರುದ್ಧವಾಗಿ, ನನ್ನ ಚಿಂತೆಯು ನೆಳಲಿನಂತೆ ನನ್ನನ್ನೇ ಅನುಸರಿಸಿ ಬಂದಿತ್ತು. ದೇವರ ನಾಮವನ್ನು ಸ್ಮರಿಸುತ್ತ ಕಾಲಕಳೆಯಬೇಕೆಂದರೆ, ಅದೂ ಆಗು ವಂತಿಲ್ಲ; ಯಾಕಂದರೆ ಬೆಳಿಗ್ಗೆ ಹತ್ತು ಗಂಟೆಗೆ ಬಾಳನು ಉಂಡು ಸಾಲೆಗೆ ಹೋಗ ಬೇಕಾದ್ದರಿಂದ ಸ್ನಾನ-ಸಂಧ್ಯೆ-ದೇವತಾರ್ಚನೆ ಮಾಡಿ, ದೇವರ ನೈವೇದ್ಯ ಮಾಡಿ ಕೊಡಲಿಕ್ಕೆ ಗಡಿಬಿಡಿಯೇ ಆಗುತ್ತಿತ್ತು. ಇನ್ನು ಆ ಕೆಲಸಗಳನ್ನು ಆತನಿಗೇ ಹೇಳ ಬೇಕೆಂದರೆ, ಹಗಲುರಾತ್ರಿ ಪಾಠ ಮಾಡಿ ಮಾಡಿ ಬೇಸರಿಯುವ ಆತನಿಗೆ ಅವಕಾಶ ವೆಲ್ಲಿ ದೊರೆಯಬೇಕು? ಆದ್ದರಿಂದ ಏನಾಗುವದೆಲ್ಲ ನನಗೊಬ್ಬನಿಗೇ ತ್ರಾಸವಾಗಲೆಂದು ಆಲೋಚಿಸಿದ ಹೊರತು ಗತ್ಯಂತರವಿರಲಿಲ್ಲ. ನಾನು ಹಾಗೆ ಒಂದೇಸವನೆ ಹಲವು ಬಗೆಯಿಂದ ಹುರಪಳಿಸಿ ಹೋಗಿದ್ದೆನು. ಹಾಗಾಗಿದ್ದರೂ ಮಾಡುವದೇನು? ಲೌಕಿಕ, ಮೋಹ, ಮನಸ್ಸಿನ ಒಲವು ಮತ್ತು ಅವೆಲ್ಲವುಗಳಿಗಿಂತಲೂ ಒಂದು ತೂಕ ಹೆಚ್ಚಾದ ಆಶೆ-ಲೋಭ ಇವುಗಳಿಂದ ನನ್ನ ಮನಸ್ಸು ಮತ್ತೆ ಮತ್ತೆ ಸುಂಬಳದೊಳಗೆ ಸಿಕ್ಕ ನೊಣದಂತೆ ಅವುಗಳಲ್ಲಿಯೇ ಸುತ್ತುವರೆಯುತ್ತಿತ್ತು!

ನನ್ನ ಆ ಚಿಂತೆಯ ಹಾಗು ತೊಂದರೆಯ ಬಗ್ಗೆ ಇತ್ತೀಚೆಗೆ ನನ್ನ ಗೃಹಿಣಿಗೆ ವಿಶೇಷವೇನೂ ಅನಿಸದಾಯಿತು. ಸರ್ಪಪುರಿಯಲ್ಲಿರುವ ವರೆಗೆ ನನ್ನ ಸಂಸಾರದ

ಬಗ್ಗೆ ಅವಳಿಗೆ ಸ್ವಲ್ಪಾದರೂ ಯೋಚನೆಯುಂಟಾಗುತ್ತಿತ್ತು; ಆದರೆ ಬೆಂಗಳೂರಿಗೆ ಬಂದ ನಂತರ ಅದೇನೂ ಅನಿಸಲಿಲ್ಲ. ಅಂದರೆ, ಅವಳು ಮನೆಯಲ್ಲಿ ಕಂಡ-ಕಂಡ ಹಾಗೆ ಹಾಳು ಮಾಡುತ್ತಿದ್ದಳೆಂತಲ್ಲ; ಆದರೆ ಆಕೆಯ ಮಿತಿಮೀರಿದ ಹವ್ಯಾಸ, ಮಂ-ದಿಯ ಹಾಗೆ ನಾವೇಕಿರಬಾರದೆಂಬ ಹಟ, ತನ್ನ ಮಕ್ಕಳು-ಮರಿಗಳ ಒಲವಿನಂತೆ ನಡೆಯುವದೇ ವಿಹಿತವೆಂಬ ಮನಸೋಕ್ತವಾದ ಕಲ್ಪನೆ ಮುಂತಾದವುಗಳ ಮೂಲಕ ಅವಳು ನಿಜವಾಗಿಯೂ ತಾಳಗೆಟ್ಟಿರುತ್ತಾಳೆಂದು ನನಗನಿಸಹತ್ತಿತು. ಹುಡುಗರಿಗೆ ನನ್ನ ಸ್ಥಿತಿಗತಿಗಳ ಕಲ್ಪನೆಯಿಲ್ಲ, ನನ್ನ ಗೃಹಿಣಿಗೆ ನನ್ನ ಇರವಿನ ಕಡೆಗೆ ನೋಡಲು ಅವಕಾಶ ಇಲ್ಲವೆ ಆಗತ್ಯವಿಲ್ಲ; ಮತ್ತು ದೇವರ ದೃಷ್ಟಿಯು ನನ್ನ ಮೇಲಿಲ್ಲ; ಹಾಗು ನಮ್ಮ ಯಜಮಾನ-ಮಿತ್ರರಲ್ಲಿ ಇತ್ತೀಚೆಗೆ ಡಾಂಭಿಕತೆಯು ಪ್ರವೇಶಿಸತೊಡಗಿತು. ಅಂದ ಬಳಿಕ ಇನ್ನು ಮುಂದೆ ಏನಾಗುವದೋ ಎಂದು ನಾನು ಬಹು ದೊಡ್ಡ ಯೋಚನೆಗೊಳಗಾಗುತ್ತಿದ್ದೆನು; ಆದರೆ ಅದಕ್ಕೆ ಉಪಾಯವೇ ಇರಲಿಲ್ಲ. ಆ ಕ್ಷಣವು ಗತಿಸಿತೆಂದರೆ, ಆಶೆಯು ಮತ್ತೆ ನನ್ನನ್ನು ಕೈ ತೊಳಕೊಂಡು ಬೆನ್ನಹತ್ತುತ್ತಿತ್ತು. ಈ ಲೋಕದ ಪಸಾರವೆಲ್ಲ ನನಗೆ ನಿಜವೆಂದು ತೋರಹತ್ತಬೇಕು; ಮತ್ತು ಅದನ್ನು ಹೊತ್ತೊಯ್ಯಲಿಕ್ಕೆ ಕಂಟ್ಲಿಗಳನ್ನು ಹೊರುವ ಕತ್ತೆಯಂತೆ ಶ್ರಮವಹಿಸದ ಹೊರತು ಬೇರೆ ಗತಿಯೇ ಇಲ್ಲವೆಂಬ ಮನವರಿಕೆಯಾಗಬೇಕು. ಅದರಿಂದ ನಾನು ಮತ್ತೆ ಮೋಸಹೋಗುತ್ತಿದ್ದೆನು; ಹಾಗು ಮತ್ತೆ ಮೊದಲಿಗಿಂತ ಇಮ್ಮಡಿ ದುಃಖಕ್ಕೆ ಪಾತ್ರನಾಗುತ್ತಿದ್ದೆನು.

ನಾನು ಬೆಂಗಳೂರಿಗೆ ಬಂದ ಮೇಲೆ ಇದೇ ಬಗೆಯ ಕಾಲಕ್ರಮಣಕ್ಕಾರಂಭವಾಯಿತು; ಅದರಿಂದ ನಾನು ಬಹು ಪಾಪಿಯು; ಆದಕ್ಕಾಗಿಯೇ ನನ್ನ ಗತಿಯು ಹೀಗಾಯಿತೆಂದು ನನಗನಿಸತೊಡಗಿತು. ಪೂರ್ವ ಜನ್ಮಗಳಲ್ಲಿ ಮಾಡಿದ ಘೋರ ಪಾತಕಗಳ ಫಲಗಳನ್ನು ನಾನು ಈ ಜನ್ಮದಲ್ಲಿ ಎರಡೆರಡು ಕೈಗಳಿಂದ ಬಳಕೊಳ್ಳುತ್ತಿರುವೆನೆಂದೂ, ಇಹ ಜನ್ಮದಲ್ಲಿ ಏನಾದರೂ ಪುಣ್ಯಸಾಧನವನ್ನು ಮಾಡಿ ಇನ್ನು ಮುಂದೆ ಇಂತಹ ದುಃಸ್ಥಿತಿಗೆ ಈಡಾಗಬಾರದೆಂದೂ ತಿಳಿದು, ಅದಕ್ಕಾಗಿ ದೇವರಪೂಜೆ, ಭಜನ, ಜಪ, ತಪಗಳಲ್ಲಿ ಕಾಲವನ್ನು ಕಳೆದರೆ ಅದು ವ್ಯರ್ಥವಾಗಲಾರದು; ಆದದ್ದು ಆಗಿ ಹೋಯಿತು, ಇನ್ನು ಮುಂದಾದರೂ ಈ ಬಗೆಯ ಕಷ್ಟವು ಬೇಡ. ತಂದೆ-ತಾಯಿಗಳು ಕಲಿಸಿರುವ ನಾಲ್ಕು ಅಕ್ಷರಗಳ ಉಪಯೋಗವನ್ನಾದರೂ ನಿರಪೇಕ್ಷ ರೀತಿಯಿಂದ ಮಾಡಿಕೊಳ್ಳಬೇಕು ಮುಂತಾದ ವಿಚಾರಗಳು ಉಂಟಾಗಬೇಕು; ಆದರೆ ಆ ವಿಚಾರಗಳಿಗಾದರೂ ಸ್ಥಿರಸ್ಥಾವರತೆಯು ಹೇಗೆ ಪ್ರಾಪ್ತವಾಗಬೇಕು? ಮನೆ ಗೆದ್ದು ಮಾರು ಗೆದೆ, ಮೊದಲು ಸಂಸಾರವನ್ನು ಚೆನ್ನಾಗಿ ಮಾಡಿ, ಆ ಮೇಲೆ ಪರಮಾರ್ಥ ವಿವೇಕಕ್ಕೆ ತೊಡಗು ಮುಂತಾದ ದೊಡ್ಡವರ ನೀತಿಪರವಾಕ್ಯಗಳು ದೂ-ತ್ತೆಂದು ಬಂದು ನನ್ನ ಮುಂದೆ ನಿಲ್ಲುತ್ತಿದ್ದವು. ನಾನು ಸಂಸಾರದ ಈ ಇರುಕಿನಲ್ಲಿ ಹೀಗೆ ಸಿಕ್ಕುಬಿಟ್ಟಿದ್ದೇನೆ. ಅದರೊಳಗಿಂದ ಜೀವಸಹಿತವಾಗಿ ನಾನು ಪಾರಾದಾಗಲೇ ನಿಜ ವೆಂದು ನನಗನಿಸಹತ್ತಿತು. ಒಟ್ಟಿನಲ್ಲಿ ಹೇಳುವದೇನಂದರೆ, ಮಲೆನಾಡಿನೊಳ

ಗಿನ ಮುತ್ತಲ ಗಿಡವು ಬೆಳವಲು ನಾಡಿಗೆ ಹೋದರೂ 'ಮುತ್ತಲಿಗೆ ಮೂರೇ ಎಲೆ' ಎಂಬ ನಾಣ್ಣುಡಿಯು ಹೇಗೆ ಪ್ರಸಿದ್ಧವಾಯಿತೋ, ಕೇವಲ ಹಾಗೆಯೇ ನನ್ನ ಅವಸ್ಥೆ ಯಾಯಿತು. 'ಒಂದು ಕೊಟ್ಟರೆ ಇನ್ನೊಂದಿಲ್ಲ; ಇನ್ನೊಂದು ಕೊಟ್ಟರೆ ಮತ್ತೊಂದಿಲ್ಲ' ಹೀಗೆ ದೇವರ ಪ್ರತಿಜ್ಞೆಯೇ ಇದೆಯೆಂದ ಬಳಿಕ, ಆ ವಿಷಯದಲ್ಲಿ ಮನುಷ್ಯ ಪ್ರಯತ್ನದಿಂದ ಪ್ರಯೋಜನವೇನಾಗಬೇಕು?

---

## ೬ ಮತಲಬದ ಹೊರತು ಮನುಷ್ಯನಿಲ್ಲ.




ಗೆ ನಾನು ಹಲವು ಬಗೆಯಿಂದ ತೊಂದರೆಗಳಿಗೊಳಗಾಗಲು, ಸರ್ಪಪುರಿಯನ್ನು ಬಿಟ್ಟು ಬೆಂಗಳೂರಿಗೆ ಸುಮ್ಮನೆ ಬಂದೆನೆಂದು ನನಗನಿಸಲಾರಂಭಿಸಿತು. ಆಶೆಯು ಎಳೆದೊಯ್ದ ಕಡೆಗೆ ಸುಮ್ಮನೆ ತೆವಳುತ್ತ ಹೋಗುವದು ಸರಿಯಲ್ಲವೆಂಬುದು ನನಗೀಗ ಚೆನ್ನಾಗಿ ತಿಳಿಯಬಂದಿತು; ಆದರೆ ಈಗ ಅದಕ್ಕೇನುಪಾಯವು? ಇದ್ದದ್ದೇ ವಿಹಿತವೆಂದು ಮನಸ್ಸಿನಲ್ಲಂದುಕೊಂಡು ಇರಹತ್ತಿದೆನು. ಇಂದು ಭಾನುವಾರವಿದ್ದ ಮೂಲಕ ಮನೆಯಲ್ಲಿ ಗಡಿಬಿಡಿಯಿರಲಿಲ್ಲ. ಊಟವಾದ ಮೇಲೆ ಇಳಿಹೊತ್ತಿನಲ್ಲಿ ಮೋರಪ್ಪನು ನಮ್ಮ ಮನೆಗೆ ಬಂದನು. ನಮ್ಮಿರ್ವರಲ್ಲಿ ಅತ್ತಿತ್ತಣದ ಹಲವು ಮಾತಾದವು. ನಾನು ನನ್ನ ಸಂಸಾರದೊಳಗಿನ ಸುಖ-ದುಃಖಗಳನ್ನು ತೋಡಿಕೊಂಡೆನು. ಅದಕ್ಕೆ ಮೋರಪ್ಪನು:—"ಗುರುಭಟ್ಟರೇ, ನೀವು ಸುಮ್ಮ ಸುಮ್ಮನೆ ಅದೇಕೆ ಪೇಚಾಡುತ್ತಿರುವಿರಿ? ನಾನು ನಿಮಗೊಂದು ಹಂಚಿಕೆ ಹೇಳಲೊ? ನನಗದು ಬಹು ಚೆನ್ನಾಗಿ ತೋರುತ್ತದೆ" ಎಂದೆನ್ನಲು, "ಅದೇನೆಂಬದನ್ನು ಹೇಳು ನೋಡೋಣ. ಯೋಗ್ಯವಾಗಿದ್ದರೆ, ಉಕ್ತವೆಂದು ಕಂಡರೆ ಅವನ್ನೇಕೆ ಮಾಡಬಾರದು? ಈ ಪರಸ್ಥಳದಲ್ಲಿ ನನ್ನ ಆಪ್ತ-ಮಿತ್ರ-ಬಂಧುವೆಂದರೆ, ಮೋರಪ್ಪಾ, ನೀನೊಬ್ಬನೇ ಆಗಿರುತ್ತೀ. ನನ್ನ-ನಿನ್ನಲ್ಲಿ ಭೇದವಿದೆಯೊ?" ಎಂದು ನಾನು ಹೇಳಿದೆನು.

ಮೊ:—ಅದೇನೂ ಇಲ್ಲ. ಮಂದಿಯ ಹೇಳಿಕೆಗಿಂತಲೂ ಕಲ್ಯಾಣ-ಅಕಲ್ಯಾಣವು ತನ್ನದು ತನಗೇ ಚೆನ್ನಾಗಿ ಗೊತ್ತಾಗುತ್ತದೆ. ಅದರಿಂದ ಅದನ್ನು ವಿಚಾರಪೂರ್ವಕ ಮಾಡಬೇಕೆಂಬದಿಷ್ಟೇ ನನ್ನ ಅಭಿಪ್ರಾಯವು. ನನಗಂತೂ ಆ ಹಂಚಿಕೆಯು ಬಲು ಯೋಗ್ಯವೆಂದು ತೋರುತ್ತದೆ. ನಾನು ನನ್ನ ಯಜಮಾನರಿಗೆ ಅದನ್ನೆಂದೋ ಹೇಳಿಬಿಟ್ಟಿದ್ದೇನೆ. ಅದಕ್ಕೆ ಇನ್ನು ನಿಮ್ಮ ಅಭಿಪ್ರಾಯವೊಂದು ದೊರೆಯಬೇಕು; ಹಾಗು ನಾನದನ್ನು ಮಾಡಬೇಕು ಇಷ್ಟೇ ಅವಕಾಶವು ಉಳಿದಿದೆ. ನಾನು ಹೇಳುವ ಆ ಹಂಚಿಕೆಯನ್ನು ನೀವು ಮರುಮಾತನಾಡದೆ ಮಾಡಿಬಿಡಿರಿ; ತಿಳಿಯಿತೇ? ಅತ್ತಿಗೀ, ಒಳಗೆ ಏನು ಮಾಡುತ್ತಿರುವಿರಿ? ಕೇಳಿದಿರೇನು ನಾವು ಏನು ಮಾತಾಡಿದೆವೆಂಬದನ್ನು?

ನಾನು:—ಹೋಗಲಿ ಬಿಡು. ಮೋರಪ್ಪಾ, ಇಂಥ ಮಾತಿನಲ್ಲಿ ಹೆಂಗಸರನ್ನೇನು ಕೇಳುವದು? ನೀನು ನಿನ್ನ ಯುಕ್ತಿಯನ್ನು ನನಗಂತೂ ಮೊದಲು ತಿಳಿಸು. ಹೆಂಗಸರೇನು, ಸವಿಗೂಳಿಗೆ ಮಾತ್ರ ಯಾವಾಗಲೂ ಸಿದ್ಧರು!

ಮೋ:—ಹಾಗಲ್ಲರೀ ಗುರುಭಟ್ಟರೇ, ನೀವು ಹೆಣ್ಣುಮಕ್ಕಳನ್ನೇನು ಕಸ-ಕಡ್ಡಿಯೆಂದು ತಿಳಿಯುತ್ತಿರುವಿರಾ? ಇಡೀ ಸಂಸಾರವು ಅವರಿಂದಲೇ ಸಾಂಗವಾಗುತ್ತಲಿದೆ. ಅದರಿಂದ ಪ್ರತಿಯೊಂದು ವಿಷಯಕ್ಕೂ ಅವರ ಸಲಹೆಯನ್ನು ಕೇಳಿಕೊಳ್ಳುತ್ತಿರಬೇಕು.

ಇಷ್ಟು ಪ್ರಸ್ತಾವನೆ ನಡೆದಿರಲಿಕ್ಕೆ ನನ್ನ ಗೃಹಿಣಿಯೇ ಅಲ್ಲಿಗೆ ಬಂದಳು. ಆಗ ಮೋರಪ್ಪನು ಮತ್ತೆ:—ಇಲ್ಲಿ ನಿಮ್ಮ ಪ್ರಪಂಚದ ಅನುವಾಲ್ಯವಾಗುತ್ತಿದೆ; ಪಟ್ಟಣವಾಸ; ಆದಾಯ ಕಡಿಮೆ; ಅಲ್ಲದೆ ನಾಲ್ಕು ಜನ ಚಿಕ್ಕ-ದೊಡ್ಡವರು; ಅಂದ ಮೇಲೆ ಏನು ಬೇಡ? ಅದರಿಂದ ತೊಂದರೆಯಾಗತಕ್ಕದ್ದೇ. ಇನ್ನೂ ನಿಮ್ಮ ಬಾಳನು ಕಲಿಯುತ್ತಿರುವನು. ನಾಳೆ ಕಲಿತು ಜಾಣನಾದನೆಂದರೆ ಗುರುಭಟ್ಟರೇ, ಆತನು ದುಡ್ಡಿನ ಮಳೆ ಸುರಿಸುವನು ಮಳೆ! ತಿಳಿಯಿತೇ? ಅದುವರೆಗೆ ಬಂದ ಪ್ರಸಂಗಗಳನ್ನು ಸುಮ್ಮನೆ ನೀಗಿಸಲೇ ಬೇಕು. ಪ್ರಸಂಗ ವಿಶೇಷದಲ್ಲಿ ನಾಲ್ಕು ದುಡ್ಡು ಸಾಲವಾದರೂ ಚಿಂತೆಯಿಲ್ಲ. ಸಾಲ-ಸಾಲವೆಂದರೇನು, ತೀರದೆ ಹಾಗೆಯೇ ಉಳಿಯುವುದೇ?

ನಾನು:—ಮೋರಪ್ಪಾ, ನೀನಿದೇನನ್ನು ಹೇಳುತ್ತಿರುವೆ? ಒಂದು ವೇಳೆ ಹೊಟ್ಟೆಗಿಲ್ಲದೆ ಸಾಯುವದು ಲೇಸು; ಆದರೆ ಆ ಬ್ರಹ್ಮಸ್ವವು ಬೇಡವಪ್ಪಾ! ಅಡಚಣಿ-ಅಡಚಣಿಗಳೆಂದರೇನು? ಇಂದಿದ್ದರೆ ನಾಳಿಲ್ಲ; ಆದರೆ ಸಾಲದ ಮಾತಂತೂ ಹಾಗಿಲ್ಲವಷ್ಟೇ? ಅದು ಹಗಲು ರಾತ್ರಿಗಳೆನ್ನದೆ, ಮಳೆ ಬಿಸಿಲಿನ ದಾರಿ ಕಾಯದೆ ಒಂದೇ ಸವನೆ ಚಿಗಿಯುತ್ತಿರುತ್ತದೆ. ಬೇಡಪ್ಪಾ ಬೇಡ, ಸಾಲದ ಹೆಸರು ಕೂಡ ಎತ್ತಬೇಡ.

ಮೊ:—ನಿಮ್ಮ ಮಾತು ನಿಜವಿದೆ; ಆದರೆ ಸಾಲವು ಯಾರಿಗೆ ಇಲ್ಲ? ರಾಜನೇ ಇರಲಿ, ರಂಕನೇ ಇರಲಿ; ಪ್ರತಿಯೊಬ್ಬನಿಗೂ ಅಲ್ಪಸ್ವಲ್ಪ ಋಣವಾದರೂ ಇದ್ದೇ ಇದೆ. ಇನ್ನು ಅದರಲ್ಲಿಯೂ ಯುಕ್ತಾಯುಕ್ತ ವಿಚಾರಮಾಡಬೇಕಾಗುತ್ತಿರುವದರಿಂದಲೇ ನಾನು ನಿಮಗೆ ಒಳ್ಳೇ ಯೋಗ್ಯವಾದ ಯುಕ್ತಿಯನ್ನು ಹೇಳಲಿರುವೆನು. ನೀವು ಸಾಲಬೇಡೆನ್ನುತ್ತೀರಲ್ಲವೆ? ನಿಜ; ನಾನೂ ಸಾಲವು ಬೇಡವೇ ಬೇಡೆನ್ನುತ್ತೇನೆ; ಆದರೆ ಹೇಳಿರಿ ಮೊದಲು-ಗೃಹನ್ಯೂನ ತೆಗೆದೆನೆಂದು ಸಿಟ್ಟಾಗಬೇಡಿರಿ-ಈಗ ಅತ್ತಿಗೆಯವರ ಮಡಿ ಸೀರೆ ಹರಿದಿರುವವು; ಹುಡುಗನು ಸಾಲೆಗೆ ಎಂಥ ಉಡುಪಿನಿಂದ ಹೋಗುತ್ತಿರುವನೆಂಬದನ್ನು ನೋಡುತ್ತಲಿರುವಿರಿ; ಹುಡುಗಿಯ ಲಗ್ನ ಬಂತು; ಇನ್ನು ಕೆಲದಿನಗಳಿಗೆ ಸೊಸೆಯು ಗೌರಿ-ಗಂಗೆಗಳಾಗಬೇಕು; ಮಾಲತಿಯನ್ನು ಕರೆ ಕಳುಹಿಸಬೇಕು. ಹೀಗೆ ಒಂದಲ್ಲ, ಎರಡಲ್ಲ ನೂರಾರು ಅಡಚಣಿಗಳಿರುತ್ತವೆ. ಇವುಗಳನ್ನೆಲ್ಲ

ನೀಗಿಸುವ ಬಗೆ ಹೇಗೆ? ಶ್ರಾವಣಮಾಸದ ದಕ್ಷಿಣೆಯಿಂದಲೋ, ಪಕ್ಷಮಾಸದೊಳಗಿನ ಪಿಂಡಗಳೆದುರಿಗಿನ ಆದಾಯದಿಂದಲೊ?

ನನ್ನ ಗೃಹಿಣಿ:-ಮೋರಪ್ಪನವರೇ ಹೇಗೆ ಹೇಳಿದಿರಿದು! ನಾಳೆಯೇ ಪಂಚಮಿಯ ಹಬ್ಬ ಬಂತು. ಮಾಲತಿಗೆ ಒಂದು ಸೀರೆ ಕುಪ್ಪಸ ಬೇಡವೆ? ಆವಳಿಗೆ ತಂದ ಬಳಿಕ ಚಂಪೆಗೆ ಬಿಡುವುದುಂಟೇ? ಇನ್ನು ನನ್ನ ಮುದಿ ಸೀರೆಗಳಿರಲಿ ಒತ್ತಟ್ಟಿಗೆ. ಬಾಳನು ದಿನಾಲು ಇದು ಬೇಕು, ಅದು ಬೇಕು ಎಂದು ಹಟಮಾಡುತ್ತಲೇ ಇರುವನು! ಆ ಹುಡುಗನ ಸೋಲಿಸಿ ನನ್ನ ಪ್ರಪಂಚದ ಎಲ್ಲ ಭರವಸೆಯು. ಅಂದಬಳಿಕ ಆತನ ಯಾವುದೊಂದು ಆಪೇಕ್ಷೆಯನ್ನಾದರೂ ನಾವು ಮಾಡಬೇಡವೆ? ನಾನೇನು ವಸ್ತ್ರ-ಒಡವೆ ಗಳನ್ನು ಕೇಳುವೆನೆ ಅಥವಾ ನನ್ನ ಮುಖಿರೆಯೊಳಗಿನ ಎರಡು ದೊಡ್ಡ ಕಾಳಿಗಳು ಕಳಚಿ ಬಿದ್ದಿರುವನಲ್ಲ, ಅವುಗಳನು ಈಗಲೆ ತಂದುಕೊಡಿರೆಂದು ಹೇಳುತ್ತಿರುವೆನೇ?

ನಾನು:—ಸರಿ-ಸರಿ. ಅದಿರಲಿ ಮೋರಪ್ಪಾ, ಎಲ್ಲರ ಮಾತೂ ಸಟೆ, ನನ್ನ ದೇ ದಿಟವಾಗಿಸಲ್ಲವೇಕೆ? ಅವರೆ ನನ್ನ ಹಂಚಿಕೆಯಾದರೂ ಯಾವುದೆಂಬದನ್ನು ಹೇಳು ಕೇಳಿಕೊಳ್ಳೋಣ.

ಮೋ: -ಅಷ್ಟಿಗೇ, ಕೇಳಿರಿ. ಆ ನನ್ನ ಯಜಮಾನರಿರುವರಲ್ಲ, ಆ ಭೀಮ ರಾಯರು ಎಷ್ಟು ದೊಡ್ಡ ಸಾಹುಕಾರರಿರುವರೆನ್ನಲಿ? ಆ ಪುಣ್ಯಾತ್ಮನು ಬಹು ದೊಡ್ಡ ಮನುಷ್ಯನಾಗಿರುವನೆ.

ನನ್ನ ಗೃಹಿಣಿ: —ಅಹುದಹುದು ಆ ನಿಮ್ಮ ಯಜಮಾನರಾದ ಭೀಮರಾ ರಾಯರಲ್ಲವೆ? ನನ್ನ ಚಂಪೆಯು ಮೊನ್ನೆ ಭಾನುವಾರ ದಿವಸ ಮುತ್ತೈದೆಯೆಂದು ಅವರಲ್ಲಿಗೆ ಊಟಕ್ಕೆ ಹೋಗಿದ್ದಳು. ಒಂದು ಪಾವಲಿ ದಕ್ಷಿಣೆ ನೀಡಿತ್ತು, ಇಷ್ಟಗಲು ಅಂಚಿನ ಖಣವನ್ನು ಅವರು ಆಕೆಗೆ ಕೊಟ್ಟಿದ್ದರು. ಒಳ್ಳೇ ಮನುಷ್ಯರಿರುತ್ತಾರೆ. ಅವರ ಚಿಕ್ಕಮ್ಮನೋ ಯಾರು ಅವರಲ್ಲಿರುವವಳು? ಅವಳೂ ದೊಡ್ಡ ಗುಣದವ ಳಿದ್ದಾಳಂತೆ. ಪುರಸತ್ತಾದಾಗ ನನ್ನನ್ನು ಬಂದು ಹೋಗಲಿಕ್ಕೆ ಕೂಡ ಹೇಳಿಕಳಿಸಿರು ತ್ತಾಳೆ; ಆದರೆ ಅವರಲ್ಲಿಗೆ ಹೋಗಲಿಕ್ಕೆ ನನಗೆ ಅವೆಲ್ಲಿ ಪುರಸತ್ತಾಗುತ್ತದೆ? ಬಾಳನು ಸಾಲೆಯಿಂದ ಮನೆಗೆ ಬಂದೊಡನೆಯೇ ಹಸಿವು-ಹಸಿವೆಂದು ಕುಣಿಯ ಹತ್ತುತ್ತಾನೆ. ಪಾಪ! ಅವನಾದರೂ ಏನು ಮಾಡುವನು? ಬೆಳಿಗ್ಗೆ ಯಾವಾಗಲೊಮ್ಮೆ ನಾಲ್ಕು ತುತ್ತು ತಿಂದು ಹೋಗುವನೋ, ಸಂಜೆಯವರೆಗೂ ಅಭ್ಯಾಸವೇ ಅಭ್ಯಾಸ! ಸಾಕಪ್ಪಾ ಆ ಅಭ್ಯಾಸದ ರಗಳೆ.

ಮೋ: —ಹಾಗಲ್ಲರೀ ಗುರುಭಟ್ಟರೇ, ಆ ನಮ್ಮ ಯಜಮಾನನೇ ಹಾಗಿರು ತ್ತಾನೆ. ಆತನ ಗುಣಗಳೇನು, ಶ್ರೀಮಂತಿಕೆಯೇನು, ರೀತಿ-ನಡಾವಳಿಗಳೇನು? ಏನ ನ್ನೂ ಎತ್ತಿ ಎಣಿಸುವಂತಿಲ್ಲ.

ನಾನು:—ಒಳ್ಳೇದು. ಮುಂದೇನು?

ಮೋ: —ನೀವು ಅವರ ಕಡೆಯಿಂದ ಪ್ರತಿ ತಿಂಗಳಿಗೆ ಹದಿನೈದು-ಇಪ್ಪತ್ತು

ರೂಪಾಯಿ ಕೈಗಡ ತಂದುಕೊಳ್ಳಿರಿ; ನಾಳೆ ನಿಮ್ಮ ಬಾಳನು ಗಳಿಸಹತ್ತಿದನೆಂದರೆ, ತೀರಿಸುವನು ಅವರ ಬಾಕಿಯನ್ನು. ಬಡ್ಡಿಯು ದರವಾದರೂ ಹೆಚ್ಚಿರುವದಿಲ್ಲ. ತಿಂಗಳಿಗೊಂದರಂತಾದರೆ ಹೆಚ್ಚಾಯಿತು ಅತ್ತಿಗೀ, ನಾನು ಹೇಳುವದು ಸಟಿಯೋ-ದಿಟವೋ?

ನನ್ನ ಗೃಹಿಣಿ:—ನಿಜ ನಡೆಯತಕ್ಕ ಮಾತೇ ಇದಾಗಿದೆ. ಹಾಗೆ ಕೊಡತಕ್ಕವರಾದರೂ ನಮಗೆ ಇಲ್ಲಿ ಯಾರಿರುತ್ತಾರೆ?

ನಾನು:-ಹಾಗಾದರೆ ತಂದುಕೊಳ್ಳಿರಿ ಆ ಸಾಲವನ್ನು; ಹಾಗು ತೀರಿಸಿರದನ್ನು ಹೇಗೆ ಕೊಟ್ಟು ತೀರಿಸುವಿರೋ? ಏನೇ, ಸಾಲವೆಂದರೇನು ಬರಿಯ ಬಾಯ ಮಾತೆಂದು ತಿಳಿದಿರುತ್ತೀಯೇನು? 'ಸಾಲವನು ತರುವಾಗ ಹಾಲು-ಬಾನುಂಡಂತೆ, ಸಾಲವನ್ನು ಕೊಡುವಾಗ ಕುಂಡಿಗೆ ಚೇಳು ಕಡಿದಂತೆ' ಎಂಬ ಮುದುಕಿಯರ ಅನುಭವಜನ್ಯ ವಚನವು ಸುಳ್ಳಾದೀತೇ? ನಿಮ್ಮ ಹೆಂಗಸರಿಗೇನು? ಅನಾಯಾಸದಿಂದ ಮನೆಗೆ ಬಂದ ಸಾಮಾನುಗಳನ್ನು ಬೇಕಾದ ಹಾಗೆ ತಿಂದುಂಡು ತೀರಿಸಿ ಬಿಡಲಿಕ್ಕೆ ಬರುತ್ತದೆ! ಒಂದು ದುಡ್ಡು ಗಳಿಸಿಕೊಂಡು ಬರಬೇಕಾದರೆ ಎಷ್ಟು ಶ್ರಮಪಡಬೇಕಾಗುತ್ತದೆಂಬದು ನಿಮಗೇನು ಗೊತ್ತಿದೆ? ಖರ್ಚಿನ ಸಂಗತಿಗಳನ್ನು ಮಾತ್ರ ನೀವು ಛನ್ನಾಗಿ ವರ್ಣಿಸಬಲ್ಲಿರಿ! ಅದೇನೇ ಇರಲಿ, ಮೋರಪ್ಪಾ. ಸಾಲ-ಸಂಬಂಧ ವಾದ ಇರುವ ವರೆಗೆ ನಾನೂ, ಮುಂದೆ ನನ್ನ ಮಕ್ಕಳು-ಮರಿಗಳೂ ತೊಳಲಾಡುವ ಕಂಟಕವನ್ನು ನೀನು ನಮಗೆ ಹೇಳಬಾರದು; ಮತ್ತು ನಾವು ಅದನ್ನು ಕೇಳಬಾರದು. ನೀನು ನನ್ನ ಸ್ನೇಹಿತನೆಂದು ನಮ್ಮ ಹಿತದ ಮಾತು ಹೇಳುತ್ತಿರುವೆ; ಸಲಹೆ ಕೊಡುತ್ತಿರುವೆ. ಹೀಗಿದ್ದು, ನಾವು ಅವುಗಳನ್ನು ಕೇಳದಿರುವದು ಯೋಗ್ಯವಾಗಿರುವದಿಲ್ಲ; ಆದರೆ ಮೋರಪ್ಪಾ, ಈ ವಿಷಯದಲ್ಲಿ ನಾನು ನಿರುಪಾಯನಾಗಿಹೆನು. ಸಾಲವೆಂದ ಕೂಡಲೆ ನನ್ನ ಮೈಮೇಲೆ ಮುಳ್ಳೇ ಏಳುತ್ತವೆ! ಸಾಲ ಮತ್ತು ಯಾಚನೆ ಇವುಗಳು ಅತ್ಯಂತ ಮಾನಹಾನಿಯ ದ್ಯೋತಕ ಚಿಹ್ನಗಳು. ಈ ಎರಡರೊಳಗಿನ ಯಾಚನೆಯೊಂದು ನಮ್ಮ ಬೆನ್ನಿಗೆ ಹತ್ತಿದ್ದೇ ಇರಲು, ಈ ಎರಡನೇ ಸಾಲದ ಪೀಡೆಯೇತಕ್ಕೆ ಬೇಕು? ಅಂತೆಯೇ ನಾನು ನಿನ್ನ ಸಲಹೆಗೆ ಒಪ್ಪುವದಿಲ್ಲ. ನೀನು ನಮ್ಮ ಋಣಾನುಬಂಧಿಕನಾಗಿರುವುದರಿಂದಲೇ ನಮಗಾಗಿ ಇಷ್ಟು ಪ್ರಯತ್ನ ಮಾಡುತ್ತಿರುವಿಯಲ್ಲವೆ?

ಈ ಬಗೆಯ ಹಲವು ಮಾತು-ಕಥೆಗಳಾದ ಬಳಿಕ ಮೋರಪ್ಪನು ತಮ್ಮ ಮನೆಗೆ ಹೊರಟು ಹೋದನು. ಮುಂದೆ ಕೆಲ ದಿನಗಳು ಹಾಗೆಯೇ ಪೇಚಾಟದಲ್ಲಿ ಕ್ರಮಿಸಿದವು. ಮನೆಯೊಳಗಿನ ಅಡಚಣಿಗಳನ್ನು ಅವಳು ಒಳ್ಳೇ ನಿಕರದಿಂದ ನನ್ನೆದುರಿಗೆ ಹೇಳಹತ್ತಿದಳು. ಯಾಕಂದರೆ, ನನಗೆ ಹೇಗಾದರೂ ಹಣವು ಸಿಗುತ್ತಿದ್ದು, ನಾನೇ ಬೇಕೆಂದು ಅದನ್ನು ಸ್ವೀಕರಿಸುವದಿಲ್ಲೆಂಬದು ಅವಳಿಗೆ ಗೊತ್ತಾಗಿ ಹೋಗಿತ್ತು. ನನ್ನ ಆ ಕೃತಿಯು ಒಳಿತಲ್ಲೆಂದೂ ಅವಳು ಮನಸ್ಸಿನಲ್ಲಿ ಅಂದುಕೊಳ್ಳುತ್ತಿದ್ದಳು. ಅವಳ ಆ ಭಾವನೆಯನ್ನು ನಾನು ಕಂಡು ಹಿಡಿದಿದ್ದೆನು ಇದರಲ್ಲಿ ಮಾಲ್ಕ

ತಿಯ ಮಾವನು ಹರಿಹರದಿಂದ ಏತಕ್ಕೋ ಬೆಂಗಳೂರಿಗೆ ಬಂದನು; ನಾವು ಬೆಂಗಳೂರಲ್ಲಿಯೇ ಮನೆಮಾಡಿಕೊಂಡಿರಹತ್ತಿದ್ದರಿಂದ ಆತನು ನಮ್ಮಲ್ಲಿಯೇ ಉಳಕೊಂಡನು. ಬೀಗರು ಮನೆಗೆ ಬಂದಾಗ ತೋರಿಕೆಯಲ್ಲಿ ಶ್ರೀಮಂತಿಕೆಯಿರದಿದ್ದರೂ, ಊಟಪಾಟಗಳಲ್ಲಂತೂ ತೋರಿಸುವದು ಪ್ರತಿಯೊಬ್ಬ ಗೃಹಸ್ಥರ ಕರ್ತವ್ಯವಾಗಿಬಿಟ್ಟಿದೆ. ಅದರಿಂದ ಆ ಬಗ್ಗೆ ನಾನೂ ನನ್ನ ಗೃಹಿಣಿಯೂ ಮನಮುಟ್ಟಿ ಪ್ರಯತ್ನಿಸಹತ್ತಿದೆವು. ಆತನು ಎಂಟಾನೆಂಟು ದಿನ ಇದ್ದೇಬಿಟ್ಟನು. ಆತನು ನಮ್ಮಲ್ಲಿರುವ ವರೆಗೆ ನಾವೆಲ್ಲರೂ ನಮ್ಮ ಊಟದ ಆಮಂತ್ರಣಗಳನ್ನೆಲ್ಲ ಬಿಟ್ಟು ಮನೆಯಲ್ಲೇ ಉಣ್ಣಹತ್ತಿದೆವು; ಆ ಮೇಲೆ ಆದ ಖರ್ಚಿನ ತಾಪತ್ರಯವನ್ನೆಷ್ಟೆಂದು ಹೇಳಲಿ? ಆತನು ಹೊರಡುವಾಗ ಮಾಲತಿಗೊಂದು ಸೀರೆಯನ್ನಂತೂ ಕೊಂಡು ಕೊಡಲೇಬೇಕು; ಅವಳ ಅತ್ತೆಗೊಂದು ಖಣ ಬೇಕು, ಹೀಗೆಂದು ಮನೆಯೊಳಗಿಂದ ಉಪದ್ರವವುಂಟಾಯಿತು. ಅವಳ ಅಂಬೋಣವಾದರೂ ಯೋಗ್ಯವೇ ಆಗಿತ್ತು. ನಾವು ಹರಿಹರದಿಂದ ಬರುವಾಗ ಮಾಲತಿಯು ನನ್ನನ್ನು ಕುರಿತು:—ಅಪ್ಪಾ, ಬೆಂಗಳೂರಲ್ಲಿ ಗಿರಿಯ ತಂಬಿಗೆಗಳು ಸಿಗುತ್ತವಂತೆ. ಯಾರಾದರೂ ಬರುವವರ ಸಂಗಡ ಅದನ್ನು ಕೊಂಡು ಕಳಿಸಬೇಕೆಂದು ತಿಳಿಸಿದ್ದಳು. ಮಂದಿಯ ಮನೆಗೆ ಹೋದ ಮಗಳು ಯಾವುದೊಂದು ಜೀನಸು ಕೇಳಿದರೆ ಕೊಡದಿರುವದುಂಟೇ? ಅದರಿಂದ ಅದಾವ ಬಗ್ಗೆಯೂ ನಾನು 'ನ'ಕಾರವನ್ನು ಹೇಳಲಿಲ್ಲ.

ಮೋರಪ್ಪನು ದಿನಾಲು ನಮ್ಮ ಮನೆಗೆ ಬಂದೇ ಬರುತ್ತಿದ್ದನು. ಅದರಿಂದ ನಾನು ಅವನಿಗೆ ಆ ಎಲ್ಲ ಅಡಚಣಿಗಳನ್ನು ಮತ್ತೆ ಹೇಳಿದೆನು. ಅದಕ್ಕೆ ಆತನು 'ಎಂಥ ಹುಚ್ಚ ಬ್ರಾಹ್ಮಣರಿವರು? ತಮ್ಮ ಜೀವವನ್ನು ಸುಮ್ಮನೆ ಹಣ್ಣುಮಾಡಿಕೊಳ್ಳುತ್ತಾರೆ! ಪ್ರಪಂಚದಲ್ಲಿ ಕೈಗಡ, ಕಟ್ಟಗಡ, ಸಾಲ, ಸಂಬಂಧವಿರದಂತಹ ಒಬ್ಬ ಪ್ರಾಣಿಯಾದರೂ ಈ ಲೋಕದಲ್ಲಿ ಇರುವನೇ? ಬಿಸಿಲು ಬಂದ ಕಡೆಗೆ ಕೊಡೆ ಹಿಡಿಯಬೇಕು,' ಎಂದಂದ ವಚನಗಳನ್ನು ಕೇಳಿ, ಆಗ ನನಗೂ ಆತನ ಅಂಬೋಣವು ರುಚಿಸಿತು. ಸಂಸಾರವನ್ನೇ ಮಾಡಹತ್ತಿದ ಬಳಿಕ ಅದಕ್ಕಾಗಿ ಸಾಲ-ಸಂಬಂಧಗಳು ಆಗತಕ್ಕವೇ ನಾವು ಈಗ ಹಾಳು ಮಾಡಲಿಕ್ಕೆ ಬೇರೆ ಸಾಲ ತೆಗೆಯುವದಿಲ್ಲವಲ್ಲ! ಅದರಿಂದ ಈ ಸಾಲದ ಬಗ್ಗೆ ನಮಗಾರೂ ಹೆಸರಿಡಲಾರರು; ಅಲ್ಲದೆ ಮೋರಪ್ಪನು ತಾನಾಗಿ ಹಣ ತಕ್ಕೊಳ್ಳಿರೆಂದು ಹೇಳುತ್ತಿರುವನು. ಮನೆಯಲ್ಲಂತೂ ಅಡಚಣಿಯು ಹೆಚ್ಚಿದೆ. ಅಂಗಡಿಕಾರರಲ್ಲಿ ಜೀನಸು ಉದ್ದರಿ ತರುವದಕ್ಕಿಂತ ಇಲ್ಲವೆ ಮಾರವಾಡಿಯಲ್ಲಿ ಅರಿವೆ ಅಂಚಡಿಗಳನ್ನು ಉದ್ರಿ ತರುವದಕ್ಕಿಂತ ಹಣ ಕೈಗಡ ತಕ್ಕೊಳ್ಳುವದೇನು ತಪ್ಪು? ಹೀಗೆ ಆಲೋಚಿಸಿ, ನಾನು ಮೋರಪ್ಪನನ್ನು ಕುರಿತು:—'ಮೋರಪ್ಪಾ, ನಿನ್ನ ಸಲಹೆಯಂತೆ ನಡೆಯುವದೇ ವಿಹಿತವೆಂದು ಇತ್ತೀಚೆಗೆ ನನಗೆ ತೋರತೊಡಗಿದೆ; ಆದರೆ ನಾನು ಇದು ವರೆಗೆ ಯಾರ ಬಳಿಯಲ್ಲೂ ಸಾಲ ಕೇಳಿರುವದಿಲ್ಲ. ಅದರಿಂದ ಈ ದಿನ ನೀನೇ ನಿಮ್ಮ ಯಜಮಾನರಿಂದ ನನಗಾಗಿ ಸಾಲವನ್ನಿಸಕೊಂಡು ಬಾ. ತುಸ ಪರಿಚಯವಾದ ಮೇಲೆ ನಾನು ಅವರಲ್ಲಿಗೆ ಬಂದೇನಂತೆ' ಎನ್ನಲು, ಅದಕ್ಕೆ

ಮೋರಪ್ಪನು ಸಂತೋಷದಿಂದೊಪ್ಪಿ:—'ಏನೂ ಚಿಂತೆಯಿಲ್ಲ, ಆ ಕೆಲಸವು ನನ್ನ ಕಡೆಗೆ. ನೀವು ಒಮ್ಮೆ ಈ ಅಡಚಣಿಗಳಿಂದ ಮುಕ್ತರಾಗಿರೆಂದರೆ ತೀರಿತು.'

ಹೇಳಿದಂತೆ ಮೋರಪ್ಪನು ಅಂದೇ ಸಂಜೆಯೊಳಗಾಗಿ ಹದಿನೈದು ರೂಪಾಯಿ ತಂದು ಕೊಟ್ಟನು. ಮಾಲತಿಯು ಸೀರೆ, ಖಣ, ತಂಬಿಗೆಗಳನ್ನು ತಂದು ಕೊಟ್ಟು, ನಮ್ಮ ಬೀಗನನ್ನು ಕಳಿಸಿಕೊಟ್ಟೆನು. ಮುಂದೆ ನಾಲ್ಕೈದು ದಿನಗಳು ಕಳೆಯುವಷ್ಟರಲ್ಲಿಯೇ ಸರ್ಪಪುರಿಯ ಬೀಗರ ಪತ್ರ ಬಂತು. ಅದರಲ್ಲಿ ಸೊಸೆಯನ್ನು ಕರೆಯಲಿಕ್ಕೆ ಕಳಿಸುವೆವೆಂದು ತಿಳಿಸಿದ್ದರು. ಅಲ್ಲಿಂದ ಕರೆಯಲಿಕ್ಕೆ ಬಂದ ಕೂಡಲೆ ಸೊಸೆಗೊಂದು ಸೀರೆ-ಖಣ, ಆಕೆಯ ಜೊತೆಗೆ ಬಂದಿದ್ದ ಆಕೆಯ ತಂಗಿಗೊಂದು ಖಣ ತರಲೇ ಬೇಕೆಂದು ನನ್ನ ಗೃಹಿಣಿಯು ಒತ್ತಾಯ ಪಡಿಸಿದಳು. ಅದಕ್ಕಾಗಿ ಎಂಟು-ಹತ್ತು ರೂಪಾಯಿಗಳಾದರೂ ಬೇಡವೆ? ಅವುಗಳನ್ನು ಮೋರಪ್ಪನಿಂದಲೇ ತರಿಸಿಕೊಂಡೆನು. ಬಳಿಕ ನನ್ನ ಗೃಹಿಣಿಗೆರಡು ಸೀರೆ, ಬಾಳನಿಗೆ ಹೊಸ ಮಾರಿಯ ಉಡುಪು, ನನಗೆ ಸ್ವಂತಕ್ಕೆ ದೋತರ-ಪಂಚೆ, ಚಂಪೆಗೆ ದಟ್ಟಿ ಹೀಗೆ ಮತ್ತೆ ಬೆಳೆಯಿತು ಸಾಲ. ಇಷ್ಟರಲ್ಲಿ ಮಾಲತಿಯ ಅತ್ತೆಯು ಆಕಸ್ಮಿಕವಾಗಿ ತೀರಿಕೊಂಡ ವರ್ತಮಾನ ಬಂತು. ಮಾತಾಡಿಸಲಿಕ್ಕೆಂದು ಹರಿಹರಕ್ಕೆ ಹೋಗಬೇಡವೆ? ಖರ್ಚಿನ ಅಡಚಣಿಯಂತೂ ಇದ್ದದ್ದೇ. ಅದರಿಂದ ಮತ್ತೆ ಸಾಲ ತರಬೇಕಾಯಿತು. ಹಾ, ಹಾ, ಅನ್ನುವಷ್ಟರಲ್ಲಿ ಸಾಲದ ಅಂಕಿಯು ಮೂರರ ಮನೆಗೆ ಬಂತು! ಮೋರಪ್ಪನ ಯಜಮಾನನು ನನಗೊಮ್ಮೆ ಖುದ್ದಾಗಿ ಬಂದು ಭೆಟ್ಟಿಯಾಗಲಿಕ್ಕೆಂದು ಹೇಳಿ ಕಳಿಸಿದನು. ಅದರಿಂದ ಒಳ್ಳೇ ಖಿನ್ನಮನಸ್ಕನಾಗಿ ನಾನು ಅವರ ಮನೆಗೆ ಹೋದೆನು. ನನ್ನ ಜೊತೆಗೆ ಮೋರಪ್ಪನೂ ಬಂದಿದ್ದನು. ಅಲ್ಲಿಗೆ ಹೋದಬಳಿಕ ಮಾನ-ಮರ್ಯಾದೆ, ಆದರಾತಿಥ್ಯಗಳು ನನ್ನ ಕಲ್ಪನೆಗೆ ಮೀರಿ ಆದವು! ಅದರಿಂದಲೇ ಇದೇನೋ ವಿಶೇಷ ಚಮತ್ಕಾರವಿದೆಯೆಂದು ನನಗೆ ಆಗಲೆ ಅನಿಸಿತು.

ಯಾಕಂದರೆ, ಸಾವುಕಾರನಿಗೆ ಸಾಲಗಾರನು ಜಗತ್ತಿನೊಳಗಿನ ತೀರ ಕ್ಷುದ್ರ ಪ್ರಾಣಿಯೆಂದೆನಿಸುತ್ತದೆ. ಸಾಲಗಾರರಿಗೆ ಮಾನವಿಲ್ಲ, ಬುದ್ಧಿಯಿಲ್ಲ, ತಿಳುವಳಿಕೆ ಇಲ್ಲ; ಮತ್ತು ಮರ್ಯಾದೆಯು ಹೇಗೆಂಬದು ಗೊತ್ತೇ ಇಲ್ಲೆಂದು ಸಾವುಕಾರರಿಗೆ ಅನಿಸುತ್ತಿರುತ್ತದೆ; ಮತ್ತು ಅವರಿಗೆ ಹಾಗೆನಿಸುವುದಾದರೂ ಯೋಗ್ಯವೇ ಆಗಿರುತ್ತದೆ. ನಾನು ಮೋರಪ್ಪನೊಡನೆ ಹೋಗುವಾಗ ಎಡಗೈಯಲ್ಲಿ ಜೀವ ಹಿಡಕೊಂಡು ಹೋಗಿದ್ದೆನು; ಆದರೆ ಅಲ್ಲಿಂದ ಹಿಂದಿರುಗುವಾಗ ಮಾತ್ರ ನನ್ನ ಮನಸ್ಸಿನಲ್ಲಿ ಹಲವು ಬಗೆಯ ಶಂಕೆಗಳ ಜಾಳಿಗೆಯು ಹಬ್ಬಹತ್ತಿತ್ತು.

"ಗುರುಭಟ್ಟರೇ, ಈ ಮನೆಯು ನಿಮ್ಮದೇ ಇದೆ. ಹಿಡಿದಷ್ಟು ಹಣ ಒಯ್ಯುತ್ತಿರ್ರಿ. ತಿರುಗಿ ಕೊಡುವ ಚಿಂತೆ ಮಾಡಬೇಡಿರಿ. ಉಭಯತರಲ್ಲಿ ಸಂಬಂಧವುಂಟಾಯಿತೆಂದರೆ, ಆ ಮೇಲೆ ಇದರ ಪರಿವೆಯೇ ಉಳಿಯಲಾರದು!" ಈ ವಾಕ್ಯಗಳೊಳಗಿನ ಮತಲಬವೇನೆಂಬದು ನನಗೆ ಹೊಳೆಯದಾಯಿತು. ಸಾಲ ಬೇಡುವ ಚಾಳಿಯು

ನನಗೆ ಹುಟ್ಟಿದಂದಿನಿಂದಿರದ್ದರಿಂದ ಆ ವಾಕ್ಯಗಳು ನನ್ನ ಮನಸ್ಸಿಗೆ ಹೆಚ್ಚಾಗಿ ಬಾಧಿಸತೊಡಗಿದವು. ಆ ಸಾಲವು ಹೇಗೆ ತೀರೀತು, ಯಾವಾಗ ತೀರೀತು, ಅದನ್ನು ತೀರಿಸುವ ವ್ಯವಸ್ಥೆಯನ್ನೇನು ಮಾಡಬೇಕು? ಎಂಬ ಚಿಂತೆಯು ನನ್ನಲ್ಲಿ ಯಾವಾಗಲೂ ನೆಲೆಗೊಂಡಿತು. ನನ್ನ ಆ ಅಲ್ಪ ಸಾಲಕ್ಕಾಗಿಯೇ ನಾನು ಅಷ್ಟು ತೊಳಲುತ್ತಿರುವಾಗ, ಸಾವಿರಗಟ್ಲೆ ಸಾಲವಿದ್ದವರ ಗತಿಯು ಏನಾಗುತ್ತಿರಬೇಕು? 'ಹೇನು ಹೆಚ್ಚಾದರೆ ತಿಂಡಿಯಿಲ್ಲ; ಸಾಲ ಹೆಚ್ಚಾದರೆ ನಾಚಿಕೆಯಿಲ್ಲ' ಎಂಬದೇ ನಿಜವು. ಅದಿಲ್ಲದಿದ್ದರೆ ಸಾಲದಂತಹ ಭಯಂಕರ ರೋಗವು ಗಂಟುಬಿದ್ದಿದ್ದರೂ, ಆ ಬಗ್ಗೆ ಕೊಂಚವೂ ಪರಿವೆಯಿರದ ಆ ಹರನ ಭಕ್ತರು ಹೇಗೆ ಜೀವಿಸಿರುವರೋ ತಿಳಿಯದು! ಸಾಲಗೊಯ್ಕ ಮನುಷ್ಯನಿಗೆ ಜನರಲ್ಲಿ ಪತ್ತು, ಇರುವದಿಲ್ಲ, ಮನೆಯಲ್ಲಿ ಬೆಲೆಯಿಲ್ಲ, ಚಿತ್ತದಲ್ಲಿ ಸ್ವಾಸ್ಥ್ಯವಿಲ್ಲ, ಮನಸ್ಸಿನಲ್ಲಿ ಆನಂದವಿಲ್ಲ, ಕಾರ್ಯದಲ್ಲಿ ಸಿದ್ಧಿಯಿಲ್ಲ, ಊಟದಲ್ಲಿ ರುಚಿಯಿಲ್ಲ; ಮತ್ತು ದೇಹದಲ್ಲಿ ಪ್ರಾಣವಿಲ್ಲ ಈ ಬಗೆಯ ಅವಸ್ಥೆಯಿರುತ್ತದೆ. ಇದು ಎಲ್ಲರಿಗೂ ಪ್ರತ್ಯಕ್ಷವಾಗಿ ಇಲ್ಲವೆ ಪರಂಪರೆಯಿಂದ ಅನುಭವಕ್ಕೆ ಬರುವ ಸಂಗತಿಯು. ಆದರಿಂದ ಸಾಲದ ಶೂಲದಿಂದ ಸಾಧ್ಯವಿದ್ದಷ್ಟು ದೂರವಿರುವದೇ ಬುದ್ಧಿವಂತಿಕೆಯೆಂಬದು ನಿಜವು; ಆದರೆ ಎಷ್ಟೋ ನಿಕರದ ಪ್ರಸಂಗಗಳಲ್ಲಿ ಮನುಷ್ಯನು ನಿರುಪಾಯನಾಗಬೇಕಾಗುತ್ತದೆ. ಬೇರೆಯವರನೇಕೆ? ನನ್ನ ಉದಾಹರಣೆಯನ್ನೇ ನೋಡಿರಿ! ಒಟ್ಟಿನಲ್ಲೇನು? ಸಾಲವನ್ನು ವಮನಸಮೆಂದು ತಿಳಿದು ದೂರಿರುವದೇ ಜಾಣತನದ ಲಕ್ಷಣವು.

ರಾತ್ರಿ ಇರಲಿ-ಹಗಲಿರಲಿ, ಸ್ವಪ್ನವಿರಲಿ-ಜಾಗೃತಿಯಿರಲಿ ಸಾವುಕಾರನ ಗಂಟಿಗೆ ಬಡ್ಡಿಯು ಬಂದೇ ಬರುತ್ತಿರುತ್ತದೆ! ನಾನು ಬೇರೆ ಬೇರೆ ಕಡೆಯ ಉದ್ರಿ-ಉಚಾಪತಿಗಳ ತೊಂದರೆಯಾಗಬಾರದೆಂದು ಈ ಸಾಲದ ಮುಬ್ಬಿಗೆ ಬಿದ್ದೆನು; ಆದರೆ ಇದು ಅವುಗಳಿಗಿಂತಲೂ ಜೀವಕ್ಕೆ ಹೆಚ್ಚು ತೊಂದರೆಯನ್ನುಂಟು ಮಾಡತೊಡಗಿತು ಹೀಗೆ ನಾನು ಚಿಂತಾಕ್ರಾಂತನಾಗಿರಲು, ಒಂದು ದಿನ ರಾತ್ರಿ ಸಂಧ್ಯಾವಂದನೆಯನ್ನು ಮಾಡಿ ಏನಾದರೂ ಉಪಾಹಾರ ಮಾಡೋಣವೆಂದರೆ, ಮನಸ್ಸು ತೀರ ಉದ್ವಿಗ್ನವಾಯಿತು. ನಾನು ಉದಾಸನಾದದ್ದನ್ನು ಕಂಡು ನನ್ನ ಗೃಹಿಣಿಯೂ ಉದಾಸ ಹಾಗು ಖಿನ್ನ ಮನಸ್ಕಳಾದಳು. ನನ್ನನ್ನು ಯಾವ ಚಿಂತೆಯು ಆವರಿಸಿರುವದೆಂಬದನ್ನು ತಿಳಕೊಳ್ಳಬೇಕೆಂದು ಅವಳು ಹೆಚ್ಚಾಗಿ ಪ್ರಯತ್ನಿಸಿದಳು ನನ್ನ ಸ್ವಂತದ ಅನೇಕ ದಿನಗಳ ಅನುಭವದಿಂದ ನಾನು ಲೋಕದವರಿಗೆ ಸಾರಿ ಸಾರಿ ಹೇಳುವದೇನಂದರೆ, ಗೃಹಿಣಿಯೆಂದರೆ ಸಂಸಾರಕ್ಲೇಶಗಳನ್ನು ಗೂಡಿಸಿ ಚೆಲ್ಲುವ ಕಸಬರಿಗೆಯೇ ಆಗಿದ್ದಾಳೆ! ಗಂಡನು ಚಿಂತಾಕ್ರಾಂತನಾಗಿರುವುದನ್ನು ಕಂಡೊಡನೆಯೇ ಕಕ್ಕಾವಿಕ್ಕಿಯಾಗುವ ಅವಳ ನೇತ್ರದ್ವಯಗಳು, ಪ್ರಾಣಪ್ರಿಯನು ಯಾವ ಸಂಕಟಕ್ಕೆ ಈಡಾಗಿರುತ್ತಾನೆಂಬದನ್ನು ತಿಳಕೊಂಡು ತಾನು ಅದಕ್ಕೆ ಪಾಲುಗಾರಳಾಗಬೇಕೆಂಬ ಇಚ್ಛೆಯನ್ನು ಸಂಪೂರ್ಣವಾಗಿ ಒಳಗೊಂಡು ಸೂಚಿಸುವ ಆಕೆಯ ಅಜ್ಞಾನಜನ್ಯವಾದ ಪ್ರಶ್ನೋ

ತ್ತಾರಗಳು, ಮೊದಲೇ ತ್ರಸ್ತಗೊಂಡಿರುವ ತನ್ನ ಪ್ರಿಯನ ಜೀವಕ್ಕೆ ಈ ಕ್ಷುಲ್ಲಕ ನೆವದಿಂದಲೂ ತ್ರಾಸವಾದೀತೆಂಬ ಕಲ್ಪನೆಯಿಂದ ಹೊಟ್ಟೆಯ ಮಕ್ಕಳನ್ನು ಯಾರಿಗೂ ತಿಳಿಯದಂತೆ ಕಣ್ಣಾತಿರುವಿ ಚೆದರಿಸುವದು ಇಲ್ಲವೆ ಪ್ರಸಂಗ ವಿಶೇಷಗಳಲ್ಲಿ ಒಮ್ಮೆಲೆ ಮೈಮೇಲೆ ಏರಿ ಹೋಗುವದು, ಮುಂಕುಬಿದ್ದ ಪ್ರೀತಿಯನ್ನು ಸಂಪಾದಿಸುವದಕ್ಕೆಂದು ಮತ್ತೆ ಪ್ರಯತ್ನಿಸುವದು ಮುಂತಾದ ಪ್ರಯತ್ನಗಳಿಂದ ಗಂಡನ ಕೋಪವನ್ನೂ, ಚಿಂತೆಯನ್ನೂ ಆಗಲೆ ಮರೆಸಿಬಿಡುತ್ತಾಳೆ. ನಾನು ಸಂಧ್ಯಾವಂದನೆ ಮಾಡಲಿಕ್ಕೆಂದು ಮಣೆಯ ಮೇಲೆ ಕುಳಿತೆನು; ಆದರೆ ಮನಸ್ಸಿನಲ್ಲೇನು? ಸಾವುಕಾರ, ಆತನ ಋಣ, ಮನೆಯೊಳಗಿನ ಸಣ್ಣಪುಟ್ಟ ವಸ್ತ-ಒಡವೆ, ಹುಡುಗನ ನೌಕರಿಯ ಮನೋರಾಜ್ಯ ಇವುಗಳ ತಾಕಲಾಟದ ಹೊರತು ಮತ್ತೇನೂ ಇರಲಿಲ್ಲ. ಉಪಾಹಾರದ ಅವಲಕ್ಕಿಗಳನ್ನು ಹಸ ಮಾಡುವ ನೆವದಿಂದ ನನ್ನ ಗೃಹಿಣಿಯು ದೀಪದ ಹತ್ತರ ಬಂದು ಕುಳಿತುಕೊಂಡು, ನಡುನಡುವೆ ನನಗೆ ಯಾವುದೊಂದು ಪ್ರಶ್ನೆಯನ್ನು ಅಂಜುತ್ತಂಜುತ್ತ ಕೇಳಹತ್ತಿದಳು. ನಾನು ಅವಳ ಪ್ರಶ್ನೆಗೆ ಬಹುಶಃ ಉತ್ತರ ಕೊಡುತ್ತಿದ್ದಿಲ್ಲ. ಕೊಟ್ಟರೂ ಹಾ, ಊಹೂ ಹೀಗೆ ಏನಾದರೂ ಹೇಳಿ ಬಿಡುತ್ತಿದ್ದೆನು.

ಆಗ ಅವಳು ಬೇರೆಯೊಂದು ಪ್ರಶ್ನೆಯನ್ನು ತೆಗೆದಳು. ಮೋರಪ್ಪನವರು ನಮ್ಮ ಚಂಪೆಗೊಂದು ಚಲೋ ವರಮನೆತನವನ್ನು ಎಂದೆನ್ನುತ್ತಿದ್ದರು ನೀವಿಬ್ಬರೂ ಮೊದಲು ಒಪ್ಪಬೇಕು; ಅಂದರೆ ಅದನ್ನು ಕೂಡಿಸಿ ಕೊಡುವದು ನನ್ನ ಕಡೆಗೆ. ವರಮನೆತನವೇನು, ಒಳ್ಳೇ ಯೋಗ್ಯವಾದದ್ದು. ವಸ್ತ-ಒಡವೆ, ಅರಿವೆ-ಅಂಚಡಿ ಮುಂತಾದವುಗಳಿಗೆ ತಾಪತ್ರಯವಿಲ್ಲ, ಎಂದು ಅವರು ಅಂದಿದ್ದರು, ಎಂದೆನ್ನಲು, ನನ್ನ ಮನಸ್ಸೂ ಆಗ ಒಮ್ಮೆಲೆ ಅತ್ತ ಕಡೆಗೆ ಹೊರಳಿತು. ಆಗ ನಾನು ನನ್ನ ಗೃಹಿಣಿಯನ್ನು ಕುರಿತು:—ನಮ್ಮ ಮೋರಪ್ಪನು ಹೀಗೆಂದಿದ್ದನೇ? ಹಾಗಾದರೆ ಆತನು ಈ ಮಾತನ್ನು ನನ್ನ ಮುಂದೆ ಇದುವರೆಗೆಂದೂ ಎತ್ತಿರುವದಿಲ್ಲವಲ್ಲ! ಇದನ್ನು ಆತನು ನಿನಗೆ ಯಾವಾಗ ಹೇಳಿದ್ದನು.

ನನ್ನ ಗೃಹಿಣಿ:—ಒಂದೇ ದಿನವೇನು? ನೊಸ್ಸಿನಿಂದ ನಾಲ್ಕಾರು ಸಾರೆ ಹೇಳಿದರು. ಮೊನ್ನೆ ನೆರೆಮನೆಯ ಸಾವಿತ್ರಿ ಬಂದಿರಲಿಲ್ಲವೆ? ಆಗಲೇ ಅವರು 'ಅತ್ತಿಗೀ, ಚಂಪೆಗೆ ಎಂಥ ಬಂಗಾರದಂತಹ ವರವನ್ನು ನೋಡಿರುವೆನೆನ್ನಲಿ?' ಎಂದು ಹೇಳಿರಬೇಕು.

ನಾನು:—ಹೀಗೆಯೊ? ಒಳ್ಳೇದು. ನಾಳೆಗೆ ಕೇಳೋಣವಂತೆ; ಆದರೆ ಎಲ್ಲಿ? ಇದೇ ಊರಲ್ಲಿಯೋ, ಬೇರೆ ಕಡೆಗೊ?

ನನ್ನ ಗೃಹಿಣಿ:—ನನಗೆ ಅದೆಲ್ಲ ಗೊತ್ತಿಲ್ಲ; ಆದರೆ ಈ ಊರಲ್ಲಿಯೇ ಎಂದು ಅವರು ಹೇಳಿದಂತೆ ನೆನಪಿದೆ. ಇಷ್ಟರೊಳಗೆ ಚಂಪೆಯು ಸೊಟ್ಟ ಸೊಟ್ಟ ಮೋರೆ ಮಾಡುತ್ತ ಅಲ್ಲಿಗೆ ಬಂದು:—'ಅವ್ವಾ, ಈ ಗೋದಿಯು ನನಗೆ ಸಾವುಕಾರ ಭೀಮರಾಯರ ಹೆಂಡತಿಯನ್ನುತ್ತಾಳೆ, ನೋಡೇ' ಎಂಬ ಜಗಳವನ್ನು ತಂದಳು. ಆಗ

ನನಗೊಳ್ಳೇ ಚಮತ್ಕಾರವೆನಿಸಿತು. ನಾನು ಅವಳನ್ನು ಕುರಿತು:—ಚಂಪೀ, ಆ ಭೀಮರಾಯರೆಂದರಾರೆ? ಎಂದು ಕೇಳಲು, 'ನನಗೆ ಗೊತ್ತಿಲ್ಲ ಹೋಗು!' ಎಂದು ಒಳ್ಳೇ ತವಕದಿಂದ ನುಡಿದು, ಚಂಪೆಯು ಆ ಗೋದಿಯೊಡನೆ ಹೊರಟು, ಗಟ್ಟಿಯಾಗಿ: 'ಅವ್ವಾ, ನಾನಿನ್ನು ಆ ಮೋರಪ್ಪನವರ ಮನೆಗೆ ಊಟಕ್ಕೆ ಹೋಗುವವಳಲ್ಲ ಅವ ರಾದರೂ ಅಲ್ಲಿ ಮತ್ತೆ ಮತ್ತೆ ನನಗೆ ಇದನ್ನೇ ಕೇಳುತ್ತಿರುತ್ತಾರೆ. ನಿನಗೆ ಚಿನ್ನದ ಒಡ್ಯಾಣ ಕೊಡಿಸುತ್ತೇನೆ; ಒಂಕಿ ಕೊಡಿಸುತ್ತೇನೆ; ನಾಗಮುರಿಗೆ ಕೊಡಿಸುತ್ತೇನೆ ಎಂದು ಅನ್ನುತ್ತಾರೆ.'

ಅದನ್ನು ಕೇಳಿ ನನ್ನ ತರ್ಕಬುದ್ಧಿಗೆ ಕೀಲೀಕೊಟ್ಟಂತಾಯಿತು! ಮನಸ್ಸಿನಲ್ಲಿ ಮತ್ತೆ ಕಾರ್ಮೋಡಗಳು ಹುಟ್ಟಲಾರಂಭಿಸಿದವು. ಮೋರಪ್ಪನ ಯಜಮಾನನಾದ ಸಾವುಕಾರ ಭೀಮರಾಯನು ವಿಧುರನಾಗಿರುವನೆಂಬದು ನನಗೆ ಅದುವರೆಗೂ ಗೊತ್ತಿರಲಿಲ್ಲ. ಅದು ಗೊತ್ತಾದ ಬಳಿಕ ಎಲ್ಲ ಮಾತಿನ ಸೂತ್ರವು ಹತ್ತ ಹತ್ತಿತು; ಮತ್ತು ಆಗ ಮನಸ್ಸಿಗೆ ಅನಿಸ ಹತ್ತಿತೇನಂದರೆ, ಈ ವ್ಯವಹಾರದಲ್ಲಿ ಮತಲಬಿನ ಗೊಂದಲವು ಹೆಚ್ಚಾಗಿರುತ್ತದೆ. ನನ್ನನ್ನು ಬಲೆಯಲ್ಲಿ ಕೆಡಹುವದಕ್ಕೆಂದೇ ಇದೆಲ್ಲ ಪ್ರಯತ್ನವಿರಬೇಕು, ಎಂದು ನನಗನಿಸಿದ್ದರಿಂದ ಕೇಳುವದೇನು? ಇದುವರೆಗೆ ಮನಸ್ಸನ್ನಾಕ್ರಮಿಸಿದ್ದ ಚಿಂತೆಯನ್ನೊತ್ತಟ್ಟಿಗೆ ದೂಡಿ, ಅಲ್ಲ ಸಂಶಯವು ದುಡುಕತೊಡಗಿತು. ಶಂಕೆಯ ಹಿಂದಿನಿಂದ ಭೀತಿಯೂ, ಭೀತಿಯ ಹಿಂದಿನಿಂದ ವೈರಾಗ್ಯವೂ ನನ್ನ ಮನಸ್ಸಿನ ಮೇಲೆ ಏರಿ ಬರತೊಡಗಿದವು! ನನ್ನ ಸಂಧ್ಯಾವಂದನೆಯ ಮಂತ್ರ-ಸ್ತೋತ್ರಗಳು ಒತ್ತಟ್ಟಿಗೇ ಉಳಿದವು. ಈ ಸಂಸಾರ ತಾಪದ ಸ್ತೋತ್ರ-ಮಂತ್ರಗಳೇನು ಕಡಿಮೆ ತರಗತಿಯವೇ? ನನ್ನನ್ನು ಸಂಪೂರ್ಣ ಫಜೀತಿಪಡಿಸಬೇಕೆಂದು ವಿಧಿಯ ಲಹರಿಯೇ ಆಗಿದ್ದರೆ, ಆ ಬಗ್ಗೆ ನಾನಾದರೂ ಮಾಡುವದೇನು?

ಈ ಬಗೆಯ ಆಲೋಚನೆಯಲ್ಲಿ ನಾನು ಅಂದಿನ ರಾತ್ರಿಯನ್ನು ಕಳೆದೆನು. ಮೋರಪ್ಪನ ಭೆಟ್ಟಿಯಾಯಿತೆಂದರೆ ಈ ವಿಷಯವು ವಿವರವಾಗಿ ತಿಳಿದೀತೆಂದು ಸುಮ್ಮನಾದೆನು. ನಿಜವಾಗಿ ಯೋಚಿಸಿದರೆ, ಆಗ ಚಿಂತೆಗೊಳಗಾಗುವ ಪ್ರಸಂಗವು ನನಗೇನೂ ಇರಲಿಲ್ಲ. ಚಂಪೆಯ ಲಗ್ನ ಮಾಡಲಿಕ್ಕೆ ಇನ್ನೂ ತುಸ ಅವಕಾಶವಿದ್ದಿತು. ಅದಲ್ಲದೆ ಅವಳನ್ನು ಇಂಥವನಿಗೇ ಕೊಡಬೇಕು, ಇಂಥವನಿಗೆ ಕೊಡಬಾರದೆಂಬ ಅಧಿಕಾರವು ನನ್ನದೇ ಆಗಿತ್ತು. ಅಂದಮೇಲೆ ನಾನೇಕೆ ಚಿಂತಿಸಬೇಕು? ಎಂದು ಒಮ್ಮೆ ಅನಿಸಿದರೆ, ಮತ್ತೊಮ್ಮೆ ಸಾವುಕಾರ ಭೀಮರಾಯನ ಸಾಲದ ಹೊರೆ ಹಾಗು ಮೋರಪ್ಪನ ಸ್ನೇಹ ಇವೇ ಅಡ್ಡ ಬರಹತ್ತಿದ್ದವು. ನಾನು ಬೆಂಗಳೂರಿಗೆ ಯಾರದಾದರೂ ಸ್ನೇಹ-ಲೋಭಗಳನ್ನು ಸಂಪಾದಿಸಿ, ಮುಂದಾಗಬೇಕೆಂದು ಬಂದಿದ್ದೆನು. ಇರಲಿ.

ಮೂರನೇ ದಿವಸ ಬೆಳಿಗ್ಗೆ ಮೋರಪ್ಪನು ಬಂದನು. ಆತನು ಬರುವಾಗ ಕೈಯಲ್ಲೊಂದು ಕಾಗದವನ್ನು ಹಿಡಕೊಂಡು ಬಂದನು. ನನ್ನನ್ನು ಕಂಡೊಡನೆಯೇ:

"ಗುರುಭಟ್ಟರೇ, ನನ್ನ ಕೆಲಸವಾಯಿತು! ಈ ಮೋರಪ್ಪನು ಪೂರ್ವಜನ್ಮದ ನಿಮ್ಮ ಸಾಲಗಾರನೇ ನಿಜ. ಇದು ನೋಡಿರಿ, ಈ ದಾನಪತ್ರವನ್ನು!" ಎಂದು ಹೇಳಿ, ಆ ಕಾಗದವನ್ನು ನನ್ನ ಕೈಗೆ ಕೊಟ್ಟು, ಮತ್ತೆ ಅವನೇ: "ಯಾಕೆ, ಹೇಗಿದೆ? ನೀವು ಭಾಗ್ಯವಂತರೇ ಅಹುದು" ಎಂದಂದು ಕುಳಿತನು.

ಆ ಕಾಗದವನ್ನು ತಕ್ಕೊಂಡು ನಾನು ಉಪನೇತ್ರ ಧರಿಸಿ ಓದಿ ನೋಡಲು, ಆ ದಾನಪತ್ರವು ನಿಜವಾಗಿಯೂ ನನ್ನ ಹೆಸರಿನದೇ ಆಗಿತ್ತು "ಅತ್ತೀಗಿ, ಏನಿರೀ ಅತ್ತಿಗೀ, ನಿಮ್ಮ ಯಜಮಾನರು ಬೆಂಗಳೂರಿಗೆ ಬಂದು ಒಂದು ಮನೆ ಹಾಗು ಒಂದು ಸಣ್ಣ ಹೊಲ ಇವುಗಳನ್ನು ಸಂಪಾದಿಸಿರುತ್ತಾರರೀ." ಎಂದು ಮೋರಪ್ಪನು ಹೇಳಲು, ಮೈ ತೊಳಕೊಂಡಿದ್ದ ನನ್ನ ಗೃಹಿಣಿಗೆ ಒಣ ಸೀರೆಯನ್ನುಟ್ಟು ಬರಬೇಕೆಂಬ ಅರಿವು ಕೂಡ ಉಳಿಯದಾಗಲು, ಅವಳು ಹಾಗೆಯೇ ತಪಗುಟ್ಟುತ್ತಿರುವ ಒದ್ದೆ ಬಟ್ಟೆಯಿಂದಲೇ ನಾವು ಕುಳಿತಲ್ಲಿಗೆ ಬಂದು, ಒಂದು ಕೈಯಿಂದ ಆ ಭಾರವಾದ ಕಳಚುವ ಬಟ್ಟೆಯನ್ನು ಜಗ್ಗಿ ಹಿಡಿಯುತ್ತ, ನಮ್ಮ ಕಡೆಗೆ ಬೆನ್ನು ಮಾಡಿ ನಿಂತು ಮೋರಪ್ಪನ ನುಡಿಯನ್ನು ಕೇಳ ಹತ್ತಿದಳು. ಆಗ ನಾನು ಅವಳ ಮೈ ಮೇಲೆ ಹೋದಂತೆ ಒದರಿ, 'ಹೋಗು; ಒಳಗೆ ಹೋಗು. ಇದೇನು ರೀತಿಯೇ-ನಡವಳಿಯೇ? ಕೇಳಿಕೊಳ್ಳಬೇಕಾಗಿದ್ದರೆ ಮಡಿಸೀರೆಯನ್ನಾದರೂ ಉಟ್ಟುಕೊಂಡು ಬಾ' ಎಂದು ಹೇಳಲು, ಉತ್ಸುಕಳಾಗಿದ್ದ ಅವಳ ಮನಸ್ಸು ಖತಿಗೊಂಡದ್ದರಿಂದ ಒಳಗೆ ಹೋದ ಅವಳು ತಿರುಗಿ ಬರಲೇ ಇಲ್ಲ!

ಬಳಿಕ ಮೋರಪ್ಪನು:—"ಗುರುಭಟ್ಟರೇ, ನಮ್ಮ ಯಜಮಾನನು ಪುಣ್ಯಪುರುಷನಾಗಿದ್ದಾನೆ. ಇದೆಲ್ಲ ಪ್ರಯತ್ನವು ಆತನದೇ. ಆತನು ನಿಮ್ಮನ್ನು ಎಷ್ಟು ಹೊಗಳಿದನೆನ್ನಲಿ? ಮತ್ತು ದಾನ ಕೊಡುವುದಾದರೆ ನಿಮಗೇ ಕೊಡಬೇಕೆಂದು ಆತನು ಎಷ್ಟು ಒತ್ತಾಯಪಡಿಸಿದನೆನ್ನಲಿ? ಅದನ್ನು ವಾಣಿಯಿಂದ ಹೇಳಲಿಕ್ಕೇ ಬರುವಂತಿಲ್ಲ."

ನಾನು:—ಮೋರಪ್ಪಾ, ಭೂದಾನ,--ಗೃಹದಾನಗಳನ್ನು ಸ್ವೀಕರಿಸುವದು ನನಗೆ ಹೇಗೆ-ಹೇಗೋ ಅನಿಸುತ್ತದೆ! ಇಲ್ಲಿ ನಿರುಪಾಯದಿಂದ ಈ ಸಂಸ್ಕಾರವು ನನಗೆ ಕಾರಣವಿಲ್ಲದೆ ಘಟಿಸುತ್ತದೆ.

ಮೋ:—ಹಾಗಾದರೆ ಬಿಟ್ಟುಬಿಡಿರಿ. ನನ್ನ ಒತ್ತಾಯವೆಲ್ಲಿದೆ? ೧೦-೧೫ ಅಂಕಣದ ಸುಂದರವಾದ ಮನೆ ಮತ್ತು ನಾಲ್ಕು ಎಕರೆಗಳ ಭತ್ತದ ಭೂಮಿಯೆಂದರೇನು ಸಾಮಾನ್ಯವೇ? ಈ ದಾನಪತ್ರವನ್ನು ನನ್ನ ಹೆಸರಿಗೆ ಮಾಡಿಸಿಕೊಳ್ಳಲಿಕ್ಕೆ ನನಗೆ ಬರುತ್ತಿದ್ದಿಲ್ಲವೇನು? ಆದರೆ ನಾನೇನು ಒಬ್ಬೊಂಟಿಗ! ಮಕ್ಕಳಿಲ್ಲ; ಮರಿಯಿಲ್ಲ. ನೀವು ಯೋಗ್ಯರಾದ ದಶಗ್ರಂಥೀ ಬ್ರಾಹ್ಮಣರು. ಕುಟುಂಬವತ್ಸಲರು. ಅಂತೆಯೇ ನಾನೀ ಪ್ರಯತ್ನ ಮಾಡಿದೆನು. ಇಲ್ಲದಿದ್ದರೆ ನನಗೀ ಉಸಾಬರಿಯೇತಕ್ಕೆ ಬೇಕಾಗಿತ್ತರೀ?

ಮೋರಪ್ಪನಿಗೇನು ಉತ್ತರ ಕೊಡಬೇಕೆಂಬದು ನನಗೆ ತಿಳಿಯಲಿಲ್ಲ. ಒತ್ತಟ್ಟಿಗೆ

ನಿನ್ನೆ ರಾತ್ರಿಯಲ್ಲುಂಟಾದ ಸಂಶಯ, ಪಾಪ-ಪುಣ್ಯಗಳ ಭೀತಿ; ಮತ್ತೊತ್ತಟ್ಟಿಗೆ ಆಶೆ, ಸಂಕಟಪ್ರದಪ್ರಸಂಗ ಮತ್ತು ಮನೆಯ ವರೆಗೆ ನಡೆಕೊಂಡು ಬಂದ ಲಕ್ಷ್ಮಿಯನ್ನು ತ್ಯಜಿಸುವ ಅಂಜಿಕೆ! ಅದರಿಂದ ಮಾಡುವದಾದರೂ ಏನು? ಎಂಬ ಯೋಚನೆಗೊಳಗಾದೆನು. ಕಡೆಗೆ ಹೌದು-ಇಲ್ಲವೆನ್ನುತ್ತ ಆ ದಾನಪತ್ರ ಸ್ವೀಕರಿಸುವದು ಗೊತ್ತಾಯಿತು. ಅಂದು ನೋರಪ್ಪನು ಮನೆಗೆ ಹೊರಟು ಹೋದ ಮೇಲೆ ನಾನು ನನ್ನ ಗೃಹಿಣಿಗೆ ಆ ಸಂಗತಿ ಹೇಳಹೋಗಲು, ಅವಳು ಅದನ್ನು ನೆಟ್ಟಗೆ ಕೇಳಿಕೊಳ್ಳಲೊಲ್ಲಳು. ಬೆಳಿಗ್ಗೆ ನಾನು ಹಾಗೆ ಅಂದುದುದಕ್ಕೆ ಅವಳಿಗೆ ಸಿಟ್ಟು ಬಂದಿತ್ತು. ಒಳಗೆ ನಿಂತುಕೊಂಡೇ ಅವಳು ನನ್ನ ಮಾತನ್ನೆಲ್ಲ ಕೇಳಿಕೊಳ್ಳುತ್ತಿದ್ದಳೆಂಬದು ನನಗೆ ಗೊತ್ತಿತ್ತು; ಆದರೂ ತನ್ನ ಕೋಪವನ್ನು ನನಗೆ ತೋರಿಸಲೋಸುಗ ಅವಳು ನನ್ನ ಮಾತಿನ ಬಗ್ಗೆ ಯಾವ ಚೌಕಶಿಯನ್ನೂ ಮಾಡದೆ, ಸಿಟ್ಟಿನಿಂದಲೇ ಕುಳಿತಳು. ಆಗ ನಾನು ರೇಗಿಗೆದ್ದು:—"ಈ ಹೆಂಡಿರು-ಮಕ್ಕಳ ಸಲುವಾಗೆಂದೇ ಈ ದಾನ-ಧರ್ಮಗಳನ್ನು ಸ್ವೀಕರಿಸಿ ಪಾಪ-ಪುಣ್ಯಗಳಿಗೆ ನಾನು ಹೊಣೆಗಾರನಾಗುವದು! ಆದರೆ ಇವರಿಗೆ ಮಾತ್ರ ನನ್ನ ಆವಶ್ಯಕತೆಯೇ ಅನಿಸಬಾರದೆಂಬದು ಎಷ್ಟು ಚಮತ್ಕಾರವಿದೆ ನೋಡಿರಿ! ನನ್ನೊಡನೆ ಈ ಪ್ರಪಂಚದೊಳಗಿನದೇನು ಬರುವಂತಿದೆ? ಎಲ್ಲವೂ ಇಲ್ಲಿಯೇ ಉಳಿಯುವದು!" ಎಂದೆನ್ನಲು, ನನ್ನ ಗೃಹಿಣಿಯು ಕೂಡಲೆ ತನ್ನ ಕೋಪವನ್ನು ತೊರೆದು, ಅಳ್ಳಿಳ್ಳಿ-ಬಳ್ಳಿಳ್ಳಿ ಮಾಡಹತ್ತಿದಳು.

"ಒಳ್ಳೇದಾಯಿತು. ಇಲ್ಲಿ ಇರಲಿಕ್ಕೆ ಸ್ವಂತದ ಮನೆಯಾದರೂ ಆಯಿತು. ಬೇಡಪ್ಪಾ ಬೇಡ; ಈ ಬಾಡಿಗೆ ಮನೆಯಲ್ಲಿರುವವರ ಬಾಳ್ವೆ ಬೇಡ. ಇವುಗಳಿಗಿಂತಲೂ ಧರ್ಮಶಾಲೆಯೇ ವಿಹಿತವು! ಇಲ್ಲಿ ಕಸ ಚೆಲ್ಲಬೇಡಿರಿ, ಅಲ್ಲಿ ಮೊಳೆಯನ್ನೇ ಹೊಡೆಯ ಬೇಡಿರಿ. ಇತ್ತಿಂದ ಹಾದಾಡಬೇಡಿರಿ; ಅತ್ತಕಡೆಗೇಕೆ ಅಡ್ಡಾಡುತ್ತೀರಿ? ಹೀಗೆ ಈ ಮನೆ ಮಾಲಕರ ಕಾಟವನ್ನು ಸಹಿಸುವದಾದರೂ ಎಷ್ಟು ಹಾಗು ಎಲ್ಲಿಯವರೆಗೆ!" ಮುಂತಾದ ಹಲವು ಕಟಕಟೆಗಳು ನನ್ನ ಗೃಹಿಣಿಯ ಬಾಯಿಂದ ಹೊರಡಹತ್ತಿದವು. ಅವುಗಳನ್ನು ಮುಗಿಸುವದಕ್ಕಾಗಿ ನಾನು "ಏನೇ, ಮೋರಪ್ಪನ ಯಜಮಾನನು ಒಳ್ಳೇ ದೊಡ್ಡ ಮನುಷ್ಯನೆಂದು ಕಾಣುತ್ತದೆ. ಆತನ ಉಪಕಾರಗಳಂತೂ ನಮ್ಮ ಮೇಲೆ ಹೆಚ್ಚಾಗಿ ಆಗಲಾರಂಭಿಸಿದವು. ನಾವೇನು ಭಟ-ಭಿಕ್ಷುಕರು! ನಮಗೆ ಯಾರು ಏನು ಕೊಟ್ಟರೂ, ಯಾರು ಎಷ್ಟು ಉಪಕಾರ ಮಾಡಿದರೂ ಆ ಬಗ್ಗೆ ನಮಗೆ ಕೌತುಕವೇ ಎನಿಸುವದಿಲ್ಲ; ಮತ್ತು ಅವು ಅವರ ಉಪಕಾರಗಳಲ್ಲವೆಂದೇ ನಾವು ತಿಳಿಯುತ್ತಿರುತ್ತೇವೆ. ಯಾಕಂದರೆ, ಅದು ಹೇಳಿ ಕೇಳಿ ಧರ್ಮದ ಕೆಲಸವು; ಮತ್ತು ಆ ಧರ್ಮದ ಪ್ರತಿಫಲವು ಅವರಿಗೆ ಬೇರೆ ಕಡೆಯಿಂದ-ದೇವರಿಂದ-ದೊರೆಯತಕ್ಕದ್ದೇ ಇರುತ್ತದೆ; ಆದರೆ ಈ ದಾನದ ಕೆಲಸದಲ್ಲಿ ಆ ಸಾವುಕಾರ ಭೀಮರಾಯರ ಮತಲಬವೇನಾದರೂ ಇರಲಿಕ್ಕಿಲ್ಲವಷ್ಟೇ?

ನನ್ನ ಗೃಹಿಣಿ:—ಇದರಲ್ಲಿ ಮತಲಬವೇನಿರಬೇಕು? ತಮ್ಮ ಪ್ರಶ್ನೆಯೇ ಚಮ

ತ್ಕಾರದ್ದಾಗಿದೆ. ಆ ಗೃಹಸ್ಥನು ಎಂಥ ಧರ್ಮಿಷ್ಠನಿರುತ್ತಾನೆ? ಎಷ್ಟು ಶ್ರೀಮಂತನಿದ್ದಾನೆ? ಆತನ ರೀತಿ-ನಡಾವಳಿಯೇನು! ಮನೆಯಲ್ಲಿ ಸೇವ-ಸೇವಕರೆಷ್ಟು? ಹಾಗು ಮೇಲೆ ಧರ್ಮಮಾಡುವ ಬುದ್ಧಿ! ಅಂದ ಮೇಲೆ ಅಂಥ ಗೃಹಸ್ಥನ ಬಗ್ಗೆ ಏನಾದರೂ ಅನ್ನುವದೇನು?

ಇಷ್ಟರಲ್ಲಿ ಮೋರಪ್ಪನು ಅಲ್ಲಿಗೆ ಬಂದನು. ಅವನು ಈ ಮೊದಲೇ ಹೊರಗೆ ಬಂದು ನಿಂತು ನಮ್ಮ ಸಂಭಾಷಣವನ್ನೆಲ್ಲ ಕೇಳಿಕೊಂಡಿರುವಂತೆ ನನಗೆ ಭಾಸವಾಯಿತು. ಆತನು ಒಳಗೆ ಬಂದವನೇ 'ಅತ್ತಿಗಿಯವರೇ, ನಮ್ಮ ಯಜಮಾನರ ನಿಂದೆಯೇನು ನಡೆದಿತ್ತು? ನನಗಷ್ಟು ತಿಳಿಯಲಿ' ಎಂದನು.

ನನ್ನ ಗೃಹಿಣಿ:—ಛೇ, ಛೇ! ನಿಮ್ಮ ಯಜಮಾನರ ನಿಂದೆಯನ್ನಾರು ಮಾಡಿದರು? ಮತ್ತು ಆತನ ನಿಂದೆ ಮಾಡುವವರಾದರೂ ಯಾರು? ಸಾವಿರಕ್ಕೊಬ್ಬನಾದರೂ ಅಂಥ ಸದ್ಗೃಹಸ್ಥನು ಸಿಕ್ಕಾನೇನು?

"ಭಲೆ-ಭಲೆ! ಹಾಗಾದರೆ ಒಟ್ಟಿನಲ್ಲಿ ನಮ್ಮ ಭೀಮರಾಯರು ನಿಮ್ಮ ಮನಸ್ಸಿಗೆ ಬಂದರೆನ್ನಬೇಕು! ಅಂದಮೇಲೆ ನೀವು ಅವರಿಗೆ ನಿಮ್ಮ ಚಂಪೆಯನ್ನು ಕೊಟ್ಟುಬಿಡಿರಿ. ಅವರು ಅವಳನ್ನು ಒಳ್ಳೇ ಸಂತೋಷದಿಂದ ವರಿಸುವರು." ಹೀಗೆಂದು ತುಸ ನಗೆಚಾಟಿಗೆಯಿಂದಲೂ ತುಸ ಮಾರ್ಮಿಕವಾಗಿಯೂ ಮೋರಪ್ಪನು ನುಡಿದನು. ಅದು ಕೇವಲ ಚೇಷ್ಟೆಯ ಮಾತೇ ಎಂದು, ತಿಳಿದು ಅವಳು:—"ಇದಕ್ಕೆ ನನ್ನ ಒಪ್ಪಿಗೆ! ಇಂಥ ಅಳಿಯನು ನಮ್ಮಂಥ ಬಡವರಿಗೆ ಲಭಿಸುವದಾದರೂ ಹೇಗೆ?' ಎಂದೆನ್ನಲು, ಮೋರಪ್ಪನಿಗೆ ಅವಳ ನುಡಿಗಳು ಸಟಿಯೆಂದು ತೋರಿದವು. ಯಾವುದೊಂದು ಜೀನಸಿನ ಸಲುವಾಗಿ ಮನುಷ್ಯನು ತೀರ ಲೋಲುಪನಾದನೆಂದರೆ, ಆತನಿಗೆ ಸಟೆ-ದಿಟಗಳೇ ತಿಳಿಯುವದಿಲ್ಲ. ಅದರಂತೆಯೇ ಆಗ ಮೋರಪ್ಪನ ಅವಸ್ಥೆಯಾಯಿತು; ಆದರೆ ನನ್ನ ಗೃಹಿಣಿಯ ನುಡಿಗಳನ್ನು ಕೇಳಿ ನಾನು ಮಾತ್ರ ಮನದಲ್ಲಿ ಬೆದರಿದೆನು. ನಾನು ಯಾವುದಕ್ಕೆ ಇದು ವರೆಗೆ ಅಂಜುತ್ತಿದ್ದೆನೋ, ಅದೇ ಮಾತು ಇಂದು ಹೊರಹೊರಟಿತ್ತು. ಮೋರಪ್ಪನ ಯಜಮಾನನು ಶ್ರೀಮಂತನೇನೋ ಅಹುದು; ಮತ್ತು ಸದ್ಗುಣಿಯೂ ಸಮಂಜಸನೂ ಆಗಿರಬಹುದು; ಆತನ ಮನೆತನವೂ ಪ್ರಖ್ಯಾತವಾಗಿರಬಹುದು; ಆದರೆ ಆತನ ವಯಸ್ಸು ಐವತ್ತಕ್ಕೆ ಬಂದಿತ್ತು. ಅಂಥ ಮುಪ್ಪಿನವನಿಗೆ ನಮ್ಮ ೧೦ ವರ್ಷದ ಚಂಪೆಯನ್ನು ಧಾರೆಯೆರೆಯುವದೇ? ಆ ಬಗ್ಗೆ ನಾನು ಮನಸ್ಸಿನಲ್ಲಿ ಹೆಚ್ಚಾಗಿ ಯೋಚಿಸಿ, ಕಡೆಗೆ: "ಮೋರಪ್ಪಾ ನಮ್ಮ ಚಂಪೆಯನ್ನು ಭೀಮರಾಯರಿಗೆ ಕೊಡಬೇಕೆಂಬದು ನಿಮ್ಮ ಮನಸ್ಸಿನಲ್ಲಿದೆಯೇನು? ನಿಮ್ಮ-ನಮ್ಮ ಮತಗಳು ಹೊಂದಿದರೆ, ಹಾಗೆ ಮಾಡಬಹುದೆಂದೇ ನಾನು ನಿಮಗೆ ಕೇಳುತ್ತಿರುವೆನು. ಈ ಬಗ್ಗೆ ನಿಮ್ಮ ಅಭಿಪ್ರಾಯವೇನು? ಸ್ಪಷ್ಟವಾಗಿ ತಿಳಿಸಿರಿ."

ನನ್ನ ಈ ಪ್ರಶ್ನೆಯೊಳಗಿನ ಇಂಗಿತವನ್ನು ತಿಳಕೊಳ್ಳುವಷ್ಟು ಜಾಣಾಕ್ಷತನವು ಮೋರಪ್ಪನಲ್ಲಿರಲಿಲ್ಲ, ಅಂತೆಯೇ ಆತನು. "ಹೋ, ಹೋ. ಅವಶ್ಯವಾಗಿ ಕೊಡ

ಬೇಕು. ನನಗಂತೂ ಈ ಸ್ಥಳವು ಬಹು ಚೆನ್ನಾಗಿ ತೋರುತ್ತದೆ; ಮತ್ತು ನಿಮಗಾದರೂ ಸಮ್ಮತವಾಗದಿರಲಿಕ್ಕೆ ಅಲ್ಲಿ ಯಾವ ನ್ಯೂನವಿದೆ? ವಯಸ್ಸಿನದೊಂದೇ ಪ್ರಶ್ನೆಯಲ್ಲವೆ? ಚಂಪೆಗೆ ಹತ್ತು ವರ್ಷ ಮಿಕ್ಕಿರಬಹುದು; ಭೀಮರಾಯರಿಗೆ ಹೆಚ್ಚೆಂದರೆ ೨೮-೩೦ ವರ್ಷಗಳಾಗಿದ್ದಾವು. ನಿಮ್ಮ ಚಂಪೆಯೇನು, ಆ ಶ್ರೀಮಂತರ ಮನೆಗೆ ಹೋದಳೆಂದರೆ ಹಾ, ಹಾ, ಅನ್ನುವಷ್ಟರಲ್ಲಿ ಬೆಳೆದು ಬಾಳೀ ಗಿಡವಾದಾಳು! ಅವಳು ಒಳ್ಳೇ ಬೆಳಗೆಯ ಹುಡುಗೆಯೇ ಆಗಿದ್ದಾಳೆ.''

ನಾನು:—ನೀನು ಹೇಳುವದೆಲ್ಲವೂ ನಿಜ; ಆದರೆ ವಧು-ವರರಲ್ಲಿಯ ವಯಸ್ಸಿನ ಅಂತರಕ್ಕೇನಾದರೂ ಮೇರೆಯಿರುವದಲ್ಲವೆ? ೩೦-೪೦ ವರ್ಷಗಳ ಅಂತರವೇ!

ಮೋ:—ಊಃ. ಆದರಲ್ಲೇನಿದೆ? ನೀವು ಅದನ್ನು ಮನಸ್ಸಿನಲ್ಲೇ ತರಬೇಡಿರಿ. ಅರವತ್ತು-ಎಪ್ಪತ್ತು ವರ್ಷಗಳ ಮುದಿಹದ್ದುಗಳು ಕೂಡ ಚಿಕ್ಕ ಚಿಕ್ಕ ಬಾಲಿಕೆಯರೊಡನೆ ಲಗ್ನವಾಗಿ, ಮಕ್ಕಳು-ಮರಿಗಳನ್ನು ಹಡೆದು ಸಂಸಾರ ಮಾಡಿದ ಸಂಗತಿಗಳು ನಿಮಗೆ ಗೊತ್ತಿಲ್ಲವೇನು?

ಮೋರಪ್ಪನ ಆ ಮಾತುಗಳನ್ನು ಕೇಳಿ ನನಗೆ ಸಂತಾಪ ಬಂತು. ಆಗ ನಾನು ಸಿಟ್ಟಿನಿಂದ ಮೋರಪ್ಪನನ್ನು ಕುರಿತು:—''ಇಂಥ ಮುಪ್ಪಿನವನಿಗೆ ನನ್ನ ಮಗಳನ್ನು ಕೊಡಲಿಕ್ಕೆ ನಾನೇನು ಕಟುಕರವನಲ್ಲ. ಹೊಟ್ಟೆಯ ಮಗಳನ್ನು ಮುದುಕನ ಕೊರಳಿಗೆ ಕಟ್ಟುವವಕ್ಕಿಂತ, ಅವಳನ್ನು ಕೆರೆ-ಬಾವಿಗಳಲ್ಲಿ ದೂಡಿ ಬಿಡುವದೇ ವಿಹಿತವು! ಹುಡುಗಿಯೆಂದರೆ ಅದೇನು ಹಿತ್ತಲದೊಳಗಿನ ಸೊಪ್ಪಿನ ಪಲ್ಯವೋ, ಹಕ್ಕೆಯೊಳಗಿನ ದನ-ಕರುವೋ ಅಥವಾ ದಡ್ಡಿಯೊಳಗಿನ ಕುರಿಮರಿಯೋ? ನಿಮ್ಮ ತಿಳುವಳಿಕೆಯಾದರೂ ಏನಿದೆ? ಒಳ್ಳೇ ಮನೆತನ ನೋಡಬೇಕು, ಯೋಗ್ಯ ವಯಸ್ಸಿನ ವರನನ್ನು ಹುಡುಕಬೇಕು, ಅವಳಿಗೆ ಸುಖವಾಗಬೇಕೆಂದು ಪ್ರಯತ್ನಿಸಬೇಕು ಮುಂತಾದವುಗಳು ತಾಯಿ-ತಂದೆಗಳ ಕರ್ತವ್ಯಗಳು. ಅಂತಃಕರಣದ ಧರ್ಮವು ಅಂತಃಕರಣಕ್ಕೇ ಗೊತ್ತಾಗುವದು. ನಾವು ಬಿಟ್ಟಬೇಸರ ಮಾಡಿ ಕಣ್ಣುಮುಚ್ಚಿಕೊಂಡು ಅವಳನ್ನು ಎಂಥದಾದರೊಂದು ಸ್ಥಳಕ್ಕೆ ಕೊಟ್ಟರೆ, ಅವಳು ಇಡೀ ಜನ್ಮದ ವರೆಗೆ ನಮ್ಮ ಹೆಸರಿನಿಂದ ಕಲ್ಲು ಒಡೆಯುತ್ತ ಕೂಡ್ರಬೇಕು. ಇದು ಯಾರಿಗೆ ರುಚಿಸೀತು? ಹೆಣ್ಣುಮಗಳೆಂದರೆ, ತಂದೆ-ತಾಯಿಗಳನ್ನು ಎಲ್ಲ ಬಗೆಯಿಂದಲೂ ಅವಲಂಬಿಸಿರುವ ಬಡ ಗೋವು!"

ನಾನು ಇನ್ನೂ ಮಾತಾಡತಕ್ಕವನಿದ್ದೆನು; ಆದರೆ ಮೋರಪ್ಪನು ನನ್ನನ್ನು ತಡೆದು:'ಗುರುಭಟ್ಟರೇ, ನಾನು ಚಂಪೆಯನ್ನೇನು ಮಾರಿಕೊಳ್ಳಿರೆಂದೆನ್ನುತ್ತಿರುವೆನೇ, ನೀವಿಷ್ಟು ಸಿಟ್ಟಾಗಲಿಕ್ಕೆ? ವರದಕ್ಷಿಣೆ ಕೂಡ ಬೀಳದಂತಹ ಯೋಗ್ಯ ವರಮನೆತನವನ್ನು ನಾನು ನಿಮಗಾಗಿ ತೋರಿಸಿ ಕೊಟ್ಟೆನು. ಎಲ್ಲ ಅನುಕೂಲತೆಗಳೂ ಒತ್ತಟ್ಟಿಗೇ ದೊರೆಯುವ ಬಗೆ ಹೇಗೆ?'

ಆತನ ಈ ಉತ್ತರದಿಂದಂತೂ ನನ್ನ ಸಿಟ್ಟು ತಲೆಗೇರಿತು! ಕೋಪೋದ್ರೇಕವಾದುದರಿಂದ ನನ್ನ ಬಾಯಿಂದ ಮಾತುಗಳೇ ಹೊರಡದಾದವು. ತುಸ ಸಾವರಿಸಿ

ಕೊಂಡು ಬಳಿಕ ನಾನು:—"ತಮ್ಮ ಹೊಟ್ಟೆಯ ಮಕ್ಕಳನ್ನು ಮುದುಕರ ಕೊರಳಿಗೆ ಕಟ್ಟುವ ನೀಚರ ಹೆಸರು ಕೇಳಿದರೆ ಸಚ್ಚೈಲ ಸ್ನಾನ ಮಾಡಬೇಕು! ಹೆಣ್ಣು ಹುಡುಗೆಯರನ್ನು ಮಾರಿಕೊಳ್ಳುವವರಿಗೆ ತಾಯಿ-ತಂದೆಗಳೆನ್ನಬೇಕೇ? ಅವರು ಮಹಾ ನೀಚರು! ಹೊಲೆಯರು!! ಕಟುಕರು!!!" ಹೀಗೆ ನಮ್ಮ ಸಂಭಾಷಣ ನಡೆದಿರುವಾಗಲೇ ಮೋರಪ್ಪನನ್ನು ಯಾರೋ ಕರೆಯ ಬಂದರು. ಆದರಿಂದ ಆತನು ಹೊರಟು ಹೋದನು. ಆ ಬಳಿಕ ತುಸ ಹೊತ್ತಿನ ಮೇಲೆ ನನ್ನ ಸಿಟ್ಟು ಶಾಂತವಾಯಿತು; ಆದರೆ ಜೀವಕ್ಕೆ ಸೊಗಸೆನಿಸಲೊಲ್ಲದು. ಮನಸ್ಸಿನಲ್ಲಿ ನಾನಾಬಗೆಯ ಯೋಚನೆಗಳುಂಟಾಗಿ ಕುಣಿಯಹತ್ತಿದವು. ಮೋರಪ್ಪನ ಸ್ನೇಹ, ಆತನ ಯಜಮಾನನ ದೊಡ್ಡಿಸ್ತಿಕೆ ಮೊದಲಾದ ಪ್ರತಿಯೊಂದು ಸಂಗತಿಗಳಲ್ಲಿ ಮತಲಬವೇ ಇರುವದೆಂದು ಖಾತ್ರಿಯಾಗಿ, ಮತಲಬದ ಹೊರತು ಮನುಷ್ಯನಿಲ್ಲೆಂದು ಅನಿಸಿತು.

---

## ೭ ಪ್ರಸಂಗದಲ್ಲಿಯೇ ಮನುಷ್ಯನ ಪರೀಕ್ಷೆ.




ರಮ ಪ್ರಿಯನೂ, ಅತ್ಯಂತ ನಿರಪೇಕ್ಷನೂ, ನನ್ನ ಹಿತದ ಸಲುರಾಗಿ ಯಾವಾಗಲೂ ದಕ್ಷನಾಗಿರುವವನೂ ಎಂದು ಯಾವಾತನ ವಿಷಯವಾಗಿ ಇದುವರೆಗೆ ನನ್ನ ತಿಳುವಳಿಕೆಯಾಗಿತ್ತೋ, ಆ ನನ್ನ ಮಿತ್ರನಾದ ಮೋರಪ್ಪನು ಎಂಥ ಹೀನವೃತ್ತಿಯವನೆಂಬದನ್ನು ಹಾಗು ಇನ್ನು ಮೇಲೆ ಆತನನ್ನು ನಂಬುವದು ಸರ್ವಥಾ ಯೋಗ್ಯವಲ್ಲೆಂಬದನ್ನು ನಾನು ನನ್ನ ಮನಸ್ಸಿನಲ್ಲಿಯೇ ಯೋಚಿಸುತ್ತ ಕ್ಷಣ ಕಾಲ ಸುಮ್ಮನೆ ಕುಳಿತೆನು. ಮೋರಪ್ಪನು ಇದುವರೆಗೆ ನನ್ನ ಕಲ್ಯಾಣದ ಬಗ್ಗೆ ಇಷ್ಟೇಕೆ ತತ್ಪರನಾಗಿದ್ದನು? ಆ ನನ್ನ ಪ್ರೀತಿಯ ಗೆಳೆಯನಿಂದ ನನ್ನ ಮನಸ್ಸಿನ ತಕ್ಕಂತೆಯೇ ಆಚರಣೆಯೇಕೆ ಆಗುತ್ತಿತ್ತು? ಇವೆಲ್ಲವುಗಳ ಸಂಬಂಧವು ಈಗ ಚನ್ನಾಗಿ ಹೊಂದಿ ಬಿಟ್ಟಿತು. ನಾನು ನನ್ನ ಹೊಟ್ಟೆಯ ಮಗಳನ್ನು ಆ ಮುದುಕನಿಗೆ ಕೊಡಬೇಕೆಂದು ಮತ್ತು ಅದೂ, ಆತನ ಹತ್ತರ ವಿಪುಲವಾಗಿ ಹಣವಿದೆಯೆಂದೇ ಕೊಡಬೇಕೆಂದೂ ಮೋರಪ್ಪನ ಆಲೋಚನೆಯಿತ್ತು! ಆದರೆ ನಾನಾಗಲಿ ನನ್ನ ಗೃಹಿಣಿಯಾಗಲಿ ಇಂಥ ಮಾತಿಗೆ ಎಂದಿಗೂ ಒಪ್ಪುವವರಲ್ಲೆಂಬದು ಆ ಮೋರಪ್ಪನಿಗೆ ಹೇಗೆ ತಿಳಿಯಲಿಲ್ಲವೋ ಅದಾರು ಬಲ್ಲರು? ಮನುಷ್ಯನು ಒಮ್ಮೆ ಯಾವುದೊಂದು ಸಂಗತಿಯ ಬಗ್ಗೆ ಆತುರನಾದನೆಂದರೆ, ಆತನಲ್ಲಿಯ ಸಾರಾಸಾರ ವಿಚಾರವೂ ಶಕ್ಯಾ-ಶಕ್ಯತೆಗಳನ್ನು ತಿಳಿದುಕೊಳ್ಳುವ ಜಾಣತನವೂ ಗುಡುಚಾಪೆ ಕಟ್ಟಿಕೊಳ್ಳುತ್ತವೆಂದೇ ಅನ್ನಬೇಕಾಗುತ್ತದೆ. ಮೋರಪ್ಪನಿಗೆ ತನ್ನ ಯಜಮಾನನ ಪ್ರೀತಿ ಪಡೆಯುವದಿದ್ದೀತು; ಅಥವಾ ಆತನ ಮನೋರಥವನ್ನು ಈಡೇರಿಸಿ ಏನಾದರೊಂದು ಎತ್ತಿ ಹಾಕುವದಿದ್ದೀತು; ಆದರೆ ಅದಕ್ಕಾಗಿ ನಮ್ಮ ಪ್ರೀತಿಯ ಮಗಳಾದ ಚಂಪೆಯ ಇಡೀ ಜನ್ಮ

ವನ್ನು ನಾಶಗೊಳಿಸಲಿಕ್ಕೆ ಪ್ರವರ್ತವಾಗುವದೆಂದರೆ ಎಂಥ ಅಧಮತನವಿದು! ಮೇ-ಲಾಗಿ ಮೋರಪ್ಪನು ನನ್ನ ಜೀವದ ಗೆಳೆಯನು! ನನ್ನ ಬೆನ್ನಿಲೆ ಬಿದ್ದ ತಮ್ಮನೆಂದು ತಿಳಿದವನು! ಮಿತ್ರನೆಂದರೆ ಸ್ವಂತದ್ದೇ ಒಂದು ಅಂಶವೆಂಬ ತಿಳುವಳಿಕೆಯು ಎಲ್ಲೆಲ್ಲಿಯೂ ಗೋಚರವಾಗುತ್ತದೆ. ಈ ಪ್ರಪಂಚದಲ್ಲಿ ಮಿತ್ರವೆಂಬ ವಸ್ತುವಿರುವದೆಂದೇ ಎಷ್ಟೋ ಪ್ರಸಂಗಗಳಲ್ಲಿ ಸಮಾಧಾನವೆನಿಸುತ್ತದೆ. ಸುಖ-ದುಃಖದ ನಾಲ್ಕು ಮಾತುಗಳನ್ನು ಹೇಳಿ-ಕೇಳಿ, ಕುಗ್ಗಿದ ಉತ್ಸಾಹವನ್ನು ಎತ್ತಿ ಹಿಡಿಯುವವನು ಗೆಳೆಯನ ಹೊರತು ಬೇರೆ ಯಾರಿರುವರು? ತನ್ನೊಳಗೆ ಯಾವ ಅಲ್ಪ ಸ್ವಲ್ಪ ಸದ್ಗುಣಗಳಿರುವವೋ ಅವುಗಳ ಪರಿಮಳವನ್ನು ದಶದಿಶೆಗಳಲ್ಲಿ ಹರಡುವ ಕೆಲಸವು ಮಿತ್ರನಲ್ಲದೆ ಅನ್ಯರಾರಿಂದಾದೀತು? ಅಪ್ಪಿತಪ್ಪಿ ಯಾವುದೊಂದು ಅಚಾತುರ್ಯದ ಪ್ರಸಂಗ ಘಟಿಸಿದರೆ ಅದರ ಮೇಲೆ ಹೊದಿಕೆ ಹಾಕುವ ಕೆಲಸವು ಒಬ್ಬ ಮಿತ್ರನಿಂದಲೇ ಆಗುವದು; ಮತ್ತು ಸಂಕಟಕಾಲವು ಅಥವಾ ಅಡಚಣಿಯ ಪ್ರಸಂಗವು ಪ್ರಾಪ್ತವಾದರೆ ಆ ಕಾ-ಲಕ್ಕೆ ಧೈರ್ಯ ಕೊಡುವವನೂ, ನೆರವಾಗುವವನೂ ಮಿತ್ರನ ಹೊರತು ಅನ್ಯರಾರೂ ದೊರೆಯಲಾರರು. ಹೀಗೆ ಹಲವು ಕಾರಣಗಳ ಮೂಲಕ ನಾನು ಮಿತ್ರರ ಸಲುವಾಗಿ ಯಾವಾಗಲೂ ಆತುರವುಳ್ಳವನಾಗಿದ್ದೆನು. ಸುಖದ ಉಪಭೋಗ, ದುಃಖದ ನಿವಾರಣ, ಸದ್ಗುಣದ ಅಭಿಮಾನ, ದುರ್ಗುಣದ ನಿಷೇಧ, ಸಂಕಟ ಸಮಯದಲ್ಲಿಯ ಖಂಬೀರವಾದ ನೆರವು, ಲೌಕಿಕ ಪ್ರಾಪ್ತಿಯ ಆಧಾರ, ಹಿತದ ಜೊತೆಗಾರ, ಪುಣ್ಯಮಾರ್ಗ ಪ್ರವೃತ್ತಿಪರಕರ ಹೆಚ್ಚೇನು ಹೇಳುವದಿದೆ? ಪ್ರಸಂಗದೊಳಗಿನ ಎಲ್ಲ ತೊಂ-ದರೆಗಳನ್ನು ಭಾಸವಾಗಗೊಡದಂತಹ ಸಾಕ್ಷಾತ್ ದೈವತವೆಂದರೆ ಒಂದು ಮೈತ್ರಿಯೇ! ಈ ಬಗೆಯ ಅನುಭವವಿಲ್ಲದ ದುರ್ದೈವಿಗಳು ಈ ಲೋಕದಲ್ಲಿ ವಿರಳರು

ಶಾರೀರಿಕ ವ್ಯಂಗವು ಇಲ್ಲವೆ ಪಂಚೇಂದ್ರಿಯಗಳೊಳಗಿನ ಯಾವುದೊಂದು ಇಂದ್ರಿಯದ ನ್ಯೂನತೆಯು ಒಮ್ಮೊಮ್ಮೆ ಒಗ್ಗೀತು; ಆದರೆ ಸಂಸಾರದ ಕೊರತೆಯೆಂದರೆ, ಮಿತ್ರಾಭಾವವು ಕೇವಲ ದುಃಸಹವಾದುದೆಂದು ಪ್ರತಿಯೊಬ್ಬರೂ ಒಮ್ಮೆಲೆ ಒಪ್ಪಬಹುದು. ಅಂತೆಯೇ ನಾನು ಯಾವಾಗಲೂ ಮಿತ್ರರ ಸಲುವಾಗಿ ಆತುರನಾಗಿರುತ್ತಿದ್ದೆನು; ಆದರೆ ಆ ಗೆಳೆಯರ ಸಂಖ್ಯೆಯು ಯಾವಾಗ ಬೆಳೆಯತೊಡಗಿತೋ, ಮತ್ತು ಯಾವನೊಬ್ಬ ಸಾಧಾರಣ ಗುರ್ತಿನ ಮನುಷ್ಯನನ್ನು ಕೂಡ ನಾನು ಒಮ್ಮೆಲೆ ನನ್ನ ಮಿತ್ರರಲ್ಲಿ ಗಣಿಸಹತ್ತಿದೆನೋ, ಅದರಿಂದ ನನ್ನ ಚಿಂತೆಯು ಮಾತ್ರ ಹೆಚ್ಚತೊಡಗಿತು. ಇಂದು ಈ ಮಿತ್ರನು ಬೇನೆ ಬಿದ್ದನು; ನಾಳೆ ಆ ಮಿತ್ರನು ಸಂಕಟಕ್ಕೊಳಗಾದನು; ನಾಡದ್ದು ಆ ಮೂರನೆಯವನಿಗೆ ಹಾಗೆ ಹಾನಿಯಾಯಿತು ಮುಂತಾದ್ದನ್ನು ಕೇಳಿ ಕೇಳಿ ನನ್ನ ಚಿತ್ತಕ್ಕೆ ಸ್ವಾಸ್ಥ್ಯವುಳಿಯದಾಯಿತು. ಈ ಪ್ರಕಾರವು ಯಾವಾಗಲೂ ನಡೆದಷ್ಟೇ. ಕುಟುಂಬವು ವಿಸ್ತಾರವಾಗಹತ್ತಿತೆಂದರೆ ಒಬ್ಬ ಯಜಮಾನನಿಗೇ ಹೇಗೆ ತೊಂದರೆ ಹೆಚ್ಚಾಗುವವೋ, ಹಾಗೆಯೇ ಆಯಿತು. ಅದರಿಂದ ಇದ್ದ ಮಿತ್ರರಿಗಿಂತ ಹೆಚ್ಚು ಜನ ಗೆಳೆಯರನ್ನು ಕೂಡಿಸುವದು ಒಳಿತಲ್ಲವೆಂದು

ನನಗೆ ಎಂದೋ ಅನಿಸಿದ್ದಿತು; ಆದರೆ ನಾನು ಹೇಳಿ ಕೇಳಿ ಭಟಭಿಕ್ಷುಕನು! ಎಲ್ಲ ಬಗೆಯ ದಾರಿದ್ರ್ಯವು ನಮ್ಮಲ್ಲಿ ತುಂಬಿ ತುಳುಕುತ್ತಿರತಕ್ಕದ್ದು. ಮೇಲಾಗಿ ನನ್ನ ಗಣನೆಯು ಶಿಷ್ಟರೊಳಗೆ! ಆದರಿಂದ ಅಲ್ಪ ಸ್ವಲ್ಪ ಶ್ರೀಮಂತ, ತುಸ ಮುಂಜಾಗ್ರತೆಯುವ, ದೊಡ್ಡವರ ಮನೆಗೆ ಹೋಗಿ-ಬರುವ ವಹಿವಾಟಿಯುವ ಮುಂತಾದವರನ್ನು ಕಂಡ ಕೂಡಲೆ ಆತನನ್ನು ನನ್ನ ಮಿತ್ರರ ಹಾವಣಿಯಲ್ಲಿ ಕಟ್ಟಿಕೊಳ್ಳಲಿಕ್ಕೆ ನಾನು ಮೂರನೇ ಕಾಲಿನಿಂದ ತತ್ಪರನಾಗುತ್ತಿದ್ದೆನು! ಯಾವನೊಬ್ಬ ತಿಂದುಂಡು ಸುಖಿಯಾಗಿದ್ದ ಗೃಹಸ್ಥನನ್ನು ನೋಡಿದೊಡನೆ ಆತನನ್ನು ನನ್ನ ಸ್ನೇಹಿತ ವರ್ಗದಲ್ಲಿ ಸೇರಿಸಿಕೊಂಡು ಆತನ ಪ್ರೀತಿ ಸಂಪಾದಿಸಲಿಕ್ಕೆ ನಾನು ಸದಾ ಆತುರನಾಗಿರುತ್ತಿದ್ದೆನು. ನಾನು ಹೀಗೆ ಮಿತ್ರರನ್ನು ಸಂಪಾದಿಸುವದಕ್ಕೆ ಒಳ್ಳೇ ಆತುರನಾದುದರಿಂದಲೇ, ನನಗೆ ಸಿಗುವ ಬಹುಶಃ ಎಲ್ಲ ಮಿತ್ರರೂ ಒಂದಿಲ್ಲೊಂದು ಮತಲಬದವರೇ ಗಂಟುಬೀಳುತ್ತಿದ್ದರು. ಆದರಿಂದ ನನಗೆ ಎಷ್ಟೋ ಪ್ರಸಂಗಗಳಲ್ಲಿ ವೈರಾಗ್ಯವೂ ಉಂಟಾಗುತ್ತಿತ್ತು. ನಾನು ದಶಗ್ರಂಥೀ ಬ್ರಾಹ್ಮಣನು, ಸದ್ಧರ್ಮರತನು, ಆಚಾರಶೀಲನು ಇದೆಲ್ಲ ನಿಜ; ಆದರೆ ಅದರ ಪರಿವೆಯು ಆ ಶ್ರೀಮಂತ ಇಲ್ಲವೆ ಸುಖೀ ಮನುಷ್ಯರಿಗೇನು? ನಾನು ನನ್ನ ಕೈಲಾದ ಮಟ್ಟಿಗೆ ಹೆಣಗಿ ಅವರ ಸ್ನೇಹ ಗಳಿಸುತ್ತಿದ್ದೆನು; ಅವರ ಕೆಲಸಗಳು ಖರ್ಚು-ಕಂದಾಯಗಳಿಲ್ಲದೆ ಆಗಬೇಕೆಂದು ತಳಮಳಿಸುತ್ತಿದ್ದೆನು. ಇಂದಿಲ್ಲ, ಮುಂದೆ ಎಂದಾದರೂ ಅವರಿಂದ ನನ್ನ ಅಡಚಣಿಯ ಪ್ರಸಂಗಗಳಲ್ಲಿ ಸಹಾಯವಾದೀತೆಂದು ಬಗೆದು, ನಾನು ನನ್ನ ಸದ್ಯದ ಸಂಪಾದನೆಯ ಕಡೆಗೆ ದುರ್ಲಕ್ಷ್ಯ ಮಾಡುತ್ತಿದ್ದೆನು; ಆದರೆ ಪ್ರಸಂಗದಲ್ಲಿ ಅವರಿಂದ ನನಗೆ ಏನೂ ಉಪಯೋಗವಾಗುತ್ತಿರಲಿಲ್ಲ.

ಈ ಬಗೆಯಾಗಿ ಒಂದರ ಹಿಂದೊಂದರಂತೆ ಹಲವು ಅನುಭವಗಳು ಬಂದ ಬಳಿಕ ಮಿತ್ರರನ್ನು ಸಂಪಾದಿಸುವ ವಿಷಯದ ನನ್ನ ಆತುರತೆಯು ಬಹುಮಟ್ಟಿಗೆ ಕಡಿಮೆಯಾಯಿತು; ಆದರೂ ಹುಟ್ಟಸ್ವಭಾವವು ಹುಗಿದರೂ ಹೋಗುವದಿಲ್ಲೆಂಬ ಮಾತು ಸುಳ್ಳಲ್ಲ. ಸರ್ವಪುರಿಯನ್ನು ಬಿಟ್ಟು ಬೆಂಗಳೂರಿಗೆ ಬಂದ ಮೇಲೆ ಇಲ್ಲಿ ಹೇಳಿಕೊಳ್ಳುವಂತಹ ಮಿತ್ರರು ನನಗೆ ಲಭಿಸಲಿಲ್ಲೆಂಬದು ನಿಜ; ಆದರೆ ನಮ್ಮ ಮೋರಪ್ಪನೆಂದರೆ ನನಗೊಬ್ಬ ಪರಬ್ರಹ್ಮನೇ ಆಗಿ ತೋರುತ್ತಿದ್ದನು! ಮೋರಪ್ಪನು ಶ್ರೀಮಂತನಿದ್ದಿಲ್ಲ; ಇಲ್ಲವೆ ಹೇಳಿಕೊಳ್ಳುವಂತಹ ಮೇಲ್ತರಗತಿಯುವನೂ ಆಗಿರಲಿಲ್ಲ; ವಿದ್ಯೆ, ಕೀರ್ತಿ, ದ್ರವ್ಯ ಈ ತ್ರಯಿಗಳಲ್ಲಿ ಯಾತರ ಬಲವೂ ಮೋರಪ್ಪನಿಗಿರಲಿಲ್ಲ; ಮತ್ತು ಅಂಥವನ ಸ್ನೇಹದಿಂದ ನನಗೇನಾದರೂ ಪ್ರಾಪ್ತಿಯಿತ್ತೆಂಬದೂ ಇರಲಿಲ್ಲ. ಅದರಿಂದ ನನ್ನ-ಮೋರಪ್ಪನೊಳಗಿನ ಮೈತ್ರಿಯು ನಿಜವಾಗಿಯೂ ನಿರಪೇಕ್ಷವಾದುದೆಂದು ನನಗನಿಸುತ್ತಿತ್ತು. ನನ್ನ ಉಪಯೋಗವು ಆತನಿಗಿರಲಿಲ್ಲ. ಆತನ ಉಪಯೋಗವು ನನಗಿರಲಿಲ್ಲ. ಜೀವವನ್ನು ವಿಶ್ರಮಿಸಲಿಕ್ಕೊಂದು ಸ್ಥಳವಿರಬೇಕೆಂದು ನಾನು ಮೋರಪ್ಪನನ್ನು ನನ್ನ ಜೀವದ ಗೆಳೆಯನೆಂದು ತಿಳಿಯುತ್ತಿದ್ದೆನು; ಆದರೆ ಮೋರಪ್ಪನು ನನ್ನೊಡನೆ ಇಟ್ಟಿರುವ ಮೈತ್ರಿಯು ಮಾತ್ರ ಸಹೇತುಕವಾಗಿರಬಹುದು; ಅಂದರೆ ಇಂಥದೊಂದು ಕಾರ್ಯ

ಸಾಧಿಸುವದಕ್ಕೆಂದು ಆತನು ನನ್ನೊಡನೆ ವ್ಯೈತ್ರಿಯಿಟ್ಟಿರಬೇಕೆಂಬ ಕಲ್ಪನೆಯು ನನ್ನನ್ನೆಂದೂ ಸೋಂಕಿರಲಿಲ್ಲ; ಆದರೆ ಆ ಸಾಲ, ಆ ದಾನದ ಹೊಲ-ಮನೆ, ಭೀಮರಾಯರ ದೊಡ್ಡಿಸ್ತಿಕೆ ಮುಂತಾದವುಗಳ ಸಂಬಂಧವು ನಮ್ಮ ಚಂಪೆಯ ಲಗ್ನಕ್ಕೆ ತೊಡಕಿರುವವೆಂದು ನನ್ನ ಮನಸ್ಸಿಗೆ ತೋರಲು, ಆಗ ಮಾತ್ರ ಮೋರಪ್ಪನ ಕಪಟಜಾಲವೆಲ್ಲ ನನ್ನೆದುರಿಗೆ ಸ್ಪಷ್ಟವಾಗಿ ಬಂದು ನಿಂತಿತು. ಆದರಿಂದ ನಾನು ಈಗ ಒಳ್ಳೇ ಅಡಚಣಿಗೊಳಗಾದೆನೆಂದು ನನ್ನದು ನನಗೇ ನಿಚ್ಚಳವಾಗಿ ತೋರಹತ್ತಿತು. ಮೋರಪ್ಪನ ಆ ನಗೆಚೇಷ್ಟೆಯ ಭಾಷಣದಿಂದ ನನಗೆ ಸೊಗಸೆನಿಸಲಿಲ್ಲ. ವಿಧವಿಧದ ಕುತರ್ಕಗಳೆಂಬ ಬಿರುಗಾಳಿಯು ನನ್ನನ್ನು ಸುತ್ತುಗಟ್ಟಿ ಸಾಕುಸಾಕೆನಿಸಿಬಿಟ್ಟಿತು. ಅನ್ನವು ಸವಿಹತ್ತದಾಯಿತು. ನಿದ್ದೆಯು ಓಡಿಹೋಯಿತು. ದೇವರು-ದಿಂಡರುಗಳು ಒಗ್ಗದಾದವು. ಸಂಧ್ಯಾವಂದನೆಯು ಕೂಡ ಸಾಂಗವಾಗದಾಯಿತು!

ನನ್ನ ಚಿತ್ತವೃತ್ತಿಯೊಳಗಿನ ಈ ಚಾಂಚಲ್ಯವು ನನ್ನ ಗೃಹಿಣಿಗೆ ಕೂಡಲೆ ಗೋಚರವಾಯಿತು; ಯಾಕಂದರೆ, ಆಕೆಯ ಮೋರೆಯ ಮೇಲೂ ಒಳ್ಳೇ ಕಳೆಯಿರಲಿಲ್ಲ. ಅವಳ ಮಾತಿನೊಳಗಿನ ಉತ್ಸಾಹವೆಲ್ಲ ಲೋಪವಾಗಿ ಬಿಟ್ಟಿತ್ತು. ಪ್ರಪಂಚಕ್ಕೆ ಯಜಮಾನನು ಬೇಜಾರುಗೊಂಡನೆಂದರೆ, ಆತನು ತೀರ ಕೋಪಿಷ್ಠನಾಗುತ್ತಾನೆ. ಆತನ ಆ ರೇಗಿನ ಮೂಲಕ ಮನೆಯೊಳಗಿನ ಆನಂದವೆಲ್ಲ ಮಾಯವಾಗಿ, ಮನೆಯ ಮಾಲಕಳೂ ರೇಗಿಗೊಳಗಾಗುತ್ತಾಳೆ. ಆ ಮೇಲೆ ಚಿಕ್ಕಮಕ್ಕಳ ಅಚ್ಚೆ-ಗಿಚ್ಚೆಗಳು ಆನಂದದಾಯಕವಾಗಿ ಅನಿಸುವದಿಲ್ಲ. ಅವುಗಳ ಚಿಕ್ಕ ಪುಟ್ಟ ಚೇಷ್ಟೆಗಳೂ ಮಹಪರಾಧಗಳಾಗಿ, ಆ ಬಗ್ಗೆ ಅವುಗಳಿಗೆ ಭಯಂಕರವಾದ ಶಿಕ್ಷೆಯಾಗಹತ್ತುತ್ತದೆ. ಈ ಪ್ರಕಾರ ನಮ್ಮ ಮನೆಯಲ್ಲಿ ೪-೫ ದಿನಗಳು ನಡೆದಿರಲಿಕ್ಕೆ ಸಾಕಪ್ಪಾ ಸಾಕು, ಈ ಸಂಸಾರದ ತ್ರಾಸು ಸಾಕು, ಎಂದು ನನ್ನ ಗೃಹಿಣಿಗೆ ಅನಿಸಿದ್ದರೆ ಚೋಜಿಗವಲ್ಲ!

ನಾನು ಪಡಸಾಲೆಯ ಮೇಲೆ ಒಬ್ಬನೇ ಚಿಂತಾಕ್ರಾಂತನಾಗಿ ಕುಳಿತಿರುವದನ್ನು ಕಂಡು ನನ್ನ ಗೃಹಿಣಿಯು ತುಸ ಮುಂದಕ್ಕೆ ಬಂದು ತೀರ ಕನಿಕರದ ದನಿಯಿಂದ, ಆದರೆ ತುಸ ಗಟ್ಟಿಸಿ:—"ಈಗ ನಾಲ್ಕೈದು ದಿನಗಳಿಂದ ಹೀಗೆ ಒಂದೇಸವನೆ ಯಾವ ಯೋಚನೆಯುಂಟಾಗಿದೆಯೋ ತಿಳಿಯದು! ನಿನ್ನೆ ಊಟ ಚೆನ್ನಾಗಿ ಮಾಡಲಿಲ್ಲ ಮೊನ್ನೆಯಂತೂ ಉಪಾಹಾರವನ್ನು ಕೂಡ ತಕ್ಕೊಳ್ಳಲಿಲ್ಲ! ಮತ್ತು ಮಾತು ಇಲ್ಲ, ಕಥೆಯಿಲ್ಲ. ಹುಡುಗರೊಡನೆ ನಗೆದಾಟವಿಲ್ಲ, ಕೆಲಿದಾಟವಿಲ್ಲ. ಒಂದೇಸವನೆ ಹೀಗೆ ಉರಿಮೋರೆಯಿಂದ ಹುಬ್ಬು ಗಂಟಿಕ್ಕಿಕೊಂಡು ಏಕೆ ಕೂಡ್ರುವದೋ ಏನೋ ತಿಳಿಯದು! ಇಂಥ ಚಿಂತೆಯಾದರೂ ಯಾವದದು?...." ಹೀಗೆ ಅವಳು ನುಡಿಯುತ್ತಿರಲಿಕ್ಕೆ ಅವಳನ್ನು ಮುಂದೆ ಮಾತನಾಡಗೊಡದೆ, ನಾನು:-ಛೇ, ಚಿಂತೆಯೇತರದು? ಚಿಂತೆಯಿಲ್ಲ, ಏನೂ ಇಲ್ಲ; ಮತ್ತು ಚಿಂತೆ ಮಾಡಿಯಾದರೂ ಆಗುವದೇನು? ಭೋಕ್ತೃತ್ವವನ್ನು ಭೋಗಿಸಲೇಬೇಕು; ಅದು ಬೇರೆ ಯಾರಿಗೂ ಬಿಟ್ಟದ್ದಲ್ಲವಷ್ಟೇ? ಎಂದೆನಲು, ಅವಳು: "ಅಂದರೆ? ಇದರ ಅರ್ಥವಾದರೂ ಏನು? ಮತ್ತು ಈಗ ಚಿಂತೆಯಾದರೂ

ಏತರದಿದೆ?" ಎಂದು ಪ್ರಶ್ನೆಮಾಡಿದಳು "ಹೂಂ! ನಿನ್ನದೇನು, ಎಲ್ಲವೂ ಸುರಳೀತವಿದೆ; ಅದರಿಂದ ನಿನಗೆ ಹೇಳಿದರೂ ನನ್ನ ಚಿಂತೆ ಬೇರೆ ಕಡಿಮೆಯಾಗುವಂತಿಲ್ಲ. ನಾನೊಬ್ಬನು ಚಿಂತೆಯಲ್ಲಿ ಮಗ್ನವಾಗಿರುವದಷ್ಟು ಸಾಕು. ನಿನಗೆ ತಿಳಿಸಿ ಮಾಡುವದೇನು? ನಿನ್ನಮಟ್ಟಿಗೆ ನೀನಾದರೂ ಸುಖವಾಗಿರು!"

ನನ್ನ ಈ ಮಾತಿನಿಂದ ಅವಳು ಮತ್ತಿಷ್ಟು ಗಾಬರಿಗೊಂಡಳು. ನನ್ನನ್ನು ಮತ್ತೆ ಯಾವದೋ ಹೊಸ ಸಂಕಟವು ಗ್ರಸ್ತಗೊಳಿಸಿರುವದೆಂದು ಅವಳಿಗನಿಸಿತು. ಆಗ ಅವಳು ಮಾಡಿದ ಚಮತ್ಕಾರದ ಮುಖಚರ್ಯೆಯನ್ನು ಕಂಡು ನನಗೊಳ್ಳೇ ಮೋಜೆನಿಸಿತು. 'ಮನವು ಬಗೆಯುವದನ್ನು ವೈರಿಯೂ ಬಗೆಯಲಾರನೆ'ಂಬ ನಾಣ್ಣುಡಿಯಂತೆ ಆಗ ಆಕೆಯ ಮನಸ್ಸು ಇಲ್ಲದ ಹಲವು ಸಂಕಟಗಳ ವಿವೇಚನದಲ್ಲಿ ತೊಡಗಿತು! ಮತ್ತು ಆ ಕಾಲ್ಪನಿಕ ಸಂಕಟಗಳಿಂದ ಆಕೆಯು ಮತ್ತಿಷ್ಟು ಬೆದರಿದಂತೆ ಕಂಡಳು. ಅವಳು ಬೆವರಿನಿಂದ ತೊಯ್ದು ತೊಪ್ಪಡೆಯಾದಳು! ತುಸ ಮೋಜು ಮಾಡಬೇಕೆಂದು ಆಗ ನನಗನಿಸಿದ್ದರಿಂದ, ನನ್ನ ಮನಸ್ಸಿನೊಳಗಿನ ಚಿಂತೆಯು ಸ್ವಲ್ಪ ಓರೆಗಾಯಿತು. ಬಳಿಕ ನಾನು ತುಸ ಗಟ್ಟಿಯಾಗಿ ಕಡ ತಂದ ಆವೇಶದಿಂದ: "ನಿಮಗೇನು? ನಾವು ಚಿಂತೆಯಲ್ಲಿ ಮುಳುಗಿರಲಿ ಇಲ್ಲವೆ ಸಂಕಟಕ್ಕೆ ತುತ್ತಾಗಿರಲಿ, ಆ ಬಗ್ಗೆ ನಿಮಗೇನಿಸಬೇಕಾಗಿದೆ? ನಾವು ನಿಮ್ಮಗಳ ಪೂರ್ವಜನ್ಮದ ಸಾಲಗಾರರಿರುತ್ತೇವೆ. ನಿಮ್ಮ ಸಲುವಾಗಿ ದುಡಿದು-ದುಡಿದು ನಿಮ್ಮ ಹಿಂದಿನ ಸಾಲವನ್ನೊಮ್ಮೆ ತೀರಿಸಿ ಋಣಮುಕ್ತರಾಗಬೇಕಾಗಿದೆ. ಹೆಂಡತಿಯೆಂದರೊಂದು ದೊಡ್ಡ ಭಯಂಕರ ಉಡವಾಗಿದ್ದಾಳೆ. ಬೆನ್ನಿಗೆ ಹತ್ತಿದ್ದ ಬ್ರಹ್ಮಕಪಾಲವೇ ಅವಳು! ಆ ಕಪಾಲವು ನಮ್ಮನ್ನು ಆನಂದದಲ್ಲಿ ಸುಮ್ಮನೆ ಕೂಡ್ರಗೊಟ್ಟೇತೇ"

ನಾನು ಇತ್ತ ಈ ನುಡಿಗಳನ್ನು ಒಳ್ಳೇ ಆವೇಶದಿಂದ ನುಡಿಯುತ್ತಿರಲು, ಅತ್ತ ಆಕೆಯ ಮುಖಚರ್ಯೆಯು ತೀರ ಕಕಾವಿಕ್ಕಿಯಾಗಹತ್ತಿತು ಅವಳು ಏನನ್ನೋ ಉತ್ತರ ಕೊಡಬೇಕೆಂದಿದ್ದಳು; ಆದರೆ ನಾನು ಸಂತಾಪದಿಂದ ತ್ರಸ್ತನಾಗಿದ್ದೆನಾದ್ದರಿಂದ ಈಗ ಅದನ್ನು ನುಡಿಯುವ ಸಮಯುವಲ್ಲೆಂದು ಯೋಚಿಸಿ, ಅವಳು ಸುಮ್ಮನೆ ಕೆಳಗೆ ನೋಡುತ್ತ ನಿಂತುಕೊಂಡಳು. ನನ್ನ ಮುಖದ ಕಡೆಗೆ ಮೋರೆ ಎತ್ತಿ ನೋಡುವ ಧೈರ್ಯ ಕೂಡ ಅವಳಿಗಾಗಲಿಲ್ಲ. ಅವಳ ಮನಸ್ಸಿನಲ್ಲಿ ಉಂಟಾದ ಹಲವು ಮನೋವೃತ್ತಿಗಳ ಗೊಂದಲವು ನನಗೆ ಆಕೆಯ ಮುಖಚರ್ಯೆಯ ಮೇಲೆ ಸ್ಪಷ್ಟವಾಗಿ ಕಾಣಿಸಹತ್ತಿತ್ತು. ಅದರಿಂದ ನನಗೊಂದು ಬಗೆಯ ಮನಾನಂದವು ಆಗ ಹತ್ತಿತು. ಆಗ ನನಗೆ ಹಾಗೆ ಆದದ್ದು ಯೋಗ್ಯವೇ ಆಗಿತ್ತು. ಯಾಕಂದರೆ, ಸರ್ವ ಪ್ರಕಾರದಿಂದ ಕಷ್ಟಮಯುವಾದ ಈ ಸಂಸಾರದಲ್ಲಿ ಇಂಥ ದೊಡ್ಡ ಗುಣದ ಹೆಂಡತಿ ಇಲ್ಲವೆ ಭಾವೀ ಸುಖಾಶೆಗಳ ಅಂಕುರವನ್ನು ಲಗುಬಗನೆ ಹುಟ್ಟಿಸುವ ಹುಡುಗರ ವರ್ತನ ಇವುಗಳೇ ಸುಖಸಮಾಧಾನದ ಶೆಲೆಗಳಾಗಿರುತ್ತವೆ.

ಹೆಂಡತಿಯ ಸುಖವಾಗಲಿ-ದುಃಖವಾಗಲಿ ಎಲ್ಲವೂ ಗಂಡನ ಸ್ವಭಾವವನ್ನವ

ಲಂಬಿಸಿರುತ್ತದೆ. ಗಂಡನು ಸುಖಿಯಾದರೆ ಹೆಂಡತಿಯು ಸುಖಪ್ರದಳು. ಗಂಡನು ದುಃಖಿಯಾದರೆ ಹೆಂಡತಿಯೂ ದುಃಖಿಯು. ಆದರಿಂದ ನನ್ನ ಗೃಹಿಣಿಯನ್ನು ನಾನು ಸುಮ್ಮಸುಮ್ಮನೆ ಕೆಲ ಕ್ಷಣಗಳ ವರೆಗಾದರೂ ಚಿಂತೆಯಲ್ಲೇಕೆ ಕೆಡವಬೇಕೆಂಬ ಯೋಚನೆಯು ನನ್ನಲ್ಲಿ ಹುಟ್ಟಲು, ನನ್ನ ಮನಸ್ಸು ನನ್ನನ್ನೇ ಕುರಿತು:—'ಸಂಕಟ-ಸಂಕಟವೆಂದರೆ ಅಂಥ ಯಾವ ಸಂಕಟವು ನಿನ್ನ ಮೇಲಿದೆ? ನಾಲ್ಕು ದುಡ್ಡಿನ ಸಾಲ ವಲ್ಲವೆ? ನೀನೇನು ಹೇಳಿ ಕೇಳಿ ಭಟ-ಭಿಕ್ಷುಕವೃತ್ತಿಯ ಬ್ರಾಹ್ಮಣನು! ಬೇಡು, ನಾಲ್ಕು ಮನೆಗಳಲ್ಲಿ ಭಿಕ್ಷೆ; ಹಾಗು ತೀರಿಸು ಸಾಲವನ್ನು. ಆದರಲ್ಲೇನಿದೆ?' ಎಂದು ಸೂಚಿಸಹತ್ತಲು, ನಾನು ನನ್ನ ಮೈಗಡರಲಿರುವ ಸಂಕಟವನ್ನು-ಸಂಕಟವೆಂತಹದು-ಸಾಧಾರಣ ಮಾತನ್ನು ತೂರಿ ಚಿಮ್ಮುವ ನಿಶ್ಚಯ ಮಾಡಿದೆನು. ಆದರಿಂದ ನನ್ನಲ್ಲಿದ್ದ ಈ ಪೂರ್ವದ ಉದಾಸೀನವೃತ್ತಿಯು ಮೋರೆ ತಪ್ಪಿಸಿ ಓಡಹತ್ತಿತು! ಬಳಿಕ ಹೊಸ ಹುರುಪಿನಿಂದ ನಾನು:—ಏನೇ, ಈ ದಿನ ಮನೆಯಲ್ಲಿ ಪಲ್ಯೆಯಿದೆಯೇ? ಇಲ್ಲವೆ ತರ ಬೇಕೆ ಯಾವುದೊಂದು ಹೊಸ ಪಲ್ಲೆಯನ್ನು? ಇಂದು ಎಲ್ಲಿಯೂ ಆಮಂತ್ರಣವಿದ್ದಂತಿಲ್ಲ ಆ ಹಾಗಲಕಾಯಿ ಪಲ್ಲೆಯನ್ನೇ ಮಾಡುವೆಯಲ್ಲವೆ?' ಎಂದೆನು. ನನ್ನ ಬಾಯಿಂದ ಹೊರಟ ಆ ಶಬ್ದಗಳನ್ನು ಕೇಳಿ ಅವಳಿಗೂ ಬಹು ಸಮಾಧಾನವೆನಿಸಿತು. ಆದರಿಂದ ಅವಳೂ: 'ಇದೆ. ಮನೆಯಲ್ಲಿ ಇಂದಿನ ಮಟ್ಟಿಗೆ ಪಲ್ಯೆಯಿದೆ. ನಾನಾದರೂ ಇಂದು ಆ ಹಾಗಲ ಕಾಯಿಯ ಪಲ್ಲೆಯನ್ನೇ ಮಾಡಬೇಕೆಂದಿದ್ದೆನು' ಎಂದು ಹೇಳಿ, ನನ್ನ ಎದುರಿಗಿಂದ ಹೊರಟು ಹೋಗಲಿಕ್ಕೆ ಏನಾದರೂ ನೆವಬೇಕಾಗಿತ್ತೆಂದು ಅಲ್ಲಿಗೆ ಬಂದಿದ್ದ ಬೆಕ್ಕನ್ನು 'ಹುಶ್ಯ-ಹುಶ್ಯ' ಎಂದು ಬೆದರಿಸುತ್ತ ಒಳಗೆ ನಡೆದಳು ಆಗಲೆ ನಾನು ಯಾವ ಚಿಂತೆಯಿಂದ ಕೊರಗುತ್ತಿದ್ದೆನು? ಈ ಪ್ರಪಂಚದ ಬಗ್ಗೆ ಬೇಸರಿಕೆ ಏಕೆ ಬಂದಿದೆ? ಎಂಬದನ್ನು ಅವಳು ಮುಂದೆ ಕೇಳಲೇ ಇಲ್ಲ. ಯಾಕಂದರೆ, ಹಾಗೆ ಕೇಳಿದರೆ, ವಿಸ್ಮರಣವಾಗುತ್ತ ನಡೆದಿರುವ ಚಿಂತೆ-ವೈರಾಗ್ಯಗಳ ನೆನಪನ್ನು ಮತ್ತೆ ನನಗೆ ಮಾಡಿಕೊಟ್ಟಂತಾದೀತೆಂದು ಆಕೆಯು ಭಾವಿಸಿಕೊಂಡಿರಬಹುದೆಂಬ ಹೇತುವನ್ನು ನಾನು ಆಗಲೇ ಕಂಡುಹಿಡಿದೆನು.

ನನ್ನ ಗೃಹಿಣಿಯು ಒಳಗೆ ಹೋಗಿ ತನ್ನ ಮನೆಗೆಲಸಕ್ಕೆ ತೊಡಗಿದಳು; ಆದರೆ ನನ್ನ ಮನಸ್ಸು ಮಾತ್ರ ಚರ್ವಿತಚರ್ವಣವನ್ನೇ ನಡೆಸಿತು. "ನಮ್ಮ ಸುಕುಮಾರ ಸುಂದರ ಚಂಪೆಯನ್ನು ಆ ಮುದುವನಿಗೆ ಕೊಡಬೇಕೇ? ಮೋರಪ್ಪನ ಏನು ಬುದ್ಧಿವಂತಿಕೆಯಿದು! ಒಂದು ವೇಳೆ ಕೊಡುವದಿಲ್ಲೆಂದು ಸ್ಪಷ್ಟವಾಗಿ ತಿಳಿಸಿದರೆ, ಮೋರಪ್ಪನೂ ಆತನ ಸಾವುಕಾರನೂ ನನ್ನ ಹಗೆಗಳಾಗುವರು; ಮತ್ತು ಚಂಪೆಯ ಲಗ್ನವು ಎಲ್ಲಿಯಾದರೂ ಯೋಗ್ಯ ಸ್ಥಳದಲ್ಲಿ ಕೂಡಿ ಬಂದರೆ, ಇವರು ಆ ಕಾರ್ಯಕ್ಕೆ ಸಹಾಯ ಮಾಡಲಾರರು. ಇಷ್ಟೇ ಇಲ್ಲ, ಅಲ್ಲಿ ಕೇರು ಕೂಡ ಬಡಿಯುವವರು!" ಎಂಬ ಯೋಚನೆಯು ನಡೆದಿರಲಿಕ್ಕೆ ಮೋರಪ್ಪನೇ ಅಲ್ಲಿಗೆ ಬಂದನು. ಅವನು ಕಣ್ಣಿಗೆ ಕಂಡ ಕೂಡಲೆ ನನ್ನಲ್ಲಿಯ ಸಂತಾಪವು ಜಾಗೃತವಾಯಿತು; ಆದರೆ ಅಲ್ಪ ವಿಚಾ

ರಾಂತ್ಯದಲ್ಲಿ ಹಾಗೆ ಸಂತಾಪಗೊಳ್ಳುವದು ತರವಲ್ಲೆಂದು ನನಗೆ ಅನಿಸಿತು. ಮೇಲಾಗಿ ನಾನು ಮೋರಪ್ಪನ ಹಂಗಿನಲ್ಲಿದ್ದವನು. ಅದೂ ದುಡ್ಡಿನಿಂದ. ಮೋರಪ್ಪನು ಸ್ವಂತದ ಇಪ್ಪತ್ತೈದು ರೂಪಾಯಿಗಳನ್ನು ನನ್ನಲ್ಲಿಟ್ಟಿದ್ದನು. ನಾನು ಅವುಗಳನ್ನು ಮನೆಯ ಖರ್ಚಿಗಾಗಿ ಬಳಿಸಿಕೊಂಡಿದ್ದೆನು. ಆದರಿಂದ ಆತನು ಅವುಗಳನ್ನು ಈಗಿಂದೀಗಲೇ ಕೊಡ ಹೇಳಿದರೆ? ಅಥವಾ ಕೊಟ್ಟೀ ಮುಂದೆ ಹೆಜ್ಜೆಯಿಡಿರೆಂದರೇನು ಮಾಡಬೇಕು? ಈ ಕಾರಣದಿಂದ ನಾನು ಸಿಟ್ಟಿಗೇಳುವದು ವಿಹಿತವಲ್ಲೆಂಬ ಯೋಚನೆ ಮಾಡಬೇಕಾಯಿತು. ಈ ನಿರ್ಧನತೆಯೂ, ಅಳತೆದಪ್ಪಿದ ಸಂಸಾರದ ಖರ್ಚು-ಕಂದಾಯಗಳೂ ಒಳ್ಳೊಳ್ಳೇ ಗಂಡಸರನ್ನು ಕೂಡ ಬಳೆಯಿಟ್ಟುಕೊಳ್ಳ ಹಚ್ಚುತ್ತವೆ! ಮತ್ತು ಈ ನಿರ್ಧನತೆಯ ಸಲುವಾಗಿ ನಾವು ಕಂಡ ಕಂಡವರ ಬಾಲ ಬಡಿಯುತ್ತ 'ಹೌದಪ್ಪಾ, ಹೌದ್ದೇವರೂ' ಎಂದೆನ್ನುವ ಪ್ರಸಂಗ ಬರುತ್ತದೆ. ದುಡ್ಡೆಂದರೆ ಲಕ್ಷ್ಮಿಯೇ ಅವಳು! ಅವಳು ಏನು ಮಾಡಬೇಕಾದ್ದನ್ನು ಮಾಡಲಿಕ್ಕೆ ಹಿಂದುಮುಂದೆ ನೋಡುವವಳೇ? ನಾನು ಈ ಬಗೆಯ ಮನೋವಿಚಾರಗಳನ್ನು ಬದಿಗಿರಿಸಿ, ಮೋರಪ್ಪನನ್ನು ಕುರಿತು: "ಏನು ಮೋರಪ್ಪಾ, ಮತ್ತೇನು? ನಾಲ್ಕು ದಿನಗಳಲ್ಲಿ ಸವಾರಿಯು ಇತ್ತ ಬಂದಿರಲಿಲ್ಲವಲ್ಲ?" ಎಂದು ಕೇಳಿದೆನು.

ನನ್ನ ಪ್ರಶ್ನೆಗೆ ಆತನು ಏನೇನೋ ನೆವ ಹೇಳಿದನು. ತಾನು ನನ್ನಲ್ಲಿಗೆ ಬಂದಾಗ ಈ ಪ್ರಶ್ನೆಯು ಸಹಜವಾಗಿಯೇ ಬರುವದೆಂದು ಆತನಿಗೆ ಮೊದಲೇ ಗೊತ್ತಿತ್ತು; ಅದರಿಂದಲೇ ಉತ್ತರವೇನು ಕೊಡಬೇಕೆಂಬದನ್ನು ಆತನು ಮೊದಲಿನಿಂದಲೇ ಸಿದ್ಧಪಡಿಸಿಟ್ಟುಕೊಂಡಿದ್ದನು. ಆಗ ನನ್ನ-ಆತನಲ್ಲಿ ಅತ್ತಿತ್ತಣದ ಎಷ್ಟೋ ಮಾತುಕಥೆಗಳಾದವು; ಆದರೆ ಅಂತಃಕರಣಪೂರ್ವಕವಾಗಿ ನಾನೂ ಮಾತಾಡಲಿಲ್ಲ; ಮತ್ತು ಆತನ ಭಾಷಣದಲ್ಲಿಯೂ ನಿತ್ಯದ ಸರಳತನವಿರಲಿಲ್ಲ. ಈ ಬಗೆಯ ಸಂಭಾಷಣದ ಪ್ರಸಂಗ ಬರುವದಕ್ಕಿಂತ ಮೂಕನಾಗಿರುವದೇ ಒಳಿತೆಂದು ನನಗನಿಸಿತು; ಆದರೆ ಮಾಡುವದೇನು? ಮನಸ್ಸಿನಲ್ಲೊಂದು ಇಟ್ಟುಕೊಂಡು, ಸಾಧಿಸುವದೇ ಬೇರೆ ಈ ರೀತಿಯ ಇಬ್ಬಗೆಯ ಹಿಕಮತಿನಿಂದ ಮಾತನಾಡುವದು ನಿಜವಾಗಿಯೂ ಬಹು ಕಠಿಣವಾದ ಕೆಲಸವು. ನಾನು ಭೋಳೇ ಭಾವಿಕನು. ನನಗೆ ಅದು ಸಾಧಿಸದಾಯಿತು; ಆದರೆ ನನ್ನ ಹಾಗು ಮೋರಪ್ಪನ ಅಂತಃಕರಣದ ಧರ್ಮಗಳು ಭಿನ್ನ ಭಿನ್ನವಾಗತೊಡಗಿದವೆಂಬದು ನಮ್ಮ ಮನೆಯೊಳಗಿನವರಾರಿಗೂ ಗೊತ್ತಾಗಿರಲಿಲ್ಲ.

ಅದೇ ಕಾಲಕ್ಕೆ ಒಳಗೆ ನಡುಮನೆಯಲ್ಲಿ ಚಂಪೆಯು ನನ್ನ ಗೃಹಿಣಿಯನ್ನು ಕುರಿತು: "ಅವ್ವಾ, ಪರಕಾರ ಉಟ್ಟುಕೊಳ್ಳಲಿಕ್ಕೆ ನನಗೀಗ ನಾಚಿಕೆಯೆನಿಸುತ್ತದೆ. ಅಪ್ಪನಿಗೆ ಒಂದು ಸೀರೆ ತಂದು ಕೊಡ ಹೇಳೇ. ಆ ಸೀರೆಯು ಕರಿಯ ಚಂದ್ರಕಾಳಿಯದಿರಬೇಕು; ಅದಕ್ಕೆ ಫರಾಸಪೇಟೆಯ ಅಂಚಿರಬೇಕು ನೋಡು." ಎಂದು ಒಂದೇ ಸವನೆ ಕಟಕಟಿ ಹಚ್ಚಿದ್ದಳು. ಅದು ನನಗೆ ಹೊರಗೆ ಪಡಸಾಲೆಯ ಮೇಲೆ ಚೆನ್ನಾಗಿ ಕೇಳಿಸುತ್ತಿತ್ತು. ಆಗ ಅವಳು.—"ಚಂಪೀ," ಹೊರಗೆ ಮೋರಪ್ಪನವರು ಬಂದಿದ್ದಾರೆ.

ಅವರ ಮುಂದೆ ಹೇಳು ಹೋಗು" ಎಂದು ಹೇಳಿದಳು. ಆ ಕೂಡಲೆ ಚಂಪೆಯು ಓಡುತ್ತೋಡುತ್ತ ಬಂದು ನನ್ನೆದುರಿಗೆ ಮಾತನಾಡುತ್ತ ಕುಳಿತಿದ್ದ ಮೋರಪ್ಪನ ಬೆನ್ನ ಮೇಲೆ ಬಿದ್ದು: 'ಕಕ್ಕಾ ಕಕ್ಕಾ' ಎಂದೆನ್ನ ಹತ್ತಿದಳು. ನನಗೆ ಈ ಮೊದಲೇ ಮೋರಪ್ಪನ ಬೇಜಾರ ಬಂದಿತ್ತು. ಅದರಿಂದ ಆತನೊಡನೆ ನಮ್ಮ ಚಂಪೆಯು ಸಲಿಗೆ ಮಾಡುವದು ನನಗೆ ಸೇರಲಿಲ್ಲ. ಆಗ ನಾನು ಚಂಪೆಯ ಮೇಲೆ ಕಣ್ಣುಕಿತ್ತಿ ಒದರಿ, "ಏನೇ ಚಂಪೀ, ಇದೇನು ಕಾಟಕೊಡುತ್ತಿರುವೆ? ನಡೆ ಅತ್ತ! ಆತನು ತುಸ ಸ್ವಸ್ಥವಾಗಿ ಕೂಡ್ರಲಿ" ಎಂದಂದ ಕೂಡಲೆ ಮೋರಪ್ಪನು ಹೆಚ್ಚು ಸಲಿಗೆಯಿಂದ ಅವಳನ್ನು ತಬ್ಬಿಕೊಂಡು: 'ತಂಗೀ, ಏನು ಬೇಕು ಹೇಳು' ಎಂದಂದು, ನನ್ನ ಕಡೆಗೆ ಹೊರಳಿ:— "ಗುರುಭಟ್ಟರೇ, ಮಕ್ಕಳಿಗೇನು ತಿಳಿಯುತ್ತದೆ? ನಾನೇನು ಇವರಿಗೆ ಪರಕೀಯನಾಗಿರುವೆನೇ? ಹುಡುಗರ ಈ ಕಾಟದಿಂದ ಎಂದಾದರೂ ಬೇಸರಿಕೆಯುಂಟಾಗುವದೆ? ನಾಳೆ ಇವಳು ಗಂಡನ ಮನೆಗೆ ಹೋದಳೆಂದರೆ, ಬಾ ಎಂದರೆ, ಹತ್ತರ ಕೂಡ ಬರಲಿಕ್ಕಿಲ್ಲ. ತಿಳಿಯಿತೇ?" ಎಂದು ಅಂದನು. ಆತನು ಲಗ್ನದ ಆ ಮಾತನ್ನು ಅನಾಯಾಸವಾಗಿ ತೆಗೆಯಲು ನನಗೆ ಆ ಹಿಂದಿನ ಸಂಗತಿಗಳೆಲ್ಲ ಮತ್ತೆ ಚೆನ್ನಾಗಿ ನೆನಪಾದವು. ಅದರಿಂದ ಆ ಮೋರಪ್ಪನ ಬಗ್ಗೆ ಮತ್ತಿಷ್ಟು ತಿರಸ್ಕಾರವುಂಟಾಯಿತು; ಆದರೆ ಅದನ್ನು ಮನಸ್ಸಿನಲ್ಲಿಯೇ ಹತ್ತೊತ್ತಿಕೊಳ್ಳುವ ಭಾಗ ಬಿತ್ತು; ಮತ್ತು ಕಪಟದ ಭಾಷಣವನಾಡಲಿಕ್ಕೆ ನಾನು ಉದ್ಯುಕ್ತನಾಗಬೇಕಾಯಿತು.

ಮಿತ್ರನೊಡನೆ ಕಪಟದ ಭಾಷಣವೇ! ಅದೂ ಕಾಸಿನ ಲಾಭವಿರದೆ ಮಾತಾಡಬೇಕೆ? ಲೋಕದ ರೀತಿಯೇ ಇದು! ಆಗ ನಾನು:—"ಮೋರಪ್ಪಾ, ಹೆಣ್ಣುಮಕ್ಕಳು ಹುಟ್ಟುವದೆಂದರೆ ಒಳ್ಳೇ ದುರ್ದೈವವೆನ್ನಬೇಕು. ಪೂರ್ವ ಜನ್ಮಗಳಲ್ಲಿ ನಾನು ಯಾವ ಪಾಪ ಮಾಡಿದ್ದೆನೋ ಯಾರು ಬಲ್ಲರು? ಅಂತೆಯೇ ನನಗೀ ಹೆಣ್ಣುಮಕ್ಕಳಾಗಿರುತ್ತವೆ. ಚಂಪೆಯ ಲಗ್ನದ ಬಗ್ಗೆ ನನಗೆ ಹಗಲಿರುಳೂ ಚಿಂತೆ ಹತ್ತಿದೆ. ಏನೂ ತೋಚಲೊಲ್ಲದು. ಹುಡುಗೆಯ ತಂದೆಯಾಗುವದೆಂದರೆ, ನಿಜವಾಗಿಯೂ ಅದೊಂದು ಯಮಧರ್ಮನ ಶಿಕ್ಷೆಯೇ ಆಗಿರುತ್ತದೆ!"

ಮೋ:—ಗುರುಭಟ್ಟರೇ, ನೀವು ಇದೇನನ್ನು ನುಡಿಯುತ್ತಿರುವಿರಿ? ಏನರೀ, ಹುಡುಗೆಯರೇ ಆಗದಿದ್ದರೆ, ನಿಮಗಾದರೂ ಹೆಂಡತಿಯು ಹೇಗೆ ಲಭಿಸುತ್ತಿದ್ದಳು? ಮತ್ತು ಈ ಪ್ರಪಂಚವಾದರೂ ಹೇಗಾಗುತ್ತಿತ್ತು? ಇದು ಲೋಕದ ರೀತಿಯೇ ಆಗಿದೆ. ಗಂಡುಹುಡುಗರು ಹಾಗು ಹೆಣ್ಣುಹುಡುಗರು ಹುಟ್ಟತಕ್ಕವರೇ. ದಿನಾಲು ಸೃಷ್ಟಿಸುತ್ತಿರುವ ಒಂದೂಕಾಲು ಲಕ್ಷ ಪ್ರಜೆಗಳಲ್ಲಿ ವಿಧಾತನು ಗಂಡಸಿಗೆ ಹೆಂಗಸನ್ನೂ ಹೆಂಗಸಿಗೆ ಗಂಡಸನ್ನೂ ನಿರ್ಮಿಸಬೇಡವೇ? ಬ್ರಹ್ಮದೇವನು ಲಗ್ನದ ಗಂಟು ಹೊಡೆಯುತ್ತಿರುವಾಗ ಹೆಣ್ಣುಮಕ್ಕಳು ಬೇಡೆಂದರೆ, ಅವನೇನು ಬರಿಯ ಗಂಡ-ಗಂಡಸರ ಲಗ್ನದ ಗಂಟುಗಳನ್ನೇ ಹೊಡೆಯಬೇಕೋ ಹೇಗೆ?

ನಾನು:—ಅದೇನಾದರೂ ಇರಲಿ. ಬೇರೆಯವರಿಗೆ ಆಗಲೊಲ್ಲರೇಕೆ-ಡಜನ್

ಗಟ್ಟಲೆ ಹೆಣ್ಣುಮಕ್ಕಳು! ಆದರೆ ನನಗೆ ಮಾತ್ರ ಅವರು ಬೇಡಪ್ಪಾ-ಬೇಡ. ಮನೆಯಲ್ಲಿ ಅಷ್ಟು ದಾರಿದ್ರ್ಯ; ಮತ್ತು ಅದರಲ್ಲಿ ಈ ಹುಡುಗೆಯರು! ಅಂದಮೇಲೆ ಸಾಡೇಸಾತೀ (೭|| ಶನಿ)ಯೇ ಅನ್ನಬೇಕು!

ಮೋ:—ಈ ನಿಮ್ಮ ಮಾತಿನಲ್ಲಿ ಅರ್ಥವೇ ಇಲ್ಲ. ಸಂಸಾರವೆಂದರೆ ಹೀಗೆಯೇ ಇರತಕ್ಕದ್ದು.

ನಾನು:—ಯಾವ ಮಗನಿಗೆ ಇಂಥ ಈ ಪ್ರಪಂಚ ಬೇಕಾಗಿದೆ? ಇದರಲ್ಲೇನು ಸುಖವಿದೆಯೇ? ಇದು ಅನುವಾಲ್ಯಗಳ ತವರುಮನೆಯು! ಮೋರಪ್ಪಾ, ನೀನೇ ನಿಜವಾದ ಸುಖೀ ಪುರುಷನಪ್ಪಾ!

ಮೋ:—ನಿಜವಿದೆ. ನಾನು ನಿಮಗೆ ಸುಖಿಯೆಂದು ಕಾಣುತ್ತೇನೆ; ನೀವು ನನಗೆ ಸುಖಿಯೆಂದು ತೋರುತ್ತೀರಿ. ಲೋಕದಲ್ಲಿ ಇದೇ ಕ್ರಮವಿದೆ.

ನಾನು:—ಏನಂದಿ? ನಾನು ಸುಖಿಯಲ್ಲವೆ? ಕೇವಲ ಸತ್ಯವಿದು!

ಮೋ:—ಅದರಲ್ಲೇನು ಸಂಶಯುವಿದೆಯೇ? ನಾಳೆ ನಿಮ್ಮ ಬಾಳನು ಸಂಪಾದಿಸಹತ್ತಿದನೆಂದರೆ ಕಂಡೀತು. ಈಗಿನ ನಾಲ್ಕು ದಿನಗಳು ಬಹುಳ ಪಕ್ಷದವಿರುತ್ತವೆ. ಇವು ಹಾ, ಹಾ ಅನ್ನುವಷ್ಟರಲ್ಲಿ ಗತಿಸುವವು. ಇದರಲ್ಲೇನಿದೆ? ಇನ್ನು ಚಂಪೆಯ ಲಗ್ನದ ಗಂಟನ್ನಂತೂ ಬ್ರಹ್ಮದೇವರು ಎಂದೋ ಹಾಕಿಬಿಟ್ಟಿರಬಹುದು. ನೀವು ಆ ಬಗ್ಗೆ ಅಷ್ಟೇಕೆ ಯೋಚಿಸುವುದು?

ನಾನು:—ಯೋಚಿಸುವುದೇಕೆನ್ನುವೆಯಾ? ನಾನು ಮಹಾ ಮೂರ್ಖನೆಂದು! ಚಿಂತೆ ಮಾಡದಿದ್ದರೆ ಮತ್ತೇನು ಮಾಡಲಿ? ಸುಮ್ಮನೆ ಮನೆಯಲ್ಲಿ ಕುಳಿತರೆ ಯೋಗ್ಯ ಅಳಿಯನು ದೊರಕುವನೇ? ಅಪ್ಪಾ, ಮೋರಪ್ಪಾ, "ನಹಿ ವಂಧ್ಯಾ ವಿಜಾನಾತಿ ಗುರ್ವೀಂ ಪ್ರಸವವೇದನಾಮ್" ಎಂಬದೇ ನಿಜವು.

ಮೋ:—ಅಹುದಹುದು; ಮತ್ತು ಚಿಂತೆ ಮಾಡಿದರೂ ಅಗುವದೇನು? ಏನಾದರೂ ಅಂದರೆ ತೀರಿತು. ಗುರುಭಟ್ಟರೇ, ದೇವರೇ ಎಲ್ಲರ ಬಗ್ಗೆ ಯೋಚಿಸತಕ್ಕವನು. ನಾನೂ ನೀವೂ ಚಿಂತಿಸಿ ಮಾಡುವುದೇನು?

ನಾ:—ಮೋರಪ್ಪ, ಈ ನಿಮ್ಮ ಮಾತಿನಲ್ಲಿ ಏನೂ ಅರ್ಥವಿಲ್ಲ. ಮಾತಾಡಲಿಕ್ಕೆ ಮಾತ್ರ ಸುಲಭವಿದೆ. ಈಶ್ವರೀ ಮಾಯೆಯನ್ನುತ್ತಾರಲ್ಲ, ಅದೇ ಇದು!

ಮೋ:—ನಾನೇನೂ ವೇದಾಂತಿಯಾಗಿಲ್ಲ. ನನಗೆ ನಿಮ್ಮಗಳ ಆ ಮಾಯಾ, ಬ್ರಹ್ಮ, ಪರಬ್ರಹ್ಮಗಳು ತಿಳಿಯುವದಿಲ್ಲ.

ಹೀಗೆ ಮೋರಪ್ಪನು ನುಡಿಯುತ್ತಿರುವಷ್ಟರಲ್ಲಿ ಇದುವರೆಗೆ ಒಳಗೆ ನಿಂತು ನಮ್ಮ ಸಂಭಾಷಣ ಕೇಳುತ್ತಿದ್ದ ನನ್ನ ಗೃಹಿಣಿಯು ಹೊರಗೆ ಬಂದು:—"ಆದರೆ ಮೋರಪ್ಪನವರೇ, ಇಷ್ಟು ಚಿಂತಿಸಿಯೂ ಮುಂದೇನು? ಹರಿಹರದಲ್ಲಿ ಮಾಲತಿಗೆ ಮನೆ ನೋಡಿದಂಥದೇ ಅಲ್ಲವೆ?" ಎಂದು ಕೇಳಲು, ಅವಳ ಪ್ರಶ್ನೆಯೊಳಗಿನ ಶ್ಲೇಷವು ನನಗೆ ತಿಳಿಯಿತು; ಆದರೆ ಇವಳನ್ನಾದರೂ ದುಷ್ಟ ಭಾಷಣದಿಂದ ಏಕೆ ನೊ-

ಯ್ಸಿಬೇಕೆಂದು ಆಗ ನಾನು ಯೋಚಿಸಿಕೊಂಡೆನು. ಈ ಮೊದಲಿನ ಆಕೆಯ ಮುಖ ಭಾವದಲ್ಲಿಯ ಖಿನ್ನತೆಯು ಈಗೀಗ ಅಳಿದಿರಲು, ಈಗ ಮತ್ತೆ ಅವಳನ್ನು ನೊಯ್ಯಿಸ ಬಾರದೆಂದು ನಾನು: "ಒಳ್ಳೇದು. ನಾನಿನ್ನು ಮುಂದೆ ಚಂಪೆಯ ಲಗ್ನದ ಬಗ್ಗೆ ಯೋಚನೆ ಮಾಡುವದಿಲ್ಲ. ಅದನ್ನು ನೀನೇ ನಿನ್ನಷ್ಟಕ್ಕೆ ಮಾಡು; ಮತ್ತು ನಿನ್ನ ಮನಸ್ಸಿಗೆ ಬಂದ ವರಮನೆತನವನ್ನು ಗೊತ್ತುಮಾಡೆಂದರೆ ತೀರಿತು" ಎಂದಂದೆನು. ಕೇವಲ ಸರಳವೆಂದು ತೋರುವ ನನ್ನ ಈ ಉತ್ತರವನ್ನು ಕೇಳಿ ಮೋರಪ್ಪನು ಮನದಲ್ಲಿ ಹಿಗ್ಗಿದನು! ಇನ್ನು ಇಲ್ಲಿ ತನ್ನ ಕುದುರೆಯನ್ನು ಮುಂದೂಡಲಿಕ್ಕೆ ಅನುಕೂಲವಾಯಿತೆಂದು ಆತನಿಗನಿಸಿತು. ಅದರಿಂದ ಆ ಸಂತೋಷದ ಭರದಲ್ಲಿ ಆತನು:— "ಏನೂ ಅಡ್ಡಿಯಿಲ್ಲ; ಅತ್ತಿಗೀ, ಹಾಗೇ ಆಗಲೆಂದೆನ್ನಿರಿ ನಾನು ಚಂಪೆಗೆ ಒಳ್ಳೇ ಯೋಗ್ಯ ವರಮನೆತನವನ್ನು ನೋಡಿ ಕೊಡುವೆನು. ಆ ಮೇಲೆ ಆ ಬಗ್ಗೆ ನನ್ನನ್ನು ಎಲ್ಲರೂ ಇಡೀ ಜನ್ಮದ ವರೆಗೆ ಹಾಡಿ ಹರಸುವಿರಂತೆ!"

ನನ್ನ ಗೃಹಿಣಿಯೇನು, ಹೇಳಿ ಕೇಳಿ ತಿಳಗೇಡಿ ಹೆಂಗಸು! ಆಕೆಗೆಲ್ಲಿಯಾದರೂ ಮನುಷ್ಯರ ಪರೀಕ್ಷೆಯಾಗುವದುಂಟೇ? ಅಥವಾ ಈ ಲೋಕದ ರೀತಿ-ನಡವಳಿಗಳ ಜ್ಞಾನವಾಗಬೇಕೇ? ನಮ್ಮ ಹೆಂಗಸರೆಂದರೆ, ಅವರು ಕೇವಲ ಮನೆಗೆಲಸಕ್ಕೇ ತಕ್ಕವರು! ಮನೆಯಲ್ಲಿ ಸಾಕಾಗುವಷ್ಟು ಸಾಮಾನುಗಳನ್ನು ತಂದು ಚಲ್ಲಿದೆವೆಂದರೆ, ಆ ಮೇಲೆ ಅವರು ಅವುಗಳನ್ನು ವ್ಯವಸ್ಥೆಯಿಂದ ಖರ್ಚು ಮಾಡಲಿಕ್ಕಷ್ಟು ನಿಷ್ಣಾತರು! ಮಕ್ಕಳು-ಮರಿಗಳ ರಿಪಿ-ರಿಪಿ ಸಹಿಸಬಲ್ಲರು; ಬೇನೆ-ಬೇಸರಿಕೆಗಳಲ್ಲಿ ಸೇವೆ-ಶುಶ್ರೂಷೆಗಳನ್ನು ಚೆನ್ನಾಗಿ ಮಾಡುವರು; ತಿನ್ನುಣ್ಣಲಿಕ್ಕೆ ಸಾಕಷ್ಟಿತ್ತೆಂದರೆ, ಮಂದಿಗೆ ಕೊಡಲಿಕ್ಕೂ ಉಣಿಸಲಿಕ್ಕೂ ವರದ ಹಸ್ತವೇ ಅವರದು! ಇದಕ್ಕಿಂತ ಹೆಚ್ಚಿಗೆ ಅವರೇನು ಮಾಡಬೇಕಾಗಿದೆ? ಈ ಮನುಷ್ಯನು ಇಂಥವನು, ಆತನ ಮಾತಿನ ಅರ್ಥವು ಹಾಗೆ, ಅಂಥವನ ಮಾತಿನಲ್ಲಿ ಎಷ್ಟು ನಂಬುಗೆಯಿಡಬೇಕು? ಮುಂತಾದ್ದು ಅವರಿಗೇನು ತಿಳಿಯುವದು ಮಣ್ಣು!

ಮೋರಪ್ಪನು 'ನಾನು ಚಂಪೆಗೆ ಯೋಗ್ಯ ಮನೆತನ ನೋಡಿ ಕೊಡುತ್ತೇನೆ' ನ್ನಲು, ನಮ್ಮ ಚಂಪೆಗೆ ತಕ್ಕ ವರನು ಸಿಕ್ಕನೆಂದೇ ಅವಳಿಗೆನಿಸಿತು. ಈ ಲೋಕವು ಎಷ್ಟು ವಿಚಿತ್ರವಿದೆಯೆಂಬದು ಆ ಮಡ್ಡ ಮನುಷ್ಯಳಿಗೇನು ಗೊತ್ತು? ಲೋಕದೊಳಗಿನ ಪ್ರತಿಯೊಂದು ವ್ಯಕ್ತಿಯು ಎಷ್ಟು ಕಾರ್ಯಸಾಧಕವೂ, ತಮ್ಮ ಮತಲಬವನ್ನು ಸಾಧಿಸುವುದಕ್ಕಾಗಿ ಯಾರ್‍ಯಾರು ಹೇಗೆ-ಹೇಗೆ ವೇಷ ತಾಳುವರೆಂಬುದೂ, ಏನೇನು ಸುಳ್ಳು ಹೇಳುವರೆಂಬದೂ ಮತ್ತು ಒಂದು ಸಣ್ಣ ಸಂಗತಿಯನ್ನು ಸಾಧಿಸುವದಕ್ಕಾದರೂ ಎಷ್ಟು ಅಡಚಣಿಗಳುಂಟಾಗುವವೆಂಬದೂ, ಎಂಥೆಂಥ ಸಂಕಟಗಳು ಆಕಸ್ಮಿಕವಾಗಿ ತಲೆಯೆತ್ತುವವೆಂಬದೂ ಪಾಪ! ಆ ಅಜ್ಞಳಿಗೆ ಹೇಗೆ ತಿಳಿಯಬೇಕು? ಅಂತೆಯೇ ನಾನು ಯೋಚಿಸಿದುದೇನಂದರೆ, ಕ್ಷಣಕಾಲ ಸುಮ್ಮನೆ ಕುಳಿತು ಏನೇನು ಮೋಜು ಆಗುತ್ತದೆಂಬದನ್ನು ನೋಡಬೇಕು. ಅದರಲ್ಲಿ ನನ್ನ ಗಂಟೇನು ಹೋಗ

ಬೇಕಾಗಿದೆ? ತಿಳಿದರೆ ಮೋರಪ್ಪನ ಸ್ವಭಾವವೂ ಮತಲಬವೂ ಇನ್ನಿಷ್ಟು ಸ್ಪಷ್ಟವಾಗಿ ತಿಳಿದೀತು, ಎಂದು ಯೋಚಿಸಿ, ನಾನು:—"ತಿಳಿಯಿತೇ, ನಾನಿನ್ನು ಚಂಪೆಯ ಲಗ್ನದ ಬಗ್ಗೆ ಎಳ್ಳಷ್ಟೂ ಉಸಾಬರಿ ಮಾಡುವವನಲ್ಲ. ಅದರ ಎಲ್ಲ ವ್ಯವಸ್ಥೆಯನ್ನು ನೀವೇ ನೋಡಿಕೊಳ್ಳಿರಿ. ನಿಮ್ಮ ಮನಸ್ಸಿಗೆ ಬಂದದ್ದೇ ವರಮನೆತನ, ನೀವು ಮಾಡಿದ್ದೇ ಖರ್ಚು ಮತ್ತು ಅತ್ತಣದೇ ರಕಮು!" ಎಂದು ಅನ್ನಲು, ನನ್ನ ಗೃಹಿಣಿಯು ತುಸ ಗಾಬರಿಗೊಂಡಳು; ಯಾಕಂದರೆ, ಖರ್ಚಿನ ಗೊಂದಲವೊಂದು ನಡುವೇ ಬಂದು ಬಿಟ್ಟಿತಲ್ಲ! ಅದು ಬೇಕು, ಇದು ಬೇಡ, ಹಾಗಿರಬೇಕು, ಹೀಗಿರಕೂಡದು; ಹಾಗೆ ಮಾಡಿರಿ, ಹೀಗೆ ಬೇಡ. ಹೀಗೆ ಎರಡನೆಯವರಿಗೆ ಆಯತ ಕುಳಿತು ಹೇಳುವದು ಎಷ್ಟು ಸುಲಭವೋ, ಸ್ವಂತದ ಮೇಲೆ ಜವಾಬುದಾರಿ ಹೊತ್ತುಕೊಳ್ಳುವದು ಅಷ್ಟೆಲ್ಲಿ ಸುಲಭ ವಿರುತ್ತದೆ? ಅದರಿಂದ ಅವಳು ಸ್ವಲ್ಪವೇ ಏಕೆ, ಹೆಚ್ಚಾಗಿ ಚಿಂತಾಗ್ರಸ್ತಳಾದಳು!

ಆದರೆ ಮೋರಪ್ಪನು ಆಗ ತನ್ನ ಕಾರ್ಯಸಾಧನೆಗೆ ತತ್ಪರನಾಗಿರಲಿಲ್ಲವೆ? ಈ ಬಂಗಾರದಂತಹ ಪ್ರಸಂಗವನ್ನು ಕಳಕೊಳ್ಳಲಿಕ್ಕೆ ಆತನೇನು ಹುಚ್ಚನೋ? ಆಗಿನ ಆತನ ಮುಖವನ್ನು ಕಂಡು 'ಈ ಮೋರಪ್ಪನು ಮತಲಬದವನೇನೋ ನಿಜ; ಆದರೆ ದಡ್ಡನು-ಭೋಳೇ ಮನುಷ್ಯನು!' ಎಂದು ನನಗನಿಸಿತು. ಯಾಕಂದರೆ, ನಾನು ಯಾವ ಆಟವನ್ನು ಹೂಡಿದ್ದೆನೋ, ಅದು ಆತನಿಗೆ ತಿಳಿಯಲಿಲ್ಲ. ಇನ್ನು ನಾನಾದರೂ ಆ ಕಪಟ ನಾಟಕವನ್ನು ನನ್ನ ಮಿತ್ರನಿಗೇಕೆ ತೋರಿಸಬೇಕು? ನಾನು ಅಂತಃಕರಣದಿಂದ ತೀರ ಶುದ್ಧನು. ನನಗೆ ಇಂಥ ಹೇಚು-ಪೇಚುಗಳು ಹುಟ್ಟಿದಂದಿನಿಂದ ಗೊತ್ತಿರಲಿಲ್ಲ; ಮತ್ತು ಬೇರೆಯವರು ಹಾಗೆ ನನ್ನೊಡನೆ ನಡೆಯುವದು ತಿಳಿದರೆ ಆ ಬಗ್ಗೆ ಅವರನ್ನು ಹೆಚ್ಚಾಗಿ ತಿರಸ್ಕರಿಸುತ್ತಿದ್ದೆನು. ಅದರಿಂದ ನಾನಾದರೂ ಹಾಗೇಕೆ ಮಾಡಬೇಕು? ಆದರೆ ಇನ್ನು ಆ ವಿಚಾರಗಳಿಂದ ಉಪಯೋಗವಾಗುವಂತಿರಲಿಲ್ಲ. ಯಾಕಂದರೆ ಆ ನಾಟಕವು ಒಮ್ಮೆ ರಂಗಸ್ಥಳಕ್ಕೆ ಬಂದು ಬಿಟ್ಟಿತ್ತು. ಆದರಿಂದ ಆಗ ಮುಂದೆ ಏನು ಮೋಜು ಆಗುವದೆಂಬದನ್ನು ನೋಡುವದಷ್ಟೇ ಉಳಿದಿತ್ತು.

ನಾನು ಆಡಿದ್ದೇ ವಿಹಿತವೆಂದು ನನ್ನ ಗೃಹಿಣಿಗನಿಸಿತು. ಹೆಂಗಸರಿಗೇನು, ಪ್ರತಿಯೊಂದು ಸಂಗತಿಯ ಬಗ್ಗೆಯೂ ಉತ್ಸುಕತೆಯು ಹೆಚ್ಚು. ಅದರಲ್ಲಿಯೂ ವಸ್ತ್ರ-ಒಡವೆ, ಲಗ್ನ-ಮುಹೂರ್ತ, ಊಟ-ಉಡಿಗೆ ಇಲ್ಲವೆ ಆರಿವೆ-ಅಂಚಡಿಗಳನ್ನು ಕೊಳ್ಳುವ ಕೆಲಸ ಇವುಗಳಲ್ಲಂತೂ ಅವರ ಉತಾವಳಿ ಸ್ವಭಾವವು ಮೇರೆದಪ್ಪುವದು! ಮತ್ತು ನಿಜವಾಗಿ ಹೇಳುವದಾದರೆ, ತಮ್ಮ ವೈಭವವನ್ನು ಹೇಗಾದರೂ ಮಾಡಿ ಜನರ ನಿದರ್ಶನಕ್ಕೆ ತಂದು ಕೊಡಬೇಕೆಂಬ ಏಕಮಾತ್ರವಾದ ಹೇತುವು ಅವರಲ್ಲಿ ಯಾವಾಗಲೂ ಇರುತ್ತದೆ. ಆ ಕೆಲಸವನ್ನು ಅವರು ಬಹು ಚೆನ್ನಾಗಿಯೂ ನಿರ್ವಹಿಸುತ್ತಾರೆ. ಹೆಂಗಸರಲ್ಲಿಯ ಪ್ರಾಮುಖ್ಯವಾದ ಒಂದು ವಿಚಾರವೆಂದರೆ, ತಮ್ಮ ದೊಡ್ಡಿಸ್ತಿಕೆಯನ್ನು ಜನರಿಗೆ ಯಾವಾಗೊಮ್ಮೆ ತೋರಿಸುವೆವೋ ಎಂಬದಿರುತ್ತದೆ. ಅದೊಂದು ದುರ್ಗುಣವು ಅವರಲ್ಲಿರದಿದ್ದರೆ, ಪ್ರಪಂಚದಲ್ಲಿ ಗಂಡಸರಿಗೆ ಈಗಿನಕಿಂತ ತುಸ ಹೆಚ್ಚು

ಸುಖವು ಲಭಿಸುತ್ತಿತ್ತು; ಮತ್ತು ಸಂಸಾರವು ಅವರಿಗೆ ಈಗಿನಷ್ಟು ತ್ರಾಸದಾಯಕವೂ ಆಗುತ್ತಿರಲಿಲ್ಲ. ಇರಲಿ.

ಆಗ ನನ್ನ ಗೃಹಿಣಿಯು:—ಮೋರಪ್ಪನವರೇ, ನಾಳಿನ ಮಾಘಮಾಸದಲ್ಲಿ ೪-೫ ಲಗ್ನದ ಮುಹೂರ್ತಗಳಿವೆಯಂತೆ. ಅದರೊಳಗಿನದೊಂದನ್ನು ಗೊತ್ತುಪಡಿಸಿರಿ.

ನಾನು ನಡುವೇ ಬಾಯಿ ಹಾಕಿ(ಯಾಕಂದರೆ ಆಗ ನನ್ನಿಂದ ಸುಮ್ಮನಿರಲಾಗದ್ದರಿಂದ):—ಏನೇ, ವರವು ಗೊತ್ತಾಯಿತೇನು? ಮತ್ತು ಖರ್ಚು-ಕಂದಾಯಗಳ ವ್ಯವಸ್ಥೆಯೇನು? ಅದೆಲ್ಲವನ್ನು ಬಿಟ್ಟು ಎಲ್ಲಕ್ಕೂ ಮೊದಲು ಮುಹೂರ್ತವನ್ನೇ ನೋಡಬೇಕೇ? ಎಂದೆನ್ನಲು,

ಮೋರಪ್ಪನು ನನ್ನನ್ನು ತುಸ ಬೆದರಿಸುತ್ತಲೇ (ಯಾಕಂದರೆ ಆತನಿಗೆ ಇನ್ನು ಈ ಬೇಟೆಯು ಬಲೆಗೆ ಬಿದ್ದುಬಿಟ್ಟಿತೆಂದು ತಿಳಿದದ್ದರಿಂದ ):-ಗುರುಭಟ್ಟರೇ, ನಿಮಗೆ ಅದೆಲ್ಲ ಉಸಾಬರಿಯೇಕೆ? ನಿಮ್ಮದು ನೀವು ನೋಡಿಕೊಳ್ಳಿರೆಂದು ನೀವು ಈಗ ತಾನೆ ಹೇಳಿರಲಿಲ್ಲವೇ? ಹಾಗಾದರಾಯಿತು. ಇನ್ನು ನೀವು ಸುಮ್ಮನಿರ್ರಿ. ನಿಮ್ಮ ಚಂಪೆಯು ನಿಜವಾಗಿಯೂ ಒಳ್ಳೇ ಭಾಗ್ಯವಂತ ಹುಡುಗೆಯಾಗಿರುತ್ತಾಳೆ.

ಮೋರಪ್ಪನ ಆ ಮಾತಿಗೆ ಅವಳೊಳ್ಳೇ ಹಿಗ್ಗಿದಳು. ಅದರಿಂದ ಅವಳು:—ಮೋರಪ್ಪನವರೇ, ಅಂಥ ಯಾವ ಮನೆತನ ನೋಡಿರುತ್ತೀರಿ?

ಮೋ:—ನಿಮಗೆ ಎಂಥ ಮನೆತನ ಬೇಕೆಂಬದನ್ನು ಹೇಳಿರಿ ಸಾಕಾಗುವಷ್ಟು ವಸ್ತ್ರ-ಒಡವೆಗಳು ಬೇಕು, ಬೇಡಿ ಬೇಡಿದಂತಹ ವಸ್ತ್ರ-ಪ್ರಾವರಣಗಳನ್ನು ಕೊಡಬೇಕು, ತಿನ್ನುಣ್ಣಲಿಕ್ಕೆ ಆರೆಯಿರಬಾರದು; ಮತ್ತು ಅತ್ತೆ, ಮಾವ, ಭಾವ, ಮೈ-ದುನ, ನಾದಿನಿ, ನೆಗೆಣ್ಣೆ ಮುಂತಾದವರ ಕಾಟವಿರಕೂಡದು. ಇಂಥದೇ ಬೇಕಲ್ಲವೆ?

ನನ್ನ ಗೃಹಿಣಿ:—ಸರಿ-ಸರಿ, ಅಷ್ಟಿದ್ದ ಮೇಲೆ ಮತ್ತೇನು ಬೇಕು?

ಆಗ ನನ್ನಿಂದ ಮತ್ತೆ ಸುಮ್ಮನಿರುವದಾಗಲಿಲ್ಲ. ಅಂತೆಯೇ ನಾನು ಮತ್ತೆ ನಡುವೇ ಪ್ರಶ್ನೆಮಾಡಿದೆನು:-ವರದಕ್ಷಿಣೆ ಏನು ಕೊಡಬೇಕಾದೀತು? ಮೂರು ನಾಲ್ಕು ಸಾವಿರಗಳಲ್ಲಿ ಬಗೆ ಹರಿಯಬಹುದೇ?

ನನ್ನ ಗೃಹಿಣಿ:—ಮತ್ತೆ ತಮ್ಮದೇ ಮಾತು! ಮೋರಪ್ಪನವರು ಎಲ್ಲವನ್ನೂ ನೋಡಿಕೊಳ್ಳುತ್ತೇವೆಂದು ಹೇಳಿಲ್ಲವೆ?

ನಾನು:— ಹೀಗೆಏನು? ಒಳ್ಳೇದು. ಹಾಗೆಯೇ ಆಗಲಿ. ನಾನು ಮರೆತೇಬಿಟ್ಟೆ.

ನನ್ನ ಗೃಹಿಣಿ:—ಮೋರಪ್ಪನವರೇ, ಹಾಗಾದರೆ ಮುಹೂರ್ತವನ್ನು ತುಸ ದೂರಿನದೇ ನಿಶ್ಚಯಿಸಿರಿ. ಯಾಕಂದರೆ ಈ ಎಲ್ಲ ಕೆಲಸಗಳು ಮನೆಯೊಳಗೆ ನನ್ನೊ-ಬ್ಬಳಿಂದಲೇ ಆಗಬೇಕಲ್ಲವೆ?

ಮತ್ತೆ ನಾನು:—ಆದರೆ ಮನೆತನವಾವುದನ್ನು ಗೊತ್ತುಪಡಿಸಿದಿರಿ?

ಮೋ:—ಗುರುಬಟ್ಟರೇ, ನೀವು ಸುಮ್ಮನೆ ಕೂಡ್ರಿರಿ. ಮನೆತನದ್ದೇನು? ಅದು ಸಿದ್ಧವಿದೆ!

ನನ್ನ ಗೃಹಿಣಿ:—ಹಾಗಾದರೆ ಮುಹೂರ್ತವು ನಾಳಿನ ಮಾಘ ಮಾಸದಲ್ಲಿಟ್ಟಿರೇನು ಅಡ್ಡಿಯಿದೆ?

ನಾನು:—ಮೊದಲು ಅವರು ಕನ್ಯೆಯನ್ನು ನೋಡಿರುತ್ತಾರೇನು?

ಮೋ:—ಗುರುಭಟ್ಟರೇ, ತುಸ ತಡೆಯಿರೆನ್ನುತ್ತಿರುವೆನಲ್ಲವೇ?

ನನ್ನ ಗೃಹಿಣಿ:—ಅಹುದು; ವರನು ಎಲ್ಲಿಯವನು? ಇದೇ ಊರವನೋ-ಪರಸ್ಥಳದವನೋ?

ನಾನು:—ಆತನನ್ನು ಯಾರೂ ನೋಡಬೇಡವೇ?

ಮೋ:—ಛೇ! ಛೇ! ಏನಪ್ಪಾ, ಈ ಹಾರುವನ ಇಲ್ಲದ ಗಡಿಬಿಡಿಯು?

ನನ್ನ ಗೃಹಿಣಿಯು ನನ್ನ ಕಡೆಗೆ ಹೊರಳಿ:—ತುಸ ಸುಮ್ಮನಿದ್ದುಕೊಂಡು ಕೇಳಿಕೊಳ್ಳಲಿಕ್ಕೆ ಏನಾಗುತ್ತದೆಯೋ ಯಾರು ಬಲ್ಲರು? ಪ್ರತಿಯೊಂದು ಮಾತಿನ ಒಗ್ಗೆಯೂ ಹೀಗೆ ಗಡಿಬಿಡಿಯೇಕೆ?

ನಾನು:—ಅಹುದು, ಅದೂ ನಿಜವೇ; ಆದರೆ ಒಳಗೆ ಅಡಿಗೆಗೆ ಪ್ರಾರಂಭವಾಯಿತೇನು?

ನನ್ನ ಗೃಹಿಣಿ:—ಈಗ ತಾನೆ ಬೇಳೆಗೆ ಎಸರೇರಿಸಿ ಬಂದಿರುತ್ತೇನೆ.

ಮೋ:—ಹಾಗಾದರೆ ನಿಮಗೆ ಅವರ ಮನೆತನವು ಸಮ್ಮತವಾಗುವದೇ?

ನನ್ನ ಗೃಹಿಣಿ:—ಅದಾವುದು?

ಮೋ:—ನಮ್ಮ ಸಾವುಕಾರ ಭೀಮರಾಯರದು? ನಿಮಗೆ ಹೇಗೆ ಬೇಕೋ ಹಾಗಿದೆ. ಮನೆಯಲ್ಲಿ ಲಕ್ಷಗಟ್ಲೆ ದುಡ್ಡಿದೆ. ತಿನ್ನುಣ್ಣಲಿಕ್ಕೆ ಕೊರತೆಯಿಲ್ಲ. ಅತ್ತೆ-ಮಾವ ಮೊದಲಾದವರ ಯಾರ ಕಾಟವೂ ಇಲ್ಲ. ಮತ್ತೂ........

ನಾನು:--ಮತ್ತು ವಯಸ್ಸಿಗೂ ಕೊರತೆಯಿಲ್ಲ; ಐವತ್ತರ ಮನೆಗೆ ಬಂದಿದೆ!

ನನ್ನ ಈ ತುಸ ಮಿರುಬಿನ ಮಾತಿಗೆ ಮೋರಪ್ಪನು:—ಗುರುಭಟ್ಟರೇ, ನಾನನ್ನುವುದಿದೇ. ಎಲ್ಲವೂ ಹೇಗೆ ಹೊಂದಬೇಕು? ವಯಸ್ಸು ಹೆಚ್ಚೆಂದೇಕೆ ಅನ್ನುವಿರಿ? ಮೂವತ್ತು-ಮೂವತ್ತೆರಡೆಂದರೆ ಹೆಚ್ಚೇ?

ನನ್ನ ಗೃಹಿಣಿ:—ಇಮ್ಮನೆ ವರನೇನು? ಹಾಗಿದ್ದರೆ ಬೇಡವೇ ಬೇಡಿರಪ್ಪಾ!

ನನ್ನ ಗೃಹಿಣಿಯ ಈ ನುಡಿಗಳನ್ನು ಕೇಳಿದ ಬಳಿಕ ಮಾತ್ರ ಮೋರಪ್ಪನು ತುಸ ಬೆದರಿದನು. ಇದುವರೆಗನಿಸಿದ್ದ ಆಶೆಯು ನಷ್ಟವಾಯಿತು; ಮತ್ತು ಬಹಳ ಹೊತ್ತಿನ ವರೆಗೆ ನಡೆದಿದ್ದ ಆ ವಾದ-ವಿವಾದವನ್ನು ನಿಲ್ಲಿಸಿಬಿಡಬೇಕೆಂದು ನಾನು ಒಳ್ಳೇ ರಭಸದಿಂದ:—ಮೋರಪ್ಪಾ, ನೀನು ಸೂಚಿಸುವ ವರನಿಗೆ ನಮ್ಮ ಚಂಪೆಯನ್ನೇನೂ ನಾವು ಕೊಡುವದಿಲ್ಲ ತಿಳಿಯಿತೇ? ನಾನು ಬಡವನಾಗಿದ್ದರೂ ಕಟುಕನಲ್ಲ. ಇಷ್ಟು ಚಿಕ್ಕ ಬಾಲಿಕೆಯನ್ನು ಮುದುಕನ ಕೊರಳಿಗೆ ಕಟ್ಟುವಂತಹ ನಿಷ್ಠುರನು ನಾನಲ್ಲ. ನಾನು ನನ್ನ ಮಗಳನ್ನು ಮಾರಲಿಕ್ಕೆ ಹಿಡಿದಿರುವುದಿಲ್ಲ. ಆಕೆಯ ಕುತ್ತಿಗೆಯ ಕೊಯ್ದು ಹೊಟ್ಟೆ ಹೊರೆಯುವ ನೀಚನು ನಾನಲ್ಲ. ನಾನು ಇದು ವರೆಗೆ

ಈಕೆಯನ್ನು ಸಂರಕ್ಷಿಸಿದುದು ನನ್ನ ಕಲ್ಯಾಣಕ್ಕಲ್ಲ. ತಿಳಿಯಿತೇ? ಇನ್ನು ಈ ಬಗ್ಗೆ ಒಂದು ಅಕ್ಕರ ಕೂಡ ಮಾತನಾಡಬೇಡ.

ಈ ನನ್ನ ಭಾಷಣದಿಂದ ವೀರಪ್ಪನಿಗೆ ಒಳ್ಳೇ ಬರೆಕೊಟ್ಟಂತಾಯಿತು. ಆತನು ಆ ನೋವಿನಿಂದ:—ಗುರುಭಟ್ಟರೇ, ನಾನು ನಿಮ್ಮ ಚಂಪೆಯನ್ನು ಕ್ರಯಕ್ಕೆ ಕೊಡಹೇಳಿದೆನೇ? ಹೊಟ್ಟೆಯ ಮಗಳನ್ನು ಮಾರಿಬಿಡಿರಿ; ಆಕೆಯನ್ನು ದುಃಖಸಾಗರದಲ್ಲಿ ನೂಕಿ ಬಿಟ್ಟು ಆಕೆಯ ಸಂಸಾರವನ್ನು ನಾಶಮಾಡಿ ನೀವು ಸುಖಿಗಳಾಗಿರೆಂದು ನಾನು ಹೇಳಿದೆನೇ? ಸುಮ್ಮನೆ ಏನಾದರೊಂದು ಮಾತಾಡಿದರೆ ಆಯಿತೇನು? ನಾನೇನು ನಿಮ್ಮ ವೈರಿಯೇ? ನನಗೆ ಈ ಚಂಪೆಯ ಬಗ್ಗೆ ಏನೂ ಅನಿಸುವುದಿಲ್ಲವೇನು?

ನಾನು:—ಏನೇ ಏಕೆರಲೊಲ್ಲದೇಕೆ? ವೀರಪ್ಪ, ನನ್ನ ಅಂಬೋಣವೇನಂದರೆ, ನಾನು ಹತ್ತು ಮಂದಿಯಲ್ಲಿ ಬಿಕ್ಕೆ ಬೇಡೇನು; ತಿಂಗಳೊಪ್ಪತ್ತು ಉಪವಾಸ-ನಿರಾಹಾರ ಮಾಡೇನು; ಆದರೆ ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗಳ ಕಲ್ಯಾಣವನ್ನೇ ನಾನು ಮಾಡೇನು; ಹಾಗು ಅಂಥ ಮನೆತನವನ್ನೇ ನೋಡೇನು. ಸಾಯುವವರೆಗೂ ಅವರು ನನ್ನ ಹೆಸರಿಗೆ ಕಲ್ಲು ಒಡೆದರೂ ಚಿಂತೆಯಿಲ್ಲ; ಅವರ ಇಡೀ ಜನ್ಮದ ನಾಶವಾದರೂ ಚಿಂತೆಯಿಲ್ಲ; ಮರಣಾಂತ್ಯದ ವರೆಗೂ ಅವರು ಕಷ್ಟದಲ್ಲಿ ಕಾಲ ಕಳೆದರೂ ಅಡ್ಡಿಯಿಲ್ಲ; ಆದರೆ ನನಗೆ ಸದ್ಯಕ್ಕೆ ನಾಲ್ಕು ದುಡ್ಡು ಸಿಗುತ್ತಿರುವುದನ್ನು ತಕ್ಕೊಂಡರಾಯಿತು, ಎಂಬ ನೀಚಕೋಟಿಯ ಚಂಡಾಳ ಮನುಷ್ಯನು ನಾನಾಗಿರುವದಿಲ್ಲ; ಮತ್ತು ನೀನಾದರೂ ಇನ್ನು ಈ ಬಗ್ಗೆ ಚಕಾರ ಶಬ್ದವನ್ನು ಕೂಡ ಎತ್ತಬೇಡ. ನಿಮ್ಮ ಸಾವುಕಾರನು ಲಗ್ನವಾಗಬೇಕಾಗಿದೆ; ಮತ್ತು ನೀನು ನನ್ನ ಚಂಪೆಯನ್ನು ಆತನಿಗೆ ಕೊಡಿಸಬೇಕೆನ್ನುತ್ತೀ; ಹಾಗು ಇದಕ್ಕಾಗಿಯೇ ನೀನು ನನ್ನೊಡನೆ ಸ್ನೇಹ ಬೆಳಸಿ, ಇದು ವರೆಗೆ ನೀನೂ ನಿನ್ನ ಸಲಹೆಯ ಮೇರೆಗೆ ನಿನ್ನ ಯಜಮಾನನೂ ನನ್ನ ಸಲುವಾಗಿ ಪ್ರಯತ್ನಪಟ್ಟಿರುತ್ತೀರೆಂಬದು ನನಗೆಲ್ಲ ತಿಳಿದು ಹೋಗಿದೆ ತಿಳಿಯಿತೇ ವೀರಪ್ಪಾ? ನನಗೆ ನೀವು ನವಖಂಡ ಪೃಥ್ವಿಯ ರಾಜ್ಯವನ್ನು ಕೊಡಲೊಪ್ಪಿದರೂ ನಾನು ನನ್ನ ಈ ಚಿನ್ನದ ಪುತ್ಥಳಿಯಂತಹ ಮಗಳನ್ನು, ಬಡ ಹಸುವನ್ನು, ತೋರಿಕೆಯ ಹಾವಿಗೆ ಮರುಳಾಗಿ ಇಷ್ಟೇ ದುಡ್ಡಿನ ಲೋಭದಿಂದ ಕಟುಕನ ಕೈಗೆ ಕೊಡಲಾರೆನು. ತಮ್ಮ ಹೊಟ್ಟೆಯ ಮಕ್ಕಳನ್ನು ದುಡ್ಡಿನ ಆಶೆಯಿಂದ ವೃದ್ಧರ ಕೊರಳಿಗೆ ಕಟ್ಟುವವರಿಗೆ ತಂದೆ-ತಾಯಿಗಳೆನ್ನಬೇಕೇ? ಅವರು ಮನುಷ್ಯಕೋಟಿಯೊಳಗಿನವರೇ? ಅವರ ಮುಖದರ್ಶನವಾದರೆ ಮೊದಲು ಸಚೈಲ ಸ್ನಾನ ಮಾಡಬೇಕು! ವೀರಪ್ಪಾ, ಇನ್ನೆಲ್ಲ ಕಟುಕರ ಕೆಲಸಗಳು! ರೌರವ ನರಕವು ಖಾತ್ರಿಯಿಂದ ಪ್ರಾಪ್ತವಾಗಲಿಕ್ಕೆ ಇದೊಳ್ಳೇ ಸುಲಭೋಪಾಯವು! ನಿಮ್ಮ ಸಾವುಕಾರರು ನಾಲ್ವತ್ತು ವರ್ಷ ಮೀರಿದವರಿರುತ್ತಾರೆ. ಅಂಥವರಿಗೆ ನಾನು ನನ್ನೀ ೮-೧೦ ವರ್ಷದ ಹುಡುಗಿಯನ್ನು ಧಾರೆಯೆರೆದು ಕೊಡಲೇನು? ನಮ್ಮ ಚಂಪೆಯು ಅವರಿಗೆ ಮೊಮ್ಮ

ಗಳಾಗಿ ಕಂಡಾಳು-ಮೊಮ್ಮಗಳು! ಅಂಥವನಿಗೇನೋ ನಮ್ಮ ಮೋರಪ್ಪನು ನಮ್ಮ ಹುಡುಗಿಯನ್ನು ಗೊತ್ತು ಮಾಡಲಿಕ್ಕೆ ಬಂದಿರುವನಂತೆ! ನಾಚಿಕೆಯೆನಿಸುವದಿಲ್ಲವೇ ನಿನಗೆ ಹಾಗೆ ಬಾಯಿ ಬಿಚ್ಚಿ ಮತ್ತೆ ಮತ್ತೆ ಕೇಳಲಿಕ್ಕೆ? ಈ ಗುರುಭಟ್ಟನ ದೇಹದಲ್ಲಿ ಪ್ರಾಣವಿರುವ ವರೆಗೂ ಈ ಸಂಗತಿಯು ಘಟಿಸಲಿಕ್ಕಿಲ್ಲೆಂಬದು ತಿಳಿಯಿತೇ ಚನ್ನಾಗಿ? ಬಡತನದಿಂದ ಬಳಲಿದರೂ, ಯಾರೊಬ್ಬರು ನನ್ನನ್ನು ಶೂಲಕ್ಕೇರಿಸುತ್ತೇವೆಂದು ಧಮಕಿ ಕೊಟ್ಟರೂ ಕೂಡ ನಾನು ನನ್ನ ಹೊಟ್ಟೆಯ ಕರಳಿನ-ಈ ನನ್ನ ತೊಡೆಯ ಮೇಲೆ ಆಡಿದ ಮಗಳ-ಕೊರಳು ಕೊಯ್ಯಲಿಕ್ಕೆ ಸಿದ್ಧನಾಗಲಾರೆನು. ಬಡವರ ಮನೆಗೆ ಬಿದ್ದರೆ ಅಲ್ಲಿಯೇ ಬೀಳಲಿ. ಆ ಶ್ರೀಮಂತಿಕೆಯನ್ನೇನು ಕೊಂಡೊಯ್ದು ಸುಡುವುದಿದೆ? ಬಡತನವೆಂದರೇನು ಪಾಪವಲ್ಲ. ಬಡತನವೆಂದರೆ ದುರ್ವ್ಯಸನವಲ್ಲ. ಗಂಡ-ಹೆಂಡಿರ ಜೊತೆಯು ಒಪ್ಪಬಹುದಾದ ವರಮನೆತನಕ್ಕೇ ನಾನು ನನ್ನ ಚಂಪೆಯನ್ನು ಕೊಡುವವನು. ನಾಲ್ಕು ದಿನ ನನಗೆ ತೊಂದರೆಯಾದರೆ ಆಗಲಿ; ಆ ಬಗ್ಗೆ ನಾನೇನೂ ಅಂಜುವವನಲ್ಲ. ತಿಳಿಯಿತೇ?

ನನ್ನ ಆ ಸಂತಾಪಯುಕ್ತ ನಿಕರದ ಭಾಷಣವನ್ನು ಕೇಳಿ ಮೋರಪ್ಪನು ಏನೊಂದೂ ಉತ್ತರವನ್ನೀಯಲಿಲ್ಲ. ಅವನ ಸೊಂಡೆಯು ಒಣಗಿ ಸಂಡಿಗೆಯಂತಾಯಿತು ಕಡೆಗೆ ಹೊರಡುವಾಗ ಆತನು:—"ಗುರುಭಟ್ಟರೇ, ನೀವು ಏನಾದರೊಂದು ವಿಪರೀತವಾಗಿ ಕಲ್ಪಿಸಿಕೊಂಡು ಸಂತಪ್ತರಾಗಿರುವಿರಷ್ಟೇ. ನಿಮ್ಮ ಕೊರಳಾಣೆಯೆಂ-ದರೂ ನನ್ನ ಉದ್ದೇಶವು ಹಾಗಿರುವದಿಲ್ಲ." ಎಂದನು.

ಇನ್ನು ನಮ್ಮಿಬ್ಬರಲ್ಲಿ ಮಾತಿಗೆ ಮಾತು ಬೆಳೆದು ಪ್ರಸಂಗವು ವಿಕೋಪಕ್ಕೆ ತಲುಪುವದೆಂದು ನನ್ನ ಗೃಹಿಣಿಗೆ ಅಂಜಿಕೆಯೆನಿಸಿದ್ದರಿಂದ, ಆ ಪ್ರಸಂಗವನ್ನು ನೀಗುವುದಕ್ಕೆಂದು ಅವಳು:—"ಮೋರಪ್ಪನವರೇ, ಹೋಗಲಿ ಬಿಡಿರಿ. ನೀವಿನ್ನು ಕೆಲ ಕಾಲ ಸುಮ್ಮನಿರಿ. ಈಗಿನ ಕ್ಷಣವು ಸಿಟ್ಟಿನದಿದ್ದಂತೆ ತೋರುತ್ತದೆ."

ಬಳಿಕ ನಮ್ಮ ಆ ವಾದವು ಅಂದಿನ ಮಟ್ಟಿಗೆ ನಿಂತು ಹೋಯಿತು. ಮುಂದೆ ಕೆಲ ಕ್ಷಣಗಳ ನಂತರ ಮೋರಪ್ಪನು ತನ್ನ ಮನೆಗೆ ಹೊರಟು ಹೋದನು ನನ್ನ ಗೃಹಿಣಿಯು ಗೃಹಕೃತ್ಯಗಳಿಗಾಗಿ ಒಳಗೆ ಹೋದಳು. ನಾನೊಬ್ಬನೇ ಪಡಸಾಲೆಯ ಮೇಲೆ ಸ್ತಬ್ಧವಾಗಿ ಕುಳಿತುಕೊಂಡು 'ಈ ಜಗತ್ತಿನೊಳಗಿನ ಪ್ರತಿಯೊಬ್ಬ ಮನುಷ್ಯನೂ ಒಂದಿಲ್ಲೊಂದು ಮತಲಬದವನೇ. ಪ್ರತಿಯೊಬ್ಬನೂ ಮುಂದಿಯ ಬಕ್ಕಣವನ್ನು ಹೇಗೆ ತೆರವು ಮಾಡಲಿ? ಎಂಬದನ್ನಷ್ಟೇ ನೋಡುತ್ತಿರುತ್ತಾನೆ. ಆಪ್ತರೇನು, ಇಷ್ಟರೇನು, ಮಿತ್ರರೇನು ಎಲ್ಲರೂ ಈ ವಿಷಯದಲ್ಲಿ ಸಮಾನರೇ. ನಾನು ಒಂದು ವೇಳೆ ಅವರ ತೋರಿಕೆಯ ವರ್ತನವನ್ನು ನಂಬಿ ಸಂಕಟಕ್ಕೀಡಾಗುವದೇ ನಿಜ. ಮನುಷ್ಯನೆಂದರೇನು ಬೆಳ್ಳಿಯಲ್ಲ, ಬಂಗಾರವಲ್ಲ! ಅವನ ಬೆಲೆಗಾಣಬೇಕಾದರೆ, ತಕ್ಕ ಪ್ರಸಂಗವೇ ಬರಬೇಕು. ಪ್ರಸಂಗದ ಹೊರತು ಮನುಷ್ಯನ ಉಚ್ಚ ನೀಚ ಬೆಲೆಯ ಕಲ್ಪನೆ ಕೂಡ ಆಗಲಿಕ್ಕಿಲ್ಲ!' ಮುಂತಾದ ವಿಚಾರಗಳಲ್ಲಿ ಮಗ್ನನಾದೆನು.

## ೮ ಭಗವನ್ಮಾಯೆಯ ಆಟವೇ ತಿಳಿಯದು!



ನನಗೆ ನನ್ನ ಜೀವಿತದ ಬಗ್ಗೆ ಹಲವು ಸಾರಿ ಬೇಜಾರು ಬಂದಿತ್ತು. ಅದು ಮಿತಿ ಮೀರಿದಾಗ ಈಗಲೆ ಸಾವು ಬಂದರೆ ಸುದೈವವೆಂದೇ ನನಗೆ ಆಗಾಗ್ಗೆ ಅನಿಸುತ್ತಿತ್ತು. ಈ ವಿಸ್ತಾರವಾದ ಜಗತ್ತಿನಲ್ಲಿ ನನ್ನಂತಹ ಕ್ಷುದ್ರ ಜೀವಿಯು ಬದುಕಿಯಾದರೂ ಮಾಡುವು ದೇನು? ದೇವರಿಗಂತೂ ನನ್ನ ಬಗ್ಗೆ ದಯೆಯುಂಟಾಗುವದಿಲ್ಲ. ವಿಧಿಲಕ್ಷ್ಮಿಯು ಕೈ ತೊಳಕೊಂಡು ನನ್ನ ಬೆನ್ನು ಹತ್ತಿರುವಳು. ಕಂಡ ಕಡೆಗೆಲ್ಲ ನಿರಾ ಶೆಯೇ! ಮತ್ತು ಹೊಸದಾಗಿ ಉದಯಿಸುವ ಪ್ರತಿದಿನದಲ್ಲೂ ಹೊಸ-ಹೊಸ ಚಿಂತೆ ಗಳುಂಟಾಗಿ ನನ್ನನ್ನು ಆಡರಹತ್ತುವವು; ಆದರೆ ನನ್ನಂತಹ ಬಡಪ್ರಾಣಿಯು ಅವು ಗಳೆದುರಿಗೆ ಕಾಲೂರಿ ನಿಲ್ಲುವ ಬಗೆ ಹೇಗೆ? ಈ ಲೋಕದಲ್ಲಿ ಹುಟ್ಟಿ ಈ ಚಿಂತೆ ಹಾಗು ಸಂಕಟಗಳೊಡನೆ ಕಾದುತ್ತ ಕೂಡ್ರಬೇಕೋ ಏನು? ಮತ್ತು ಸಂಕಟ, ದುಃಖ, ಅಡ ಚಣಿ, ವಿವಂಚನೆ, ತೊಂದರೆ, ತಾಪ, ಕ್ಲೇಶ, ಸಂತಾಪ, ಅಪಮಾನ ಮುಂತಾದವು ಗಳ ಕಂಟ್ಲಿಗಳನ್ನು ಹೊತ್ತೊಯ್ಯುವದೇ ನನ್ನ ಜನ್ಮದ ಸಾರ್ಥಕ್ಯವೇನು? ಇತ್ಯಾದಿ ಯೋಚನೆಗಳು ನನ್ನನ್ನು ತೀರ ಹುರುಪಳಿಸಿ ಬಿಟ್ಟವು.

ಈ ಸಂಸಾರದಲ್ಲಿ ಸುಖವಾದರೂ ಆವುದು; ಮತ್ತು ಎಲ್ಲಿರುತ್ತದೆ? ಎಂದು ನಾನು ಮತ್ತೆ ಮತ್ತೆ ಆಲೋಚಿಸಹತ್ತಿದ್ದೆನು. ಎಲ್ಲಿಯ ಹೆಂಡತಿ, ಎಲ್ಲಿಯ ಮಕ್ಕಳು, ಎಲ್ಲಿಯ ಆಪ್ತೇಷ್ಟರು? ಅವರ ಸಲುವಾಗಿ ನಾನು ಈ ಚಕ್ರವ್ಯೂಹದಲ್ಲೇಕೆ ಸಿಕ್ಕು ಬೀಳಬೇಕು? ಇಲ್ಲಿ ಸುಖದ ಆಶೆ ಕೂಡ ತೋರುವುದಿಲ್ಲ. ಆದರಿಂದ ಈ ಜಂಜಾಟ ದೊಳಗಿಂದ ಶಕ್ಯವಾದಷ್ಟು ತೀವ್ರ ನನ್ನ ಬಿಡುಗಡೆ ಮಾಡಿಕೊಳ್ಳುವುದೇ ಯೋಗ್ಯ ವಲ್ಲವೇ? ವ್ಯರ್ಥವಾಗಿ ಲೋಭದ ಬಲೆಗೆ ಬಿದ್ದು ಕೇವಲ ಚಿಂತೆಯ ಭಾಗಿದಾರನು ಮಾತ್ರ ನಾನಾಗುತ್ತಿರುವೆನು. ಆದರಿಂದ ಇದು ವರೆಗೆ ನನ್ನಷ್ಟಕ್ಕೆ ನಾನು ಅನು ಭೋಗಿಸಿದ ಸುಖ-ದುಃಖಗಳು ಸಾಕಾದವು. ಈ ಮೊದಲು ಎಷ್ಟು ಸುಖವನ್ನು ಅನುಭವಿಸಿದೆನೋ, ಅದು ಇನ್ನು ಮುಂದೆ ದೊರಕುವುದೇ? ಆದರಿಂದ ಆ ಆಶೆಯನ್ನು ತೊರೆದು ಬಿಡುವದೇ ವಿಹಿತವು!

ಈ ಬಗೆಯ ನಿರಾಶೆಯಲ್ಲಿ ನಾನು ತೊಡಗಿರುವಾಗ ಮಾತ್ರ ನನ್ನ ಮನಸ್ಸಿಗೆ ತುಸ ವಿರಾಮವೆನಿಸಿದಂತಾಯಿತು. ಆಗ ನಾನು ಇನ್ನು ಈ ಸುಖಾಭಿಲಾಷೆಯು ಸಾಕಾಯಿತೆಂದು ನಿಶ್ಚಯಿಸಿದೆನು. ಬಳಿಕ ನನ್ನ ಮನಸ್ಸು ನನ್ನನ್ನು ಕುರಿತು:— ಗುರುಭಟ್ಟರೇ, ಇನ್ನು ಮೇಲೆ ಮತ್ತೆ ಸಂಸಾರದಲ್ಲಿ ಸಿಕ್ಕು ಬೀಳಬೇಡಿರಿ. ಇದು ವರೆಗೆ ಭೋಗಿಸಿದಷ್ಟು ಸುಖ-ದುಃಖಗಳು ಸಾಕಾದವು. ಇನ್ನು ಸ್ವಲ್ಪಾದರೂ ಪರ ಮಾರ್ಥದ ವಿವೇಕವನ್ನು ತಾಳಿರಿ." ಎಂದು ಹೇಳಹತ್ತಲು, ನಾನು ಅದಕ್ಕನುಗುಣ

ವಾಗಿ ಸಂಸಾರಪಾಶವನ್ನು ಹೇಗೆ ಹರಿದೊಗೆಯಬೇಕೆಂಬ ಆಲೋಚನೆಗೊಳಗಾದೆನು.

ಈ ಸಂಸಾರ ಬೇಡವಷ್ಟೇ ಅಲ್ಲ; ಈ ಜೀವವು ಕೂಡ ಬೇಡವೆಂದು ಒಮ್ಮೆ ಅನಿಸುವುದು; ಆದರೆ ಈ ಜೀವವು ಹೋಗುವ ಬಗೆ ಹೇಗೆ? ಅಫು ತಿನ್ನಬೇಕೇ, ಸೋಮಲ (ವಿಷ)ವನ್ನು ನುಂಗಬೇಕೇ ಅಥವಾ ಕೆರೆ-ಬಾವಿಗಳಲ್ಲಿ ಮುಳುಗಬೇಕೇ? ಮಾಡಬೇಕಾದರೂ ಏನು? ಆದರೆ ಸ್ವಲ್ಪ ಹೊತ್ತಿನ ನಂತರ ಹೋದ ಜನ್ಮಗಳಲ್ಲಿ ಯಾವ ಪಾಪಗಳನ್ನು ಮಾಡಿರುವೆನೋ ಏನೋ, ಅವುಗಳನ್ನು ಇಹಜನ್ಮದಲ್ಲಿ ಭೋಗಿಸುತ್ತ ಕುಳಿತಿರುತ್ತೇನೆ; ಮತ್ತು ಈಗ ಈ ಬಗೆಯ ಆತ್ಮಹತ್ಯೆಯನ್ನು ಮಾಡಿ ಈ ಹೊಸ ಪಾತಕವನ್ನುಂಟು ಮಾಡಿಕೊಳ್ಳಲೇನು? ಮತ್ತು ಅದರಿಂದ ಮತ್ತೆ ಜನ್ಮ-ಮರಣಗಳ ಚಕ್ರದಲ್ಲಿ ತೊಡಗಬೇಕಲ್ಲವೆ! ಇನ್ನು ಒಂದು ವೇಳೆ ನಾನು ಆತ್ಮಹತ್ಯೆಯನ್ನೇ ಮಾಡಿಕೊಂಡರೆ ಎಲ್ಲರೂ ನನ್ನನ್ನು ನಿಂದಿಸುವವರೇ! ನನ್ನನ್ನು ಹೇಡಿಯೆಂದೆನ್ನುವರು; ಮತ್ತು ನನಗೆ ಬೇಕುಬೇಕಾದಹಾಗೆ ಆಡಿಕೊಳ್ಳಹತ್ತುವರು. ಆದರಿಂದ ಅದೇನೂ ಯೋಗ್ಯವಲ್ಲ. ಆತ್ಮಹತ್ಯೆ ಮಾಡಿಕೊಳ್ಳುವದು ನನಗೆ ಒಪ್ಪುವದಿಲ್ಲ ಎಂದೆನಿಸಿತು.

ಇನ್ನು ಎಲ್ಲಿಯಾದರೂ ದೇಶಾಂತರಕ್ಕೆ ಹೊರಟು ಹೋಗಬೇಕೆಂದರೆ, ಅಲ್ಲಿಯಾದರೂ ಏನು ಸುಖವಿದೆ? ಇತ್ತ ಕಡೆಯ ಮಾನಸಿಕ ಯಾತನೆಯೇನೂ ತಪ್ಪಲಾರದು. ಈ ಹೊಟ್ಟೆಯು ಬೆನ್ನಿಗೆ ಹತ್ತಿದ್ದೇ. ಇದರ ಗತಿಯೇನು? ಬೇನೆ-ಬೇಸರಿಕೆಗಳೇನು ತಪ್ಪುವವೇ? ಇಷ್ಟು ದಿನಗಳ ವರೆಗೆ ಹೆಂಡಿರು-ಮಕ್ಕಳ ಸಹವಾಸ ಮಾಡಿದ್ದು, ಕೊನೆಗೆ ನರಿ-ನಾಯಿಗಳಂತೆ ಎಲ್ಲಿಯಾದರೂ ಬಿದ್ದು ಸಾಯುವದರಲ್ಲೇನು ಸುಖವಿದೆ? ನಾನು ದೇಶಾಂತರಕ್ಕೆ ಹೊರಟು ಹೋದ ಬಳಿಕ ಊರ ಜನರು ನನ್ನ ಹೆಂಡಿರು-ಮಕ್ಕಳಿಗೆ ನಾನಾ ಬಗೆಯಿಂದ ಅಂದು ಸಾಕುಸಾಕು ಮಾಡುವರು; ನನ್ನ ನಿರ್ಭರ್ತ್ಸನೆ-ನಿಂದೆಗಳು ಏಕೋಪ್ರಕಾರದಿಂದ ನಡೆದಾವು; ಮತ್ತು ನೀವು ಎಲ್ಲಿಯವರು? ಇತ್ತಕಡೆಗೇಕೆ ಬಂದಿರುತ್ತೀರಿ? ನಿಮ್ಮ ಹೆಂಡಿರು-ಮಕ್ಕಳೆಲ್ಲಿ? ನೀವು ಹೀಗೇಕೆ ಅಂಡಲೆಯುತ್ತೀರಿ? ಮುಂತಾದ ಪ್ರಶ್ನೆಪರಂಪರೆಗಳು ಕಂಡಕಂಡವರ ಬಾಯಿಂದ ಹೊರಡತಕ್ಕವು; ಮತ್ತು ಅವರಿಗೆ ಉತ್ತರ ಹೇಳ-ಹೇಳುತ್ತಿರುವಾಗ ಖೊಟ್ಟತನವು ಮಾತ್ರವು ಪ್ರಾಪ್ತವಾದೀತು. ಇತ್ತ ಮನೆಯಲ್ಲಿ ಏನು ನಡೆದಿದ್ದೀತೆಂಬ ನೆನಪಿನಿಂದ ಮನಸ್ಸು ಉದ್ವಿಗ್ನವಾಗತಕ್ಕದ್ದೇ. ಆದರಿಂದ ಆ ದೇಶಾಂತರದಲ್ಲಿಯೂ ಏನೂ ಸುಖವಿಲ್ಲ. ಹಾಗಾದರೆ ಇನ್ನು ಮುಂದೆ ಮಾಡುವುದಾದರೂ ಏನು? ಎಂಬ ಸಮಸ್ಯೆಯು ಏನಾದರೂ ಬಗೆ ಹರಿಯಲೊಲ್ಲದು.

ನಾನು ಈ ಬಗೆಯ ವಿವಂಚನೆಯಲ್ಲಿ ಕುಳಿತಿರಲಿಕ್ಕೆ ಒಗೆದ ಬಟ್ಟೆಗಳನ್ನು ಹಿಂಡಿ ಗಂಗಾಳದಲ್ಲಿ ತುಂಬಿ ಟೊಂಕದ ಮೇಲಿಂಸಿಕೊಂಡ, ಉಟ್ಟ ಮಡಿಸೀರೆಯು ಬಹುತರವಾಗಿ ತೊಯ್ದು ಹೋದ, ಒಗೆಯುವ ಶ್ರಮದಿಂದ ದಣಿದು ಬೆವರಿಟ್ಟ ಮತ್ತು ಅಡಿಗೆಗೆ ತಡವಾಯಿತೆಂದು ಮೈ ತೊಳೆದುಕೊಳ್ಳುವ ಆಲೋಚನೆಯಿಂದ ಘುಸ ಗಡಿಬಿಡಿಗೊಂಡಿದ್ದಂಥ ನನ್ನ ಗೃಹಿಣಿಯು ನನ್ನ ಎದುರಿಗೆ ಹಾಯ್ದು ಹೋದಳು.

ಇಂದು ನಾನು ಸಂತೋಷದಲ್ಲಿರಬಹುದೆಂದು ಆ ಬಡವೆಗೆ ಅನಿಸಿರಬೇಕು; ಅಂತೆಯೇ ಗಂಗಾಳವನ್ನು ಒಳಗಿರಿಸಿದವಳೇ ಹೊರಗೆ ನನ್ನೆದುರಿಗೆ ಬಂದು ಅವಳು:—"ಮಾಲತಿಯು ಅತ್ತೆಯ ಮನೆಗೆ ಹೋಗಿ ಬಹು ದಿನಗಳಾದವಲ್ಲವೆ? ಈ ಸುಟ್ಟ ದಿನಗಳು ಹೇಗೆ ಹಾಹಾ ಅನ್ನುವಷ್ಟರಲ್ಲಿ ಗತಿಸುವವು!" ಎಂದಂದಳು. ಅವಳ ಆ ಪ್ರಶ್ನೆಯ ಹೊಯ್ಲು ತಟ್ಟನೆ ನನ್ನ ಮನಸ್ಸಿಗೆ ಹೊಳೆಯಿತು. ನನ್ನ ಮನಸ್ಸು ವೈರಾಗ್ಯ ಮಗ್ನವಾಗಿತ್ತು. ಇಂದು ಏನೆಂಬದರ ಕೊನೆಯ ನಿರ್ಣಯ ಮಾಡಿಕೊಂಡು ಅದರಂತೆ ಇಂದಿನಿಂದ ನಡೆಯಹತ್ತುವದು; ಸಂಸಾರಗೊಳಗಿಂದ ಪಾರಾಗದ ಹೊರತು ಗತ್ಯಂತರವಿಲ್ಲ, ಎಂದು ನನ್ನ ಮನಸ್ಸಿನ ನಿರ್ಧಾರವಾಗುವದರಲ್ಲಿತ್ತು; ಆದರೆ ಆ ನಿರ್ಧಾರವು ಅಲ್ಲಿಂದಲ್ಲೇ ಉಳಿಯಿತು; ಮತ್ತು ನಾನು ಆ ಕೂಡಲೆ ನನ್ನ ಗೃಹಿಣಿಯನ್ನು ಕುರಿತು:—"ಒಳ್ಳೇದು. ಮುಂದೇನೆನ್ನುತ್ತೀ?" ಎಂದು ಎಳೆದು ಪ್ರಶ್ನೆ ಮಾಡಿದೆನು.

ನನ್ನ ಗೃಹಿಣಿಯು ಚಾಣಾಕ್ಷಳೇ ಆಗಿದ್ದಳು. ನಾನು ದಿನದಂತೆ ಸಾಮಾನ್ಯ ವೃತ್ತಿಯವನಿಲ್ಲೆಂಬದನ್ನು ಅವಳು ತಟ್ಟನೆ ಕಂಡು ಹಿಡಿದಳು. ಆಗ ಅವಳು:—'ಏನೂ ಇಲ್ಲ. ಮಾಲತಿಯ ನೆನಪಾಯಿತೆಂದು ಸುಮ್ಮನೆ ಕೇಳಿದೆನಷ್ಟೇ?' ಎಂದು ಹೇಳುತ್ತ, ಆ ಅಭಿಪ್ರಾಣಿಯು ಸುಮ್ಮನೆ ಬಚ್ಚಲ ಮನೆಯ ದಾರೀ ಹಿಡಿದಳು. ಹೆಂಗಸರೆಂದರೆ, ನಿಜವಾಗಿಯೂ ಕೊಯ್ಗುರಿಗಳೇ ಸರಿ! ಗಂಡನ ಸುಖ-ದುಃಖಗಳನ್ನೇ ಅವರ ಜೀವಿತವು ಅವಲಂಬಿಸಿರುತ್ತದೆ. ನನ್ನ ಗಟ್ಟಿ ಮಾತಿನಿಂದಲೇ ಅವಳು ಅಂಜಿ ಹೊರಟು ಹೋದಳು. ಆ ಪ್ರಸಂಗದಿಂದ ಇದುವರೆಗೆ ನನ್ನ ಮನಸ್ಸಿನಲ್ಲಿ ಮನೆ ಮಾಡಿಕೊಂಡಿದ್ದ ವೈರಾಗ್ಯವೃತ್ತಿಯು ತುಸ ಚಂಚಲವಾಯಿತು. ಆದರೂ ವಿಶೇಷ ಪರಿಣಾಮವಾಗದೆ, ಆ ವೈರಾಗ್ಯಚಕ್ರವು ಪುನಃ ನನ್ನ ತಲೆಯಲ್ಲಿ ಗರಗರನೆ ತಿರುಗಲಾರಂಭಿಸಿತು; ಆದರೆ ಕೊನೆಗೂ ಯಾವ ನಿಷ್ಕರ್ಷವೂ ಆಗದಾಯಿತು. ಆತ್ಮಹತ್ಯೆ, ದೇಶಾಂತರ ಇಲ್ಲವೆ ಸಂನ್ಯಾಸಗ್ರಹಣ ಈ ಮೂರರೊಳಗಿನ ಯಾವುದೊಂದು ಮಾರ್ಗವನ್ನು ಸ್ವೀಕರಿಸುವದೇ ಗೊತ್ತಾಯಿತು; ಆದರೆ ಅದಾವದೂ ದೃಢವಾಗಿದ್ದರೆ ವಿಹಿತವಾಗುತ್ತಿತ್ತು. ಆದರೂ ಇನ್ನು ಮೇಲೆ ಸುಮ್ಮನೆ ಈ ಸಂಸಾರ ಸಾಗರದಲ್ಲಿ ಗುಟುಕು ನೀರು ಕುಡಿಯುತ್ತ ಕಷ್ಟಗಳನ್ನನುಭವಿಸುತ್ತಿರಬಾರದೆಂಬ ಸಿದ್ಧಾಂತವು ಮಾತ್ರ ಮತ್ತೆ ಮತ್ತೆ ಒಳ್ಳೇ ಧೈರ್ಯದಿಂದ ನನ್ನೆದುರಿಗೆ ಬರುತ್ತಿತ್ತು; ಮತ್ತು ಅದು ಬಂದಾಗ ಮಾತ್ರ ನನ್ನ ಮನಸ್ಸಿಗೆ ಒಂದಿಷ್ಟು ಸಮಾಧಾನವೂ ಆಗುತ್ತಿತ್ತು.

ಹೀಗೆ ಆಗುತ್ತಾಗುತ್ತ ನನ್ನ ಮನಸ್ಸು ಮತ್ತೊಂದು ಹೊಸ ವಿಚಾರವನ್ನು ನನ್ನೆದುರಿಗೆ ದೂಡಿತು. "ಏನು? ಸಂನ್ಯಾಸವನ್ನು ತಕ್ಕೊಳ್ಳುವಿಯಾ? ಆದರೆ ಇಡಿ ಕುಟುಂಬದ ಘಾತವಾದೀತಲ್ಲ! ಅದರ ಗತಿಯೇನು? ಬಾಳನು ಅನಾಥನಾದಾನು; ಚಂಪೆಗೆ ಚಲೋ ಮನೆತನವನ್ನು ಯಾರು ನೋಡಿ ಕೊಟ್ಟಾರು? ಮಾಲತಿಯನ್ನು ಕರೆ-ಕಳುಹಿಸುವವರಾರು? ಮತ್ತು ದೇವರೇ! ಆ ನನ್ನ ಪ್ರಿಯ ಗೃಹಿಣಿಗೆ ಯಾರ ಆಧಾರವಿದೆ? ನಾನು ಇಷ್ಟೆಲ್ಲ ಜನರ ಕುತ್ತಿಗೆ ಕೊಯ್ಯಲಾ? ಅವರು ನನ್ನ ಅಂಥ

ಅನ್ಯಾಯವನ್ನೇನು ಮಾಡಿರುತ್ತಾರೆ? ಬೇಡ-ಬೇಡ, ಸರ್ವಥಾ ಬೇಡ. ಈ ಯೋಜನೆಯು ತೀರ ನಿರುಪಯುಕ್ತವಾದದ್ದು!” ಎಂದು ಒಮ್ಮೆ ಅನಿಸಿದರೆ, “ಇನ್ನು ದೇಶಾಂತರ ಮಾಡಿದರೆ ಅಲ್ಲಿಯಾದರೂ ಏನಿದೆ? ಬೆಂಕಿಯೊಳಗಿಂದ ಹೊರಟು ಗರ್ತದಲ್ಲಿ ಮುಳುಗಬೇಕು. ಇದೇ ಸ್ಥಿತಿಯಲ್ಲವೆ” ಹಾಗಾದರೆ ಇನ್ನು ಮಾಡಬೇಕಾದರೂ ಏನು? ಎತ್ತ ನೋಡಿದತ್ತ ನಿರಾಶೆಯೇ ನಿರಾಶೆಯು! ಈ ಬಗೆಯ ಆಲೋಚನೆಯಲ್ಲಿ ಒಂದೆರಡು ಗಳಿಗೆಗಳು ಕಳೆದರೂ ಮನಸ್ಸು ಸ್ವಲ್ಪವೂ ಶಾಂತವಾಗಲಿಲ್ಲ. ನಾನಾ ಬಗೆಯ ವಿಚಾರಗಳಿಂದ ಮಿದುಳು ಸಹಾತ, ಕೆಟ್ಟು ಹೋಯಿತು!

ಇಷ್ಟರೊಳಗೆ ನಮ್ಮ ಚಂಪೆಯು ಬಿಸಿನೀರಿನ ತಂಬಿಗೆಯನ್ನೂ ಹಿಂಡಿದ ಒದ್ದೆ ಪಂಜೆಯನ್ನೂ ತಂದು ನಾನು ಕುಳಿತಲ್ಲಿಗೆ ಬಂದು:—“ಅಪ್ಪಾ, ಕಾಲು ತೊಳೆಯಿರೀರಿ. ಕಾಲು ತೊಳೆದು ಮಡಿಯುಟ್ಟು ನೈವೇದ್ಯ-ವೈಶ್ವದೇವ ಮಾಡಿ ಕೊಡಿರಿ. ಅಣ್ಣನಿಗೆ ಸಾಲೆಗೆ ಹೋಗಲಿಕ್ಕೆ ಅಡ್ಡಿಯಾಗಿದೆ” ಎಂದು ಹೇಳಲು, “ಒಳ್ಳೇದು!” ಎಂದು ಅಂದು, ನಾನು ಮತ್ತೆ ಯೋಚನೆಗೊಳಗಾದೆನು. ಚಂಪೆಯು ಅಜ್ಞ ಬಾಲಿಕೆಯು! ಪಾಪ! ಅವಳಿಗೇನು ಗೊತ್ತು, ನಾನು ಇಂದು ಈ ಬಗೆಯ ವೈರಾಗ್ಯ ವಿಚಾರಗಳಲ್ಲಿ ಮಗ್ನನಾಗಿರುವೆನೆಂಬದು? ದಿನದಂತೆಯೇ ನಾನು ಸುಮ್ಮನೆ ಕುಳಿತೆನೆಂದು ತಿಳಿದು, ‘ಏಳಿರಿ, ಬೇಗನೆ ಏಳಿರಿ’ ಎಂದು ಆಚ್ಛೆಯಿಂದ ನನ್ನ ಮೈ ಮೇಲೆಬಿದ್ದು ಹೊರಳಹತ್ತಿದಳು. ಆ ಕೂಡಲೆ ನಾನು ಅವಳ ಮೋರೆಯ ಮೇಲೊಮ್ಮೆ ಚನ್ನಾಗಿ ಕೊಟ್ಟೆನು!

ನನಗೆ ಆ ದಿನವು ಇನ್ನೂ ಚನ್ನಾಗಿ ನೆನಪಾಗುತ್ತದೆ ಸಿಟ್ಟು ಎಂಬದು ನಿಜವಾಗಿಯೂ ಒಂದು ಬಗೆಯ ಹುಚ್ಚೇ ಸರಿ. ನಾನು ಆ ಸಿಟ್ಟಿನ ಭರದಲ್ಲಿ ಅವಳಿಗೆ ಹೊಡೆದದ್ದೇನೋ ನಿಜ; ಆದರೆ ನನಗೆ ಇಂದಿಗೂ ಆ ಬಗ್ಗೆ ಪಶ್ಚಾತ್ತಾಪವಾಗುತ್ತಲಿದೆ. ನಾನು ಕಸುವಿನಿಂದ ಮೋರೆಯ ಮೇಲೆ ಹೊಡೆದೊಡನೆಯೇ ಆ ಹುಡುಗಿಯು ಗಟ್ಟಿಯಾಗಿ ಚೀರುತ್ತ ನೆಲಕ್ಕೆ ಬಿದ್ದಿತು; ಹಾಗು ಗಲ್ಲವನ್ನು ತಿಕ್ಕಿಕೊಳ್ಳಹತ್ತಿತು. ನಾನು ಮೊದಲೇ ಟೊಣಪನು! ಪರಾನ್ನಪುಷ್ಟನಾದ ವೈದಿಕ-ಭಟ್ಟನು! ಅಂಥ ನಾನು ಕಸುವಿನಿಂದ ಆ ಬಾಲಿಕೆಯ ಮೋರೆಯ ಮೇಲೆ ಹೊಡೆದದ್ದರಿಂದ ಅವಳು ತೀರ ಕಳವಳಗೊಂಡಳು! ಅವಳು ಹಾಗೆ ಬಿದ್ದು ಬಿದ್ದು ಅಳಹತ್ತಿರಲು, ಅದು ಆ ಹುಡುಗಿಯ ಮಹತ್ತರವಾದ ಅಪರಾಧವೇ ಆಗಿದ್ದು, ಆಕೆಗಾದ ಶಿಕ್ಷೆಯು ಆ ಅಪರಾಧಕ್ಕೆ ತಕ್ಕಂತೆಯೆ ಆಗಿರುವದೆಂದು ನೋಡುವವರಿಗೆ ಒಡೆದು ಕಾಣುವ ಹಾಗೆ ನಾನು ಅವಳ ಕಡೆಗೆ ಕಣ್ಣು ಕೆಕ್ಕರಿಸಿ ನೋಡುತ್ತ, ಕಾಲು ತೊಳೆಯಲಿಕ್ಕೆಂದು ಅಲ್ಲಿಂದ ಎದ್ದು ಹೋದೆನು.

ಹುಡುಗಿಯ ರೋದನವನ್ನು ಕೇಳಿ ರೊಟ್ಟಿ ಸುಡುತ್ತಿದ್ದ ನನ್ನ ಗೃಹಿಣಿಯು ರೊಟ್ಟಿಯನ್ನು ಹಂಚಿನ ಮೇಲೆ ಚಲ್ಲಲಿಕ್ಕೆ ಕೂಡ ವಿಸ್ಮೃತಿ ಹೊಂದಿ, ಆ ಹಸಿ ರೊಟ್ಟಿಯನ್ನು ಕೈಯಲ್ಲೇ ಹಿಡಕೊಂಡು ಹೊರಗೆ ಪಡಸಾಲೆಗೆ ಧಾವಿಸಿ ಬಂದು:-“ಚಂಪೀ, ಆದದ್ದಾದರೂ ಏನು?” ಎಂದು ಕೇಳಿದಳು; ಆದರೆ ನಾನೇ ಚಂಪೆಯನ್ನು ಹೊಡೆದಿದ್ದು, ನನ್ನ ಕ್ರೋಧಾವಿಷ್ಟ ಮುದ್ರೆಯು ಇನ್ನೂ ಶಾಂತವಾಗದಿದ್ದದ್ದನ್ನು ಕಂಡು, ಈ

ಖೋಡಿ ಹುಡುಗಿಯೇ ಏನೋ ಕಿಡಿಗೇಡಿತನ ಮಾಡಿರಬೇಕೆಂದು ಆಕೆಗನಿಸಿತು. ಅವಳಿಗೆ ಸಿಟ್ಟು ಮಾಡಿದರೆ ಅದರಿಂದ ನನ್ನ ಸಿಟ್ಟು ತುಸ ಕಡಿಮೆಯಾದರೆ, ಆದೀತೆಂಬ ತಿಳುವಳಿಕೆಯಿಂದ ಅವಳೂ ಚಂಪೆಯನ್ನೇ ಸಿಟ್ಟು ಮಾಡಹತ್ತಿದಳು. ಚಂಪೆಯು ತನ್ನ ಮಾತು ಕೇಳುವದಿಲ್ಲ, ಹೆಚ್ಚು ಆತತಾಯಿಯಾಗಿರುತ್ತಾಳೆಂದೋ ಇಲ್ಲವೆ ಆ ಹುಡುಗಿಯನ್ನು ನಾನು ಸಿಟ್ಟಿನಿಂದ ಹೊಡೆದೆನೆಂಬ ಸಂತಾಪದಿಂದೋ ಏನೋ ನನಗೆ ತಿಳಿಯಲಿಲ್ಲ; ಆದರೆ ಅವಳೂ ಅತ್ಯಂತ ಸಿಟ್ಟಿನಿಂದ ತಾನು ಮಡಿಯಿಂದಿರುವೆನೆಂಬದನ್ನು ಕೂಡ ಮರೆತು, ಹಲ್ಲು ಕಡಿಯುತ್ತ "ಖೋಡೀ, ಸುಮ್ಮನಿರುವೆಯೋ ಇಲ್ಲೋ?" ಎಂದೆಂದು ಚಂಪೆಯನ್ನು ಹೊಡೆಯಹತ್ತಿದಳು!

ಬೇಡಪ್ಪಾ, ಬೇಡ! ಅಂದಿನ ಆ ನೆನವು ಕೂಡ ಬೇಡ! ತನ್ನ ತಾಯಿಯು ತನ್ನನ್ನು ಹೊಡೆಯ ಹತ್ತಲು ಚಂಪೆಯು ಅಳುತ್ತ ಓಡುತ್ತ ಬಂದು ನನ್ನನ್ನು ಗಟ್ಟಿಯಾಗಿ ಅಪ್ಪಿಕೊಂಡಳು. ನಾನು ಈ ಮೊದಲು ತನ್ನನ್ನು ಹೊಡೆದುದನ್ನು ಆ ಬಾಲಿಕೆಯು ಮರೆತೇ ಬಿಟ್ಟಳು! ಆಗ ತನ್ನ ಮನಸ್ಸಿನ ಸ್ಥಿತಿಯೇನಾಯಿತೆಂಬದನ್ನೇನು ಹೇಳಲಿ? ಇಡೀ ಜನ್ಮದಲ್ಲಿ ಆ ದಿನವು ಬಹು ದುರ್ದಿನವಾಗಿ ಪರಿಣಮಿಸಿತು. ನನ್ನ ಅಂತಃಕರಣದಲ್ಲಿ ಕಸವಿಸಿಯಾಯಿತು. ನಾನು ಚಂಪೆಯನ್ನು ಬಿಗಿದಪ್ಪಿಕೊಂಡೆನು. ಅದರಿಂದ ನನ್ನ ಗೃಹಿಣಿಯು ಮತ್ತಿಷ್ಟು ಸಂತಪ್ತಳಾದಳು; ಮತ್ತು ನಮ್ಮ ಚಂಪೆಯು ಹೆಚ್ಚು ಬಿಕ್ಕಿ ಬಿಕ್ಕಿ ಅಳತೊಡಗಿದಳು ಆ ದೃಶ್ಯದಿಂದ ನನ್ನ ಅಂತಃಕರಣವು ಕರಗಿ ನೀರಾಗಲು, ನಾನೂ ಹೆಚ್ಚು ಸಂತಾಪಗೊಂಡು:—"ಎಲೇ, ನಡೆಯುತ್ತ? ನೀನು ಉನುಷ್ಯಳೋ ಅಥವಾ ಯಾವಳೊಬ್ಬ ರಾಕ್ಷಸಳಾಗಿರುವೆಯೊ?" ಎಂದೆಂದು ನಾನು ನನ್ನ ಗೃಹಿಣಿಯ ಮೇಲೆ ಕೋಪಗೊಂಡೆನು. ನನಗೊಬ್ಬನಿಗೇ ನನ್ನ ಮಗಳ ಮಾಯಾ-ಮಮತೆಗಳಿರುವಂತೆ ಆಗ ನನ್ನ ವರ್ತನವಾಗಿತ್ತು. ಎಲ್ಲಕ್ಕೂ ಮೊದಲು ನಾನೇ ಆ ಹುಡುಗಿಯನ್ನು ನಿಷ್ಕಾರಣವಾಗಿ ಹೊಡೆದದ್ದು ಉಳಿಯಿತು ಒತಟ್ಟಿಗೆ; ಮತ್ತು ನಾನೇ ನನ್ನ ಗೃಹಿಣಿಯನ್ನು ಸಿಟ್ಟು ಮಾಡಲಾರಂಭಿಸಿದೆನು. ಇರಲಿ. ಈ ಸಂಗತಿಯು ಕ್ಷುಲ್ಲಕವೇನೋ ನಿಜ; ಆದರೆ ಅದರ ಯೋಗದಿಂದ ನನ್ನ ಮಸ್ತಕವನ್ನಾಕ್ರಮಿಸಿದ್ದ ವೈರಾಗ್ಯದ ಮುತ್ತಿಗೆಯು ಮಾತ್ರ ತನ್ನಷ್ಟಕ್ಕೆ ತಾನೇ ಪರಿಹಾರವಾಗಿ, ಮೋಹವು ತನ್ನ ಆಕ್ರಮಣವನ್ನು ಮತ್ತೊಮ್ಮೆ ನನ್ನ ಮೇಲೆ ನಡೆಸಿತು.

ಆ ಮೇಲೆ ನಾನು ನೈವೇದ್ಯ-ವೈಶ್ವದೇವಗಳನ್ನು ಹೇಗಾದರೂ ಮಾಡಿ ನಾವೆಲ್ಲರೂ ಊಟಕ್ಕೆ ಕುಳಿತೆವು; ಆದರೆ ಊಟ ಮಾತ್ರ ಯಾರಿಗೂ ಹೋಗಲಿಲ್ಲ. ನನಗೆ ಪಶ್ಚಾತ್ತಾಪ, ನನ್ನ ಗೃಹಿಣಿಗೆ ಸಂತಾಪ, ಬಾಳನಿಗೆ ಅಂಜಿಕೆ ಮತ್ತು ಚಂಪೆಗೆ ಹೊಡತಗಳ ನೋವು ಇವೆಲ್ಲವುಗಳಿಂದ ಯಾರ ಮನಸ್ಸಿಗೂ ಸೊಗಸಿರಲಿಲ್ಲ. ಮಾಡಿದ ಅಡಿಗೆಯೆಲ್ಲವೂ ಬಹುತರವಾಗಿ ಉಳಿದು ಹೋಯಿತು! ತಾತ್ಪರ್ಯವೇನಂದರೆ, ಈ ಸಂಸಾರದಲ್ಲಿ ಒಬ್ಬ ಮನುಷ್ಯನು ತುಸ ಎಚ್ಚರಗೇಡಿಯಾಗಿ ಸಂತಾಪಗೊಂಡನೆಂದರೆ, ಮಿಕ್ಕವರಿಗೆಲ್ಲ ಅನ್ನ ಕೂಡ ರುಚಿ ಹತ್ತುವದಿಲ್ಲೆಂಬದು ಖಂಡಿತವು.

ಊಟವಾದ ಬಳಿಕ ನಾನು ವಾಮಕುಕ್ಷಿಗಾಗಿ ತುಸ ಅಡ್ಡಾದೆನು; ಆದರೆ ನಿದ್ರೆ ಮಾತ್ರ ಬರಲಿಲ್ಲ. ಚಂಪಿಗೆ ನಾನು ನಿಷ್ಕಾರಣವಾಗಿ ಹೊಡೆದದ್ದು, ಅವಳು ಕಳವಳದಿಂದ ಅತ್ತದ್ದು ಇದೆಲ್ಲವು ನನ್ನ ದೃಷ್ಟಿಯೆದುರಿಗೆ ಒಂದೇಸವನೆ ಬರಹತ್ತಿತು; ಏನು ಮಾಡಿದರೂ ಅದು ನನ್ನ ಕಣ್ಣಿಗೆ ಮರೆಯಾಗದಾಯಿತು. ಚಂಪೆಯ ಗಲ್ಲಗಳ ಮೇಲೆ ಮೂಡಿದ್ದ ನನ್ನ ಕೈ ಬೆರಳುಗಳ ಬಾಸಾಳಗಳು ನನಗೆ ಪ್ರತ್ಯಕ್ಷವಾಗಿ ಕಾಣುತ್ತಿದ್ದವು; ಆದರೆ ಆ ಹುಡುಗೆಯು ಅದನ್ನೆಲ್ಲ ಮರೆತು, ಒಳ್ಳೇ ಪ್ರೀತಿಯಿಂದ ನನ್ನೆಡೆಗೆ ಬಂದು ನನ್ನನ್ನು ಕುರಿತು:-"ಅಪ್ಪಾ, ನನಗೆ ಸರಪಳಿ-ಪೈಜಣಗಳನ್ನೂ ಬುಗುಡಿ-ಬೆಂಡವಾಲಿಗಳನ್ನೂ ಮಾಡಿಸಿರಿ. ಆ ಚಂದ್ರಿಗೆ ಅವರಪ್ಪನು ನಿನ್ನೆಯ ದಿನಸ ಮಾಡಿಸಿ ಕೊಡಲಿಲ್ಲವೆ? ಅಂದಬಳಿಕ ನೀವು ನನಗೇಕೆ ಮಾಡಿಸಿ ಕೊಡುವುದಿಲ್ಲ?" ಎಂದು ಕೇಳಿದಳು. ನಾನು ಆಕೆಯ ಆ ಮಾತುಗಳನ್ನು ಕೇಳಿ ಕೇವಲ ಸ್ತಂಭಿತನಾದೆನು. ನನ್ನ ದೃಷ್ಟಿಯು ಆಕೆಯ ಗಲ್ಲಗಳ ಮೇಲೆ ಒಡೆದು ಕಾಣಿಸುವ ಆ ನನ್ನ ಕೈ ಬೆರಳಿನ ಬಾಸಾಳುಗಳ ಕಡೆಗೇ ನೆಟ್ಟಿತ್ತಾದ್ದರಿಂದ ನನ್ನ ಅಂತಃಕರಣವು ತೀರ ಉಕ್ಕೇರಿ ಬಂದಿತು. ನಾನು ಏನೂ ಉತ್ತರ ಕೊಡದೆಯಿದ್ದದ್ದನ್ನು ಕಂಡು ಚಂಪೆಯೇ ಮತ್ತೆ:-"ಅಪ್ಪಾ, ಇಂದಿಲ್ಲದಿದ್ದರೂ ನಾಗರಪಂಚಮಿಗಾದರೂ ಮಾಡಿಸುವಿರಾ?" ಎಂದು ಕೇಳಿದಳು. ಅದಕ್ಕೆ ಏನು ಉತ್ತರವನ್ನೀಯಬೇಕೆಂಬದು ನನಗೆ ಸೂಚಿಸಲಿಲ್ಲ. ದೇವರೇ! ಈ ಹುಡುಗೆಯ ಬಗ್ಗೆಯಾದರೂ ನಿನಗೆ ದಯೆಯುಂಟಾಗಲೆಂದು ನಾನು ಮನಸ್ಸಿನಲ್ಲೇ ಅಂದುಕೊಂಡು, ಚಂಪೆಯ ಬೆನ್ನ ಮೇಲೆ ಕೈಯಾಡಿಸುತ್ತ:—"ತಂಗೀ, ನಿನಗೆ ಬೇಗನೆ ಸರಪಳಿಗಳನ್ನು ಮಾಡಿಸಿ ಕೊಡುತ್ತೇನವ್ವಾ. ಸದ್ಯಕ್ಕೆ ನನ್ನ ಬಳಿಯಲ್ಲಿ ದುಡ್ಡಿಲ್ಲ. ದೇವರಿಗೆ ನೀನೂ ಬೇಡಿಕೊ. ನನ್ನ ಬಗ್ಗೆ ದೇವರಿಗೇನೂ ದಯೆಯುಂಟಾಗುವದಿಲ್ಲ. ನಾನು ಅಪೇಕ್ಷಿಸಿದುದನ್ನು ಕೊಡಬಾರದೆಂದು ಆತನು ಸಂಕಲ್ಪ ಮಾಡಿಕೊಂಡಿರುತ್ತಾನೋ ಏನೋ ತಿಳಿಯದು!" ಎಂದು ನಾನು ಹೇಳಲು, ನನ್ನ ಆ ಮಾತಿನ ಅರ್ಥವು ಪಾಪ! ಆ ಅಜ್ಞ ಬಾಲಿಕೆಗೇನು ತಿಳಿಯಬೇಕು?

"ಅದೇನೂ ಇಲ್ಲ; ನಿಮ್ಮ ದುಡ್ಡಿನ ಚೀಲದಲ್ಲಿ ಇಷ್ಟು ದುಡ್ಡುಗಳಿವೆಯಲ್ಲ! ಅವುಗಳಿಂದ ಮಾಡಿಸಿಕೊಡಿರಿ, ನನಗೆ ಸಂಪಳಿಯನ್ನು. ನಿಮ್ಮ ಹತ್ತರ ಎಲ್ಲವೂ ಇದೆ. ನನಗೆ ಬುಂಕಿಯೂ ಬೇಕು; ನಾಗಮುರಿಗೆಯೂ ಬೇಕು. ಅಪ್ಪಾ, ನೀವು ಅವುಗಳನ್ನು ಮಾಡಿಸಿಕೊಡುವಿರೋ ಇಲ್ಲವೊ" ಹೀಗೆ ಚಂಪೆಯು ನುಡಿಯುತ್ತ ನನ್ನ ಮೈ ಮೇಲೆ ಹೊರಳಾಡಹತ್ತಿದಳು. ನಾನು ನನ್ನ ಮನಸ್ಸಿನಲ್ಲಿ ನಮ್ಮ ಅಷ್ಟದಾರಿದ್ರ್ಯವನ್ನು ನೆನಿಸಿ ಸಂತಾಪಿಸುತ್ತಿದ್ದೆನು; ಹಾಗು ಅದರಿಂದ ಒಂದು ಬಗೆಯ ನಿರಾಶೆ ಹೊಂದುತ್ತಿದ್ದೆನು.

ಇಷ್ಟರಲ್ಲಿ ನಾನು ಮತ್ತೆ ಸಿಟ್ಟಾಗಿ ಚಂಪೆಯನ್ನು ಹೊಡೆಯುವೆನೋ ಏನೋ ಎಂಬ ಮನದೊಳಗಿನ ಅಂಜಿಕೆಯಿಂದ ಮತ್ತು ಬಹಿರಂಗದಲ್ಲಿ ಆ ಹುಡುಗೆಯು ಹೀಗೆ ಕೇಳುವ್ವದ. ಸರಿ... [illegible] ..., ನನ್ನ ಗೃಹಿಣಿಯು ಸಿಟ್ಟ

ನಿಂದ: –"ಚಂಪೀ, ಸಾಕು. ಸಾಕು ಏಳಿನ್ನು. ನಡೆ ಒಳಗೆ ಅಕ್ಕಿಯು ಹಸನಮಾಡ ಲಿಕ್ಕೆ. ನನಗೆ ಅದು ಬೇಕು-ನನಗೆ ಇದು ಬೇಕು ಎಂದು ಒಂದೇಸವನೆ ರಿಪಿ-ರಿಪಿ ಹಚ್ಚಿರುತ್ತಾಳೆ, ನೀವೊಳ್ಳೇ ಭಾಗ್ಯಶಾಲಿಗಳಾಗಿಯೇ ಹುಟ್ಟಿರುತ್ತೀರೇನು? ಪೂರ್ವ ಜನ್ಮಗಳಲ್ಲಿ ದೇವರಿಗೆ ಕೊಟ್ಟು ಬಂದಿದ್ದರೆ ಈಗ ಅವು ಸಹಜವಾಗಿ ಸಿಗಬಹುದಾಗಿತ್ತು. ಈ ಖೋಡಿಗಳೆಲ್ಲವೂ ಹೇಗೆ ಹೀಗೆ ದರಿದ್ರಗಳು ಹುಟ್ಟಿ ಬಂದವೋ ಅದಾರಿಗೆ ಗೊತ್ತು? ಒಬ್ಬರದಾದರೂ ಪುಣ್ಯಸಂಚಯವಿರಬೇಕು! ನಮ್ಮ ಮನೆಯೊಳಗೆ ಸೇರಿ ರುವವರೆಲ್ಲರೂ ಒಂದೇ ವರ್ಗದವರು!" ಹೀಗೆ ಗುಣುಗುಟ್ಟುತ್ತ, ಚಂಪೆಯನ್ನು ಮುಂದೆ ಹಾಕಿಕೊಂಡು ಸಿಟ್ಟಿನಿಂದಲೇ ಅವಳು ಒಳಗೆ ಹೋದಳು

ನಾನು ಮತ್ತೆ ಏಕಾಕಿಯಾದೆನು; ಆಲೋಚನೆಗಳು ಮತ್ತೆ ನನ್ನನ್ನು ಸುತ್ತು ವರಿದವು! ಆ ಮೇಲೆ ನಾನು ಪೋತರವನ್ನು ಹೊತ್ತುಕೊಂಡು ನಿದ್ದೆಯೇನಾದರೂ ಬರುವದೇನೆಂದು ನಿರೀಕ್ಷಿಸತೊಡಗಿದೆನು; ಆದರೆ ನಿದ್ದೆಯೇಕೆ ಬಂದೀತು? ಚಿಂತೆಯು ಯಾವಾತನನ್ನು ತನ್ನ ಸ್ವಾಧೀನಪಡಿಸಿಕೊಂಡಿರುವುದೋ, ಆತನಿಗೆ ಎಲ್ಲಿಯ ನಿದ್ದೆಯು? ಎಲ್ಲಿಯ ವಿಶ್ರಾಂತಿಯು! ನಾನು ಅಡ್ಡಾಗಿರುವಾಗಲೇ ಇದುವರೆಗೆ ಸಂದುಹೋದ ನನ್ನ ಆಯುಷ್ಯದ ದಿನಗಳನ್ನು ನೆನಿಸುತ್ತ, ದೇವರ ದಯೆಯ ಹಾಗು ಭಗವಂತನ ಲೀಲೆಗಳೊಳಗಿನ ಚಮತ್ಕಾರಗಳ ವಿಚಾರಮಾಡಹತ್ತಿದೆನು 'ಬೇಡಪ್ಪಾ ಈ ಜೀವವು; ಹಾಗು ಬೇಡಪ್ಪಾ ಈ ಜೀವನವು,' ಎಂಬ ಪ್ರಸಂಗಗಳು ಎಷ್ಟೋಸಾರೆ ನನಗೆ ಉಂಟಾಗಿ ದ್ದವು; ಆದರೆ ಅವೆಲ್ಲವುಗಳು ಈಗ ನನಗೆ ಚೆನ್ನಾಗಿ ನೆನಪು ಕೂಡ ಆಗದಾಗಿದ್ದವು. ಇದು ವರೆಗೆ ಗತಿಸಿದ ದಿನಗಳೆಂದರೆ, ಒಂದು ದೀರ್ಘವಾದ ಸ್ವಪ್ನವೆನಿಸಿ ಆ ಬಗ್ಗೆ ಕೊಂಚವೂ ವಿಧಿನಿಷೇಧವೆನಿಸದಾಯಿತು. ಅಂದಮೇಲೆ ಇನ್ನು ವರ್ಷೇರಡು ವರ್ಷ ಗಳಿಗೆ, ಅಷ್ಟು ದೂರವೇಕೆ ತಿಂಗಳೆರಡು ತಿಂಗಳಿಗೆ ಕೂಡ ಇಂದು ನನಗನಿಸುತ್ತಿರುವ ಈ ನನ್ನ ಕಠಿಣ ಸ್ಥಿತಿಯು ವಿಶೇಷಬಗೆಯದಲ್ಲವೆಂದು ನಾನೇ ಅನ್ನಲಿಕ್ಕಿಲ್ಲೆಂದು ಹೇಗೆ ಊಹಿಸಬೇಕು?

ಈ ತರದ ಬಗೆಬಗೆಯ ತಿಳುವಳಿಕೆಯಿಂದ ನನಗೆ ಆಗ ತುಸ ಸಮಾಧಾನವಾ ಯಿತು. ಪ್ರಸಂಗಗಳು ಒಂದರಮೇಲೊಂದು ಬರುತ್ತಲೇ ಇವೆ; ಅಡಚಣಿಗಳುಂಟಾ ಗುತ್ತವೆ; ಸಂಕಟಗಳಂತೂ ಬರತಕ್ಕವುಗಳೇ; ಆದರೆ ಅವುಗಳೆಲ್ಲ ಕೇವಲ ಬೆದರು ಗಳೇ ಸರಿ. ಅವುಗಳನ್ನು ಕಂಡು, ಅಂಜಿದರೆ ಮಾತ್ರ ಅವು ಮೈ ಮೇಲೆ ಬರುತ್ತವೆ; ಆದರೆ ಅವುಗಳನ್ನು ನಾವೇ ಬೆದರಿಸಹತ್ತಿದರೆ, ಅವು ಹಿಂಗಾಲೊಳಗೆ ಬಾಲಗಳನ್ನು ಸೇರಿಸಿಕೊಂಡು ಓಡತೊಡಗುತ್ತವೆ! ಎಂಥ ದಿನಗಳು ಬಂದರೂ ಅಂಜಬಾರದು, ಧೈರ್ಯಸ್ಥೈರ್ಯದಿಂದ ಪ್ರಸಂಗಗಳಿಗೆ ಎದುರಾಗಬೇಕು. ಕರ್ಮಭೋಗದೊಳ ಗಿಂದ ಎಂದೂ ಯಾರೂ ಬಿಡುಗಡೆ ಹೊಂದಿಲ್ಲರು! ಯುಧಿಷ್ಠಿರ, ನಳ, ರಾಮ ಚಂದ್ರ ಮುಂತಾದ ಮಹಾನ್ ಮಹಾನ್ ವ್ಯಕ್ತಿಗಳಿಗೂ ವನವಾಸದಂತಹ ಕಷ್ಟವು ತಪ್ಪಿಲ್ಲ. ಅಂದ ಬಳಿಕ ಈ ಸೊಟ್ಟ ಗುರು-ಭಟ್ಟನ ಪಾಡೇನು?

ಈ ಬಗೆಯಾಗಿ ನಾನು ಮನಸ್ಸಿಗೆ ಹಲವು ತರದ ವಿವೇಕವನ್ನು ಬೋಧಿಸಿದೆನು; ಆದರೆ ಇನ್ನು ನಮ್ಮ ಚಂಪೆಗೆ ಮನೆತನವನ್ನೆಲ್ಲಿ ನೋಡಲಿ? ದೇವರು ನನ್ನ ಹಂಬಲವನು ಲಾಲಿಸುವುದಿಲ್ಲ; ನನ್ನ ಗೃಹಿಣಿಯು ನನ್ನ ಮೇಲೆ ಸಿಟ್ಟಾಗಿರುವಳು; ಮೋರಪ್ಪನೂ ಆತನ ಯಜಮಾನನೂ ನಿರಾಶೆಗೊಂಡದ್ದರಿಂದ ಇನ್ನು ಅವರು ನನ್ನ ಛಲನಕ್ಕೆ ಕೂಡ ತೊಡಗುವವರು; ನಾಳೆ ನಮ್ಮ ಮನೆಯ ಒಲೆಯು ಹೊತ್ತುವ ಬಗೆ ಹೇಗೆ? ಇಂದು ನನ್ನ ಬಳಿಯಲ್ಲಿ ಕೇವಲ ಎಂಟು ಹತ್ತು ಆಣೆಗಳೇ ಸಿಲ್ಕು ಇದ್ದವು ಕೈಗಡ-ಕಟ್ಟುಗಡಗಳನ್ನಾದರೂ ಈ ಪರಸ್ಥಳದಲ್ಲಿ ನನಗೆ ಕೊಡುವವರಾರು? ಹಣವನ್ನು ಸಾಲ ಕೊಡುವವರು ತಮ್ಮ ಹಣವು ಮರಳಿ ಬರಬೇಕೆಂದು ಇಚ್ಛಿಸದೆ, ಅದಕ್ಕೆ ಪ್ರತಿಯಾಗಿ ಲಾಭದಾಯಕವಾದ ಯಾವುದೊಂದು ವಸ್ತು-ಒಡವೆಯನ್ನು ಬಯಸುವ ಸದಿಚ್ಛೆಯವರೇ! ಆದರೆ ನನ್ನಲ್ಲೇನು? "ಊರ್ಧ್ವಾಯ್ಯೈ ದಿಶೇ ಬ್ರಹ್ಮಣೇ ನಮಃ!" ಎಂಬ ಸ್ಥಿತಿಯು! ನನಗೆ ಮಿತ್ರರಾದರೂ ಎಲ್ಲಿರುವರು? ಮತ್ತು ಅವರು ನನಗೆ ಉಪಯೋಗ ಬೀಳುವ ಬಗೆ ಹೇಗೆ? ನನ್ನದೀಗ ನಡೆಯುವ ಕಾಲವಲ್ಲದ್ದರಿಂದ ನನ್ನ ಬಳಿಗೆ ಬರುವವರಾದರೂ ಯಾರು? ಇಂಥ ಪ್ರಸಂಗದಲ್ಲಿ ಮನೆಯೊಳಗಿನವರಾರಾದರೂ ಬೇನೆ ಬಿದ್ದರಂತೂ ಮುಗಿದೇ ಹೋಯಿತು!

ಈ ಪ್ರಕಾರದ ಯೋಚನೆಯಲ್ಲಿ ನಾನು ತೊಡಗಿರುವಾಗ ನನ್ನ ಕಂಠವು ಬಿಗಿದು ಬಂತು; ಹಾಗು ಭಗವಂತನನ್ನು ಅಂತಃಕರಣ ಪೂರ್ವಕವಾಗಿ ಮನಸ್ಸಿನಲ್ಲಿಯೇ ಪ್ರಾರ್ಥಿಸತೊಡಗಿದೆನು: "ಜಗದೀಶಾ, ಜಗನ್ನಾಯಕಾ! ನೀನು ಕರುಣಾರ್ಣವನೆಂದೂ ದಯಾಸಾಗರನೆಂದೂ ಹೊಗಳಿಸಿಕೊಳ್ಳುತ್ತಿರುತ್ತೀ. ಇಡೀ ಚರಾಚರ ಬ್ರಹ್ಮಾಂಡಕ್ಕೆ ನೀನೇ ಒಡೆಯನು; ಹೀಗಿದ್ದು ಈ ಯಃಕಶ್ಚಿತ್ ಪಾಮರನ ಮೇಲೆ ನಿನ್ನ ರೋಷವಿಷ್ಟೇಕೆ? ನೀನು ಅನಾಥರ ನಾಥನು. ಅಂದಮೇಲೆ ನೀನು ಇದುವರೆಗೆ ನನ್ನನ್ನು ಮರೆತದ್ದೇಕೆ? ನಾನು ಅನಾಥನೇ ಅಲ್ಲವೆಂದು ನಿನ್ನ ತಿಳುವಳಿಕೆಯಾಗಿದೆಯೇನು? ಪರಮೇಶ್ವರಾ, ಈ ದೇಹದ ಅವಯವಗಳೆಲ್ಲ ನಿನ್ನ ದೇಣಗಿಯು. ಈ ದೇಹವೇ ನಿನ್ನ ಕೃಪೆಯ ಫಲವು. ಇದುವರೆಗೆ ಹೇಗಾದರೂ ನನ್ನನ್ನು ಸಂರಕ್ಷಿಸಿ, ಈಗ ನಡು ಬಾವಿಯಲ್ಲಿ ಹೀಗೆ ಹಗ್ಗ ಕೊಯ್ಯಲಿಕ್ಕೆ ದೇವಾ, ನೀನು ಅದೇಕೆ ಪ್ರವೃತ್ತನಾಗಿರುತ್ತೀ? ನಾನು ನಿನ್ನ ಯಾವ ಅಂಥ ಅಪರಾಧ ಮಾಡಿರುತ್ತೇನೆ? ಒಂದುವೇಳೆ ನನ್ನಿಂದ ಅಪರಾಧವು ಘಟಿಸಿದ್ದರೂ ನಾರಾಯಣಾ, ನಿನ್ನ ಹೊರತು ಅದನ್ನು ಕ್ಷಮಿಸಲಿಕ್ಕೆ ಮತ್ತಾರು ಸಮರ್ಥರಿರುತ್ತಾರೆ? ನನ್ನನ್ನು ಈ ಸಂಕಟದಿಂದ ಆದಾರು ಪಾರ ಮಾಡುವವರು? ನಾನು ಯಾರಿಗೆ ಶರಣಾಗತನಾಗಲಿ?"

ಈ ಬಗೆಯಾಗಿ ನಾನು ಮನಸ್ಸಿನಲ್ಲಿ ದೇವರನ್ನು ಕುರಿತು ಪ್ರಾರ್ಥಿಸುತ್ತಿರುವಾಗಲೇ ನನಗೆ ತುಸ ಜಂಪು ಹತ್ತಿತು ಆ ನಿದ್ರಾದೇವಿಯ ಅನುಗ್ರಹದ ಮೂಲಕ ಆಗ ನಾನು ನನ್ನ ಎಲ್ಲ ಸಂಕಟಗಳನ್ನೂ ಮರೆತೆನು. ನಿದ್ರೆಯೆಂದರೆ, ದೇವರ ಒಂದು ಬಗೆಯ ಕೃಪೆಯೇ ಸರಿ. ಈ ಸಂಸಾರದಲ್ಲಿ ಈಶ್ವರನೂ ಈಶ್ವರನ ಮೇಲಿನ ನಂಬಿ

ಗೆಯೂ ಇರುತ್ತದೆಂದೇ ವಿಹಿತವಾಗಿದೆ. ಅದಿಲ್ಲದಿದ್ದರೆ ಜೀವವು ಕಸವಿಸಿಗೊಳ್ಳು ತ್ತಿತ್ತು. ಸಂಕಟಕಾಲದಲ್ಲಿ ಮನಸ್ಸು ಬಹಳ ಗೊಂದಲಕ್ಕೀಡಾಗುತ್ತದೆ. ಆಗ ದೇವರ ಪ್ರಾರ್ಥನೆ ಹಾಗು ದೇವರು ತನ್ನನ್ನು ಉಪೇಕ್ಷೆ ಮಾಡಲಾರನೆಂಬ ಭರವಸೆ ಇವು ಗಳು ತನ್ನ ಮನಸ್ಸನ್ನು ಗಾಬರಿಪಡಗೊಡುವದಿಲ್ಲ. ದೇವರು ಹಾಗು ಆತನ ಪರಮ ಕಾರುಣಿಕತೆಯು ನಂಬಿಗೆಯು ಎಷ್ಟು ಹೆಚ್ಚು-ಕಡಿಮೆ ಇರುವದೋ, ಅಷ್ಟು ಹೆಚ್ಚು-ಕಡಿಮೆ ಸುಖ-ದುಃಖಗಳು ತಮ್ಮ ಪಾಲಿಗೆ ಬರತಕ್ಕವುಗಳೆಂಬದು ನನಗೆ ಚೆನ್ನಾಗಿ ಅವಗತವಾಗಿತ್ತು; ಯಾಕಂದರೆ ದೇವರು ಹಾಗು ಆತನ ಕಾರುಣ್ಯ ಇವು ಗಳ ಮೇಲೆ ನನ್ನ ನಂಬಿಗೆಯಿರದಿದ್ದರೆ, ನಾನು ಅನುಭೋಗಿಸುತ್ತಿರುವ ಕಷ್ಟಗಳಿಗಿಂತ ಹೆಚ್ಚಿನ ಕಷ್ಟಗಳಿಗೆ ನಾನು ಗುರಿಯಾಗಬೇಕಾಗುತ್ತಿತ್ತು. ನಿಜವಾಗಿ ಯೋಚಿಸಿದರೆ ದೇವರ ಮೇಲೆ ನಂಬಿಗೆಯಿಡದೆ ಜೀವನವನ್ನು ಕ್ರಮಿಸುವದೆಂದರೆ, ಅದೊಂದು ಬಹು ದೊಡ್ಡ ಯಾತನೆಯೇ ಸರಿ. ಇನ್ನು ಎಲ್ಲ ಕಡೆಯಿಂದಲೂ ಹುರುಪಳಿಸುತ್ತಿರುವಾಗ ಈಶ್ವರೀ ಯೋಜನೆ, ಆತನ ಭಕ್ತವಾತ್ಸಲ್ಯ ಮುಂತಾದವುಗಳಲ್ಲಿಯ ನಂಬಿಗೆಯು ಹಾರಿ, ದೇವರ ಬಗ್ಗೆ ಕ್ಷಣಿಕವಾದ ಹತಾಶಯುಕ್ತ ದ್ವೇಷವು ಒಮ್ಮೊಮ್ಮೆ ಉಂಟಾ ಗುವದೇನೋ ನಿಜವು; ಆದರೆ ಸುತ್ತಮುತ್ತಲು ಕಣ್ಣಿಗೆ ಬೀಳುವ ಆ ದೇವರ ಕೌತುಕ ವನ್ನು ನೋಡಹತ್ತಿದರೆ, ನಮ್ಮ ತಿಳುವಳಿಕೆಯೇ ತಪ್ಪು. ದೇವರು ಯಾವಾಗಲೂ ಏನು ಮಾಡುತ್ತಿರುವನೋ ಅದೆಲ್ಲವೂ ಮನುಷ್ಯಮಾತ್ರರ ಕಲ್ಯಾಣಕ್ಕಾಗಿಯೇ. ತೀರ ದುಃಸಹವಾದ ಸಂಕಟವೆಂಬ ಪರ್ವತದೊಳಗಿಂದಲೂ ಸುಖ-ಸಮಾಧಾನದ ಸ್ವಚ್ಛನೀರಿನ ಸಣ್ಣಸಣ್ಣ ಪ್ರವಾಹಗಳನ್ನು ಆ ಸಚ್ಚಿದ್ಘನನು ತೋರಿಸ ಬಲ್ಲನು. ನಾವು ಬೇಡುವ, ಇಚ್ಛಿಸುವ ಅಥವಾ ಇರಬೇಕೆಂದು ಧಡಪಡಿಸುವ ಆ ಸ್ಥಿತಿಯನ್ನು ಇಲ್ಲವೆ ಆ ಪದಾರ್ಥಗಳನ್ನು ನಮಗೆ ದೊರೆಯಗೊಡುವದು ಇಷ್ಟವಲ್ಲೆಂದು ಆ ಜಗನ್ನಿಯಾಮ ಕನಿಗೆ ಅನಿಸುತ್ತಿರುವದರಿಂದಲೇ ಆತನು ಅವುಗಳನ್ನು ನಮಗೆ ದೊರೆಯಗೊಡುವು ದಿಲ್ಲ ಚಿಕ್ಕ ಪುಟ್ಟ ಕ್ರಿಮಿ ಕೀಟಕಗಳನ್ನು ಮೊದಲು ಮಾಡಿಕೊಂಡು, ಮನುಷ್ಯ ಪ್ರಾಣಿಯ ವರೆಗೆ ಎಲ್ಲರ ಚಿಂತೆಯನ್ನು ವಹಿಸುವ ಆ ಭಗವಂತನು ನನ್ನ ಛಲನ ವನ್ನು ಒಳ್ಳೇ ಕಠೋರ ರೀತಿಯಿಂದ ಮಾಡುತ್ತಿರುವನೆಂದು ನಾನು ಬೇಕಾದರೆ ತಿಳಕೊಳ್ಳಬೇಕು; ಆದರೆ ಒಮ್ಮೊಮ್ಮೆ ಕಲಿಸುವದಕ್ಕೆಂದು, ಮತ್ತೊಮ್ಮೆ ಅನು ಭವವುಂಟಾಗುವದಕ್ಕೆಂದು ಮತ್ತು ಯಾವಾಗಲೂ ನಮಗೆ ಕಲ್ಯಾಣವಾಗ ಬೇಕೆಂದು ದೇವರು ಮನುಷ್ಯನಿಗೆ ಅನಿಷ್ಟವೆನಿಸುವ ಸಂಗತಿಯನ್ನೂ ಸಂಕಟಗಳನ್ನೂ ಉಂಟುಮಾಡುತ್ತಿರುತ್ತಾನೆಂಬದಕ್ಕೆ ಸಂದೇಹವಿಲ್ಲ.

ಭಗವಂತನು ಜಗತ್ತಿಗೆ ತಂದೆಯು; ನಾವೆಲ್ಲರೂ ಆತನ ತಿಳಿಗೇಡಿ ಹುಡು ಗರು; ಆದರಿಂದ ಆಗಾಮಿ ಕಾಲದ ನಮ್ಮ ಕಲ್ಯಾಣದ ಸಲುವಾಗಿ ಯಾವುದೊಂದು ಪಾಠವನ್ನು ಕಲಿಸುತ್ತಿರುವಾಗ, ಒತ್ತಾಯದಿಂದ ಪಾಠಮಾಡಿಸುವ ಶಿಕ್ಷಕನಂತೆ ಆತನು ನಮ್ಮನ್ನು ನಡೆಸಿಕೊಳ್ಳುತ್ತಿರಬಹುದು; ಹೀಗಿದ್ದರೂ ಆತನ ಕೃತಿಯಲ್ಲಿ

ಅನ್ಯಾಯವೇನು? ಗಿಡ-ಮರಗಳು ಗಾಳಿಯಿಂದ ಅಲ್ಲಾಡುತ್ತವೆ. ಆಗ ಅವುಗಳು ಯಾವುದೋ ಸಂಕಟಕ್ಕೀಡಾದವೆಂದು ನೋಡುವವರಿಗೆ ಆಗಾಗ್ಗೆ ಅನಿಸುವದು; ಆದರೆ ಅದರಿಂದ ಅವುಗಳ ಬೇರುಗಳು ಭೂಮಿಯೊಳಗೆ ಆಳವಾಗಿ ಹೊಕ್ಕು ಆ ಗಿಡ-ಮರಗಳಿಗೆ ಹೆಚ್ಚು ಬಲವೇ ಉಂಟಾಗುತ್ತದೆ. ಅದರಂತೆಯೇ ಈ ಲೋಕದೊಳಗೆ ಅನುಭವದಿಂದ ಕಾಣುವ ಸಂಕಟಗಳ ಸ್ಥಿತಿಯಾಗಿರಬೇಕು. ಈ ಬಗೆಯ ವಿಚಾರಗಳು ಪ್ರಸಂಗ ವಿಶೇಷದಲ್ಲಿ ಚೆನ್ನಾಗಿ ಮನದಟ್ಟಾಗುವದಿಲ್ಲವೆಂಬದಕ್ಕೆ ನಮ್ಮಗಳ ಮಂದಬುದ್ಧಿಯೇ ಕಾರಣವಾಗಿರಬೇಕು.

ನಾನು ಕೆಲ ಕ್ಷಣಗಳ ವರೆಗೆ ಸ್ವಸ್ಥವಾಗಿ ಮಲಗಿದೆನು; ಮತ್ತು ಅದರಿಂದ ಆ ಅಲ್ಪ ಕ್ಷಣಗಳ ವರೆಗಾದರೂ ನನ್ನ ತಲೆಯಲ್ಲಿ ತುಂಬಿದ್ದ ಆ ಚಿಂತಾಮಗ್ನತೆಯೂ, ವಿವಂಚನೆಯೂ ದೂರಾದವು; ಆದರೆ ಮನಸ್ಸಿಗೆ ಹತ್ತಿದ್ದ ನಿದಿಧ್ಯಾಸವು ಮಾತ್ರ ನಿದ್ರೆಯಲ್ಲಾದರೂ ತೊಲಗುವದೆಂತು? ಆ ನಿದ್ದೆಯಲ್ಲಿ ನನಗೊಂದು ಕನಸು ಬಿದ್ದಿತು. ಆ ಕನಸಿನಲ್ಲಿ ಮೋರಪ್ಪನು ತನ್ನ ಸಾವುಕಾರನ ಪರವಾಗಿ ನನಗೆ ಕೊಟ್ಟಿದ್ದ ಸಾಲವನ್ನು ಕೇಳಬಂದಿದ್ದನ್ನು ಕಂಡೆನು. ಆತನನ್ನು ಕಂಡ ಕೂಡಲೆ ನನ್ನ ಸಿಟ್ಟು ಅಂಗಾಲಿನಿಂದ ನಡುನೆತ್ತಿಯ ವರೆಗೂ ಉದ್ರೇಕಗೊಂಡಿತು! ಆದರೆ ಅದೆಲ್ಲವೂ ಕನಸಿನಲ್ಲೇ ಚಂಪೆಯ ಮದುವೆಯ ಸಲುವಾಗಿ ಒಡ್ಡಿದ ಅವರ ಬಲೆಯನ್ನು ನಾನು ಹಾಗೆ ಹರಿದೊಗೆಯಲು, ಅವರು ಆ ಸಾಲ-ಶೂಲದ ರೂಪದಿಂದ ನನ್ನ ಛಲನ ನಡೆಸಿದುದಕ್ಕಾಗಿ ನಾನು ಮೋರಪ್ಪನನ್ನು ಚನ್ನಾಗಿ ಹಳಿಯಹತ್ತಿದೆನು. ಕಟ್ಟಕಡೆಗೆ ನಾನು ಆತನಿಗೆ ಅಂದದ್ದೇನಂದರೆ:- "ಮೋರಪ್ಪಾ, ನಾಳಿನ ದಿನವು ಹೇಗೆ ನೀಗೀತು? ವಿಷ ಕೊಂಡು ತಿನ್ನಬೇಕೆಂದರೆ ಕೈಯಲ್ಲಿ ಕಾಸು ಸಹ ಇಲ್ಲ! ಈ ನನ್ನ ನಾಲ್ಕು ಜನ ಸಣ್ಣ-ಪುಟ್ಟ ಮಕ್ಕಳು-ಮರಿಗಳನ್ನು ನಾನು ಹೇಗೆ ಸಂರಕ್ಷಿಸಲಿ? ಇನ್ನೆರಡು ದಿನಗಳಿಗೆ ಅಕ್ಕಿ ತೀರುವವು.; ಆ ಮೇಲೆ ಮತ್ತೆ ಅಕ್ಕಿಯನ್ನು ಎಲ್ಲಿಂದ ಹಾಗು ಹೇಗೆ ತರಲಿ? ಎಂಬ ಆಲೋಚನೆಯಲ್ಲಿ ನಾನಿದ್ದೇನೆ; ಇಂಥ ಪ್ರಸಂಗದಲ್ಲಿ ನೀನು ದುಷ್ಕಾಲದಲ್ಲಿಯ ಅಧಿಕಮಾಸದಂತೆ ಇದೇನು ಮಾಡುವಿ?" ಮುಂತಾಗಿ ನಾನು ಕನಸಿನಲ್ಲಿಯೇ ಮಾತನಾಡುತ್ತಿರಲಿಕ್ಕೆ,

"ರೋಟೀ ತೇರೀ ಢೂಂಡತ ಆವೇ ಮನಮೇ ಪಾವ ವಿಶ್ರಾಮ |
ದಾನೇದಾನೇಪರ ಲಿಖಾ ಹ್ಯೆ ಖಾನೇವಾಲೇಕಾ ನಾಮ||"

ಎಂದು ಒದರುತ್ತ ಒಬ್ಬ ಬೈರಾಗಿಯು ನಮ್ಮ ಬಾಗಿಲಿಗೆ ಬಂದನು. ಆತನ ಆ ಸವಾಲಿನಿಂದ ನಾನು ಒಮ್ಮೆಲೆ ಎಚ್ಚತ್ತೆನು; ಹಾಗು ಕಣ್ತೆರೆದು ನೋಡುತ್ತೇನೆ, ಅಲ್ಲಿ ಮೋರಪ್ಪನೂ ಇಲ್ಲ-ಯಾರೂ ಇಲ್ಲ. ಅದೆಲ್ಲವೂ ಸ್ವಪ್ನವೇ ಆಗಿತ್ತು! ಆದರೆ ಯಾತರ ನಿದಿಧ್ಯಾಸವು ನನಗೆ ಹತ್ತಿತ್ತೋ ಅದೇ ಆ ವಿಚಾರವಾಗಿತ್ತು. ಇಷ್ಟರಲ್ಲಿ ಆ ಭಿಕ್ಷುಕನು ಮತ್ತೆ "ರೋಟೀತೇರೀ........ಖಾನೇವಾಲೇಕಾನಾಮ" ಮುಂತಾಗಿ ಮೊದಲಿನಂತೆ ಸವಾಲನ್ನಂದನು. ಆದನ್ನು ಕೇಳಿ ನಾನು ಈ ಬೈರಾಗಿಯನ್ನು ವುದು ನಿಜ

ವಿದೆ. ನಾನಾದರೂ ನನ್ನ ಮನಸ್ಸಿನ ತಳಮಳವನ್ನು ಬಿಟ್ಟು ಬಿಡಬೇಕೆಂದೆನು. ಇಷ್ಟರಲ್ಲಿ ನನ್ನ ಗೃಹಿಣಿಯು ಆತನಿಗೆ ಹಿಡಿಕಾಳು ಹಾಕಿ ಅವನನ್ನು ದಾರಿಗೆ ಹಚ್ಚಿದಳು.

ಭಿಕ್ಷುಕರಿಗೆ ಭಿಕ್ಷೆ ಹಾಕುವದೆಂದರೆ, ನನ್ನ ಜೀವದ ಸುತ್ತೇ ಬರುತ್ತಿತ್ತು. ಯಾಕಂದರೆ, ನಾವೇ ನಮ್ಮ ಹೊಟ್ಟೆಗಾಗಿ ಮನೆಮನೆಗೆ ತಿರಿದುಣ್ಣುತ್ತಿರಲು, ಈ ಆಗಂತುಕರಿಗೆ ಅದೆಲ್ಲಿಂದ ತಂದು ನೀಡಬೇಕು? ಬಿಕ್ಕೆಯು ಧಂದೆಯಾದ ನಮ್ಮ ಬ್ರಾಹ್ಮಣಿಕೆಯಿಂದ ನಮ್ಮ ಖರ್ಚು-ಕಂದಾಯಗಳು ನೀಗದ್ದರಿಂದ, ನಾವು ಸಾಲ-ಸಂಬಂಧಗಳಿಗೆ ಈಡಾಗಿದ್ದೇವೆ. ಅಂಥದರಲ್ಲಿ ಈ ಬಿಂಗರ ಮನೆಯ ತಟ್ಟುಗಳಂತಿರುವ ಭಿಕ್ಷುಕರ ಜೋಪಾಸನೆಯನ್ನು ನಾವೆಂತು ಮಾಡಬೇಕು? ಹೀಗೆ ನನಗೆ ಅನಿಸುತ್ತಿತ್ತು. ''ಯಾಚಕೋ ಯಾಚಕಂ ದೃಷ್ಟ್ವಾ ಶ್ವಾನವತ್ ಗುರ್ಗುರಾಯತೇ'' ಎಂಬಂತೆ ನನ್ನ ವೃತ್ತಿಯಾಗಿರದಿದ್ದರೂ, ಮನೆಯ ಬಾಗಿಲಿಗೆ ಬಂದವರಿಗೆಲ್ಲ ನಾವು ಭಿಕ್ಷೆ ನೀಡಹತ್ತಿದರೆ, ಒಂದೇ ವಾರದಲ್ಲಿ ಹೆಂಡಿರು-ಮಕ್ಕಳೊಡನೆ ನಾನೂ ಅವರೊಡನೆ ಹೋಗುವ ಪ್ರಸಂಗವೊದಗದಿರದು. ಅದಕ್ಕೆಂದೇ ನಾನು ಆ ಭಿಕ್ಷುಕರಿಗೆ ಅಷ್ಟು ಅಂಜುತ್ತಿದ್ದೆನು. ಬೇಡುವವರಾದ ನಮ್ಮಂತಹ ಹಲವು ಜನರು ಗಂಟು ಬಿದ್ದರೆ, ಕೊಡುವವನ ಗತಿಯೇನಾಗಬೇಕು? ಈ ಲೋಕದಲ್ಲ ಶ್ರೀಮಂತನಿಂದ ಬಡವನ ವರೆಗೂ, ಅಧಿಕಾರಿಗಳಿಂದ ಅನಧಿಕಾರಿಯವರೆಗೂ ಎಲ್ಲರೂ 'ಕೊಡು' ಎನ್ನುವವರೇ. 'ತಕ್ಕೊಳ್ಳಿ'ಂದೆನ್ನುವವರು ಕಾಣದಿರುವದು ಚಮತ್ಕಾರವಲ್ಲವೇ? ಹರಿದಾಸರು ಬಂದು ಕಥಾ-ಕೀರ್ತನಗಳನ್ನು ಮಾಡಿ ಈ ಲಕ್ಷ್ಮಿಯು ಮಹಾ ಚಂಚಲಳು, ದುಡ್ಡಿನ ಮೋಹವಿಡಕೂಡದು, ಪ್ರಪಂಚಸಾಗರದಲ್ಲಿ ಮುಳುಗಬೇಡಿರಿ ಮುಂತಾದ ವೇದಾಂತ-ಧಾದಾಂತಪರ ವಿಷಯಗಳನ್ನು ಹೇಳಿ, ಕಡೆಗೆ ತಮ್ಮ 'ಬಿದಾಗಿ'—ಕೀರ್ತನದ ಪ್ರತಿಫಲ ಕೊಡಿರೆಂದು ಕೇಳುತ್ತಾರೆ. ಪುರಾಣಿಕರಾದರೂ ಅದರಂತೆಯೇ. ಪೀಠಸ್ಥರಾದ ಶ್ರೀ ಶಂಕರಾಚಾರ್ಯರಂತಹ ಕೇವಲ ನಿಸ್ಪೃಹಿಗಳಾದ ಮಹನೀಯರಾದರೂ ಅದೇ ವರ್ಗದವರು! ರಾಷ್ಟ್ರಭಕ್ತ ದೇಶಭಕ್ತರ ಫಂಡು-ಗಿಂಡುಗಳ ಆಶಯವಾದರೂ ಅದೇ. ನಾವು ವೈದಿಕ ಬ್ರಾಹ್ಮಣರಂತೂ ಅದೇ ಕಸಬಿನವರು; ಅಂದರೆ ಒಟ್ಟಿನಲ್ಲಿ ಎಲ್ಲರ ಮತಲಬವೂ ಹೆರವರ ಬಳಿಯ ಧನ-ಧಾನ್ಯಗಳನ್ನು ತಮ್ಮ ಕಡೆಗೆ ಎಳಕೊಳ್ಳುವದೇ ಆಗಿರುತ್ತದೆ. ಅದರಿಂದಲೇ ನನಗೆ ಆ ಭಿಕ್ಷುಕರ ದರ್ಶನವಾದ ಕೂಡಲೆ ಪಿತ್ಥವು ತಲೆಗೇರುತ್ತಿತ್ತು. ಅದರಿಂದ ನಾನು ನನ್ನ ಗೃಹಿಣಿಯನ್ನು ಕುರಿತು:—''ಏನೇ, ನೀನು ಬಂದ ಬಂದವರಿಗೆಲ್ಲ ಹೀಗೆ ಭಿಕ್ಷೆ ನೀಡಹತ್ತಿದರೆ ನಮ್ಮಗಳ ಗತಿಯೇನು? ನಿಮಗೆ ಹೆಂಗಸರಿಗೇನು, ಧರ್ಮಬುದ್ಧಿಯು ಚಿಗಿಯುತ್ತದೆ! ಆದರೆ ಮುಷ್ಟಿ ಕಾಳು ಸಂಗ್ರಹಿಸಬೇಕಾದರೆ ನಾವೆಷ್ಟು ಕಷ್ಟಪಡಬೇಕಾಗುತ್ತದೆಂಬದು ನಿಮ್ಮ ಲಕ್ಷ್ಯಕ್ಕೆಲ್ಲಿ ಬರುತ್ತದೆ? ಎಲ್ಲರೂ ಧರ್ಮಾವತಾರಿಗಳೇ!''

ಅದಕ್ಕೆ ನನ್ನ ಗೃಹಿಣಿಯು ಸೌಮ್ಯರೀತಿಯಿಂದ:—''ಯಾವ ಕಾಲಕ್ಕೆ ಯಾವ ವೇಷದಿಂದ ಭಗವಂತನು ಬರುತ್ತಿರುತ್ತಾನೆಂಬದರ ನಿಯಮವಿಲ್ಲ. ಯಾರನ್ನೂ

ವಿನ್ಮುಖಿಗೊಳಿಸುವದು ಯೋಗ್ಯವಲ್ಲ; ಅಂತೆಯೇ ನಾಲ್ಕು ಕಾಳು ನೀಡಿದೆನು. ಅದರಲ್ಲೇನು ಅಂಥ ಅಪರಾಧನೆಂಬದು ನನಗಂತೂ ತಿಳಿಯದು. ನಿಮ್ಮ ವಯಸ್ಸು ಐವತ್ತರ ಮನೆಗೆ ಬಂದಿದ್ದರೂ ನೀವು ಇನ್ನೂ ಹೀಗೆ ಧರ್ಮಲಂಡರಾಗಿರುವದು ವಿಹಿತವೇ? ಇಂಥ ವಾಸನೆಯಿರಕೂಡದು. ಕಳೆದ ಜನ್ಮಗಳಲ್ಲಿ ನಾವು ಯಾವ ಪಾಪಗಳನ್ನು ಮಾಡಿರುವೆವೋ ಅದನ್ನು ಭೋಗಿಸಲಿಕ್ಕೆಂದು ಈ ಜನ್ಮದಲ್ಲಿ ಹೀಗೆ ದರಿದ್ರರಾಗಿ ಹುಟ್ಟಿರುತ್ತೇವೆ. ಮತ್ತೆ ಅಂಥ ಪಾಪಸಂಚಯದ ಯೋಜನೆಯೇಕೆ?''

ನನ್ನ ಗೃಹಿಣಿಯ ಆ ವೇದಾಂತವನ್ನು ಸಾಕು ಮಾಡುವ ಸಲುವಾಗಿ ನಾನು ನಡುವೇ ಗಟ್ಟಿಯಾಗಿ ಒದರಿ:—''ಸಾಕು-ಸಾಕು. ಎಲ್ಲವೂ ಗೊತ್ತಿದೆ'' ಎಂದೆನ್ನಲು, ಅವಳು ಸುಮ್ಮನಾದಳು. ಹಾಗು ಆ ಬಡನೆಯು ಮರುಮಾತನಾಡದೆ ಒಳಗೆ ಹೊರಟು ಹೋದಳು. ನಾನೂ ಸುಮ್ಮನೆ ಕುಳಿತೆನು. ನನ್ನ ಕಣ್ಣಿಗೆ ಮತ್ತೇನೂ ಕಾಣದೆ, ಈಗ ಮನೆಯಲ್ಲಿ ತೀರಿರುವ ಪದಾರ್ಥಗಳನ್ನು ಹೇಗೆ ತಂದು ಹಾಕಬೇಕೆಂಬದೇ ಕುಣಿಯುತ್ತಿತ್ತು. ಇಷ್ಟರಲ್ಲಿ ಭಗವಂತನ ಅಗಾಧವಾದ ಒಂದು ಲೀಲೆಯು ಘಟಿಸಿತು! ಭಗವನ್ಮಾಯೆಯ ಆಟವು ಅದಾರಿಗೆ ತಿಳಿಯುವದು?

---

## ೯ ಭಗವಲ್ಲೀಲೆ.




ಲೆ ಹೇಳಿದಂತೆ ನಾನು ಆ ಬಗೆಯ ವಿಚಾರಗಳಲ್ಲಿ ಆಸಕ್ತನಾಗಿರಲು, ಒಬ್ಬ ಗೃಹಸ್ಥನು ತನ್ನ ದೋತರದ ಸೆರಗಿನ ಕೆಳಗೆ ಏನನ್ನೋ ಮುಚ್ಚಿಕೊಂಡು ಬಂದು, ಸರ್ಪಪುರಿಯ ಗುರುಮಹಾರಾಜರ ಮನೆಯು ಇದೇ ಏನು? ಎಂದು ಕೇಳಿದನು. ಅದಕ್ಕೆ ನಾನು ಅದೇನು ಕೆಲಸವಪ್ಪಾ? ನಾನೇ ಆ ಗುರುಭಟ್ಟನು ನಿನ್ನೆದುರಿಗೆ ಕುಳಿತಿರುತ್ತೇನೆ, ಎಂದೆನ್ನಲು, ಆ ಆಗಂತುಕ ಗೃಹಸ್ಥನು ತನ್ನ ಶಲ್ಲೆಯ ಸೆರಗಿನ ಕೆಳಗಿನ ಬೆಳ್ಳಿಯ ತಬಕವನ್ನು ಹೊರಗೆ ತೆಗೆದು ನನ್ನ ಮುಂದಿರಿಸಿ, ಒಳ್ಳೇ ಮರ್ಯಾದೆಯಿಂದ ನನ್ನನ್ನು ಕುರಿತು:—ಮಹಾರಾಜರೇ, ನಮ್ಮ ಶೆಟ್ಟರು ಇವುಗಳನ್ನು ತಮಗೆ ಅರ್ಪಿಸಿ ಬರಬೇಕೆಂದು ಅಪ್ಪಣೆಯನ್ನಿತ್ತ ಮೇರೆಗೆ ತಂದಿರುತ್ತೇನೆ. ಸ್ವೀಕರಿಸಬೇಕು. ಅವರು ಸಾಯಂಕಾಲಕ್ಕೆ ಸ್ವತಃ ಬಂದು ತಮ್ಮನ್ನು ಕಾಣುವರಂತೆ, ಎಂದಂದನು. ಅಷ್ಟರಲ್ಲಿ ನನ್ನ ಗೃಹಿಣಿಯು ಅಲ್ಲಿಗೆ ಬಂದು:-''ಯಾರು, ಎಲ್ಲಿಂದ ಬಂದಿರಿ, ಏನು ತಂದಿರಿ'' ಎಂದು ಆ ಆಗಂತುಕನನ್ನು ಕೇಳಲಾರಂಭಿಸಿದಳು. ಆಗ ನಾನು ಕಣ್ಣೆತ್ತಿ ಅವಳ ಕಡೆಗೆ ದುರದುರನೆ ನೋಡಿದ ಕೂಡಲೆ ಅವಳು ಸುಮ್ಮನೆ ಒಳಗೆ ಹೊರಟು ಹೋದಳು.

ಆ ತಬಕದಲ್ಲಿ ಒಂದು ನಾಗಪುರದಂಚಿನ ಉಡುವ ಪಂಜೆಗಳ ಜೊತೆಯೂ,

ಒಂದು ಇಳಕಲ್ಲ ನಮೂನೆಯ ಟೋಪು ತೆನಿ ತಿರುವಿದ ಸೆರಗಿನ ರೇಶ್ಮಿಯ ಭಾರೀ ಬೆಲೆಯ ಸೀರೆಯೂ, ಒಳ್ಳೇ ಖಣವೂ ಇದ್ದು, ಅವುಗಳ ಬಳಿಯಲ್ಲಿ ಇಪ್ಪತ್ತೈದು ರೂಪಾಯಿಗಳೂ ಇರಿಸಲ್ಪಟ್ಟಿದ್ದವು! ಅಲ್ಲದೆ ತಾಂಬೂಲ, ಅರಿಷಿಣ-ಕುಂಕುಮದ ಚೀಟುಗಳು, ಸುಗಂಧದ್ರವ್ಯಗಳೂ ಇದ್ದವು. ಅವುಗಳನ್ನು ತಬಕದೊಳಗಿಂದ ಎತ್ತಿಕೊಳ್ಳುವ ಮೊದಲು ನಾನು ಆ ಗೃಹಸ್ಥನನ್ನು ಕುರಿತು:—"ನಿಮ್ಮ ಶೆಟ್ಟರು ಇವುಗಳನ್ನೇಕೆ ಕಳಿಸಿರುತ್ತಾರಪ್ಪಾ? ನಿಮ್ಮ ಶೆಟ್ಟರೆಂದರೆ, ಆ ನಾಗಪ್ಪಶೆಟ್ಟರೇ ಅಲ್ಲವೆ?" ಎಂದು ಕೇಳಲು, ಆತನ ಆ ಗುಮಾಸ್ತನು "ಅಹುದು. ನಾಗಪ್ಪಶೆಟ್ಟರೇ ಇವುಗಳನ್ನು ತಮಗೆ ಕಳಿಸಿರುತ್ತಾರೆ. ಇಂದು ಅವರಿಗೆ ಪುತ್ರರತ್ನವಾಯಿತು. ನಿಮಗೆ ಗಂಡು ಮಗನಾಗುವನೆಂದು ತಾವು ಅವಂಗೆ ಹೇಳಿದ್ದಿರಂತೆ?" ಎಂದು ಹೇಳಿ, ಆವೆಲ್ಲ ಜೀನಸುಗಳನ್ನು ನನ್ನ ಮುಂದೆ ತೆಗೆದಿಟ್ಟು, ನನಗೆ ನಮಸ್ಕಾರ ಮಾಡಿ ಹೊರಟು ಹೋದನು. ಆಗ ನನಗೆ ತುಸ ಹಾಯುವೆನಿಸಿತು. ಒಂದೆರಡು ತಿಂಗಳ ಬೇಜಿಮೆ ಯಾದರೂ ಆಯಿತೆನ್ನಲಿಕ್ಕೆ ಅಡ್ಡಿಯಿಲ್ಲೆಂದೆನಿಸಿತು. ನನಗೆ ತುಸ ಸಮಾಧಾನ ವೆನಿಸಿದ್ದರಿಂದ, ತನ್ನನ್ನು ಯಾವಾಗ ಕರೆದಾರು, ತಾನು ಹೋಗಿ ಯಾವಾಗ ಆ ಜೀನಸುಗಳನ್ನು ನೋಡೇನೆಂದು ಹಪಾಪಿಗೊಂಡಿದ್ದ ನನ್ನ ಗೃಹಿಣಿಯನ್ನು ಗಟ್ಟಿ ಯಾಗಿ ಕರೆದು:—"ಏನೇ, ಈ ದೋತರ ಜೋಡು, ಸೀರೆ-ಕುಪ್ಪುಸಗಳನ್ನು ತೆಗೆ ದಿಡು" ಎಂದು ಹೇಳಲು, ಆ ಕೂಡಲೆ ಅವಳು ಹೊರಗೆ ಬಂದಳು; ಹಾಗು ಎಲ್ಲಕ್ಕೂ ಮೊದಲು ನನ್ನೆದುರಿಗಿನ ಸೀರೆ-ಖಣಗಳನ್ನು ತಕ್ಕೊಂಡು ಅವುಗಳ ಅಂಚು, ಸೆರಗು, ಬಣ್ಣಗಳನ್ನು ತಿರುತಿರುವಿ ನೋಡಿ ನನ್ನನ್ನುದ್ದೇಶಿಸಿ:—"ಈ ಸೀರೆ-ಖಣಗಳು ಬಹು ಚೆನ್ನಾಗಿವೆ. ಏನಿಲ್ಲೆಂದರೂ ಇವುಗಳಿಗೆ ೨೫-೩೦ ರೂಪಾಯಿಗಳಾದರೂ ಬಿದ್ದಿರ ಬೇಕಲ್ಲವೆ? ಈ ಸೀರೆಯನ್ನು ಸೊಸೆಗೆ ಕಳಿಸಬೇಕು ಖಣದ ಮೇಲೆ ಕಸೂತಿ ಹಾಕಿ ನಾನು ಇದನ್ನು ನಮ್ಮ ಮಾಲತಿಗೆ ಕೊಡಬೇಕೆಂದಿರುವೆನು. ಈ ದೋತರ ಜೋಡಾದರೂ ಉತ್ತಮವಾದದ್ದೇ ಇದೆ. ಇದು ನಮ್ಮ ಬಾಳನಿಗೆ ಬಹು ದೊಡ್ಡ ದಾದೀತೇನು?" ಮುಂತಾದ ನನ್ನ ಗೃಹಿಣಿಯ ಪ್ರಶ್ನೆಗಳಿಗೆ ನಾನು ಏನೂ ಉತ್ತರ ಕೊಡಲಿಲ್ಲ.

ತನ್ನ ಮಾತಿಗೆ ನಾನೇನೂ ಹೇಳದಿರುವದನ್ನು ಕಂಡು ಅವಳು ತುಸ ಖೇದ ಗೊಂಡಳು. ಇಷ್ಟರಲ್ಲಿ ನಮ್ಮ ಬಾಳನು ಸಾಲೆಯಿಂದ ಬಂದನು. ಆತನೊಡನೆ ಆತನ ನಾಲ್ಕಾರು ಜನ ಗೆಳೆಯರು ಬಂದು ಆತನನ್ನು ಕುರಿತು:—"ಬಾಳೂ, ಕೊಡು ಮೊದಲು ತಿಂಡಿಯನ್ನು." ಎಂದೆನ್ನುತ್ತ ನನ್ನ ಕಡೆಗೆ ನೋಡಿ ಹಾಗೆಯೇ ನಡು ಮನೆಗೆ ಹೋದರು. ಅವರೊಳಗಿನವನೊಬ್ಬ ಹುಡುಗನು ಮಾತ್ರ ದಿಟ್ಟತನದಿಂದ "ಏನರೀ ಗುರುಭಟ್ಟರೇ, ನಿಮ್ಮ ಈ ಬಾಳನಿಗೆ ಇಪ್ಪತ್ತೈದು ರೂಪಾಯಿ ಸ್ಕಾಲರ್ ಶಿಪ್ಪು ದೊರಕಿತು. ಈ ಸಾರೆಯ ಪರೀಕ್ಷೆಯಲ್ಲಿ ಈತನು ಮೊದಲನೇ ನಂಬರ ಪಡೆ ದನು. ಈ ಬಗ್ಗೆ ನಾವು ಈತನನ್ನು ತಿಂಡಿಕೊಡೆಂದು ಕೇಳಿದರೆ ಕೊಡಲೊಲ್ಲನಲ್ಲ?

ಎಂದು ಹೇಳಿದನು ಅದನ್ನು ಕೇಳಿ ನನಗಾದ ಆನಂದವು ಇಡಿ ಬ್ರಹ್ಮಾಂಡದಲ್ಲೇ ಹಿಡಿಸದಾಯಿತು!' ಏನಂದೀ, ಕಾಲಕ್ಷೇಪವೇ? ಅದೂ ತಿಂಗಳಿಗೆ ಇಪ್ಪತ್ತೈದು ರೂಪಾಯಿಗಳೇ? ಎಂದು ನಾನು ಆ ಹುಡುಗನನ್ನು ಕೇಳಲು, ಅದಕ್ಕೆ ಆತನು "ಅಹುದು ಇಪ್ಪತ್ತೈದರ ಸ್ಕಾಲರಶಿಪ್ಪು. ಕಾಲಕ್ಷೇಪವಲ್ಲ" ಎಂದೆನ್ನುತ್ತ ನಕ್ಕನು; ಹಾಗು 'ನಡೆಯೋ ಬಾಳು, ಕೊಡು ತಿಂಡಿಯನ್ನು ಬೇಗನೆ' ಎಂದೆನ್ನುತ್ತ ಒಳಗೆ ಹೋದನು.

ಇದೇನಿದು? ದೇವರು ಈ ಚಮತ್ಕಾರವನ್ನೆಂತು ಘಟಿಸಿದನು? ಎಂಬ ಯೋಚನೆಯು ಮನಸ್ಸಿನಲ್ಲುಂಟಾಗಲು, ನಾನು ಕ್ಷಣಕಾಲ ದಂಗಾಗಿ ಬಿಟ್ಟೆನು. ಇದೆಲ್ಲ ಏನು ನಡೆದಿದೆಯೆಂಬದನ್ನು ಬಾಳನಿಗೆ ಕೇಳಿ ತಿಳಿಯುವದಕ್ಕೆಂದು ನಾನು ಒಳಗೆ ನಡೆದೆನು. ಇಷ್ಟರಲ್ಲೇ ನಮ್ಮ ಯಜಮಾನರಾದ ಕಟ್ಟೀಮನೆ ವಾಸುದೇವರಾಯರು ಕಚೇರಿಯಿಂದ ಪರಭಾರೆ ನಮ್ಮ ಮನೆಗೇ ಬಂದರು ಅವರು ಬಂದದ್ದನ್ನು ಕಂಡು ನಾನು ಎದ್ದು ನಿಂತು, ಅವರನ್ನು ಜಮಖಾನೆಯ ಮೇಲೆ ಕೂಡ್ರಿಸಿದೆನು. ಆಗ ಅವರು ನನ್ನನ್ನು ಕುರಿತು:—ಗುರುಭಟ್ಟರೇ, ಕೂಡ್ರಿರಿ. ನೀವೂ ಕೂಡ್ರಿರಿ, ಎಂದೆನ್ನಲು, ನಾನೂ ಅವರ ಬಳಿಯಲ್ಲಿ ಕುಳಿತೆನು. ನಮ್ಮ ಯಜಮಾನರು ಇಂದು ಈ ಕಡೆಗೇಕೆ ಬಂದಿರುತ್ತಾರೆಂಬ ಬಗ್ಗೆ ನಾನು ಮನಸ್ಸಿನಲ್ಲೇ ಯೋಚಿಸುತ್ತಿರಲು, ನಾಳೆ ಇವರಲ್ಲಿ ಹವ್ಯ-ಕವ್ಯವೇನಾದರೂ ಇರಬಹುದೆಂದು ಒಮ್ಮೆ ತರ್ಕಿಸಿದರೆ, ಮತ್ತೊಮ್ಮೆ ಇಂದು ಭಗವಲ್ಲೀಲೆಯ ಚಮತ್ಕಾರಗಳು ಇದುವರೆಗೆ ಹೇಗೆ ದೃಗ್ಗೋಚರವಾದವೋ ಅದರಂತೆಯೇ ಇವರ ಆಗಮನದಿಂದಾವ ಚಮತ್ಕಾರವಾದರೂ ಹೊರಬೀಳುವದೇನೆಂದು ನಿರೀಕ್ಷಿಸತೊಡಗಿದೆನು. ಇಷ್ಟರಲ್ಲಿ ಬಾಳನು ಹೊರಗೆ ಬರಲು, ವಾಸುದೇವರಾಯನು ಆತನನ್ನು ಕಂಡು:—ಏನೋ ಏ ಬಾಳ, ಇಂದು ನಿನ್ನ ಪರೀಕ್ಷೆಯು ಹೇಗಾಯಿತೋ? ಪಾಸು ಆದೆಯೋ-ನಾಪಾಸು ಆದೆಯೋ?

ಬಾಳನು ಒಳ್ಳೇ ಹುರುಪಿನಿಂದ:-ರಾಯರೇ, ನಾನು ನಾಪಾಸಾಗುವ ಬಗೆ ಹೇಗೆ? ನಾನು ಹೆಚ್ಚು ಗುಣ ಪಡೆದು ಪಾಸಾಗಿರುತ್ತೇನೆ.

ವಾಸುದೇವರಾವ:—ಅಂತೂ ಒಂದನೇ ನಂಬರು ಬರಲಿಲ್ಲವಷ್ಟೇ?

ಬಾಳಾ:--ಬಂದಿಪೆಯಷ್ಟೇ ಅಲ್ಲ: ನಮ್ಮ ಸಾಹೇಬನು ನನಗೆ ತಿಂಗಳಿಗೆ ೨೫ರೂ. ಸ್ಕಾಲರ ಶಿಪ್ಪು ಕೂಡ ಸಿಗುವದೆಂದು ಹೇಳಿರುತ್ತಾನೆ.

ವಾ:—ಹೀಗೆಯೋ? ಆದರೆ ಅದು ನಿನ್ನ ಜಾಣತನದಿಂದಲ್ಲ; ನಿಮ್ಮ ಸಾಲೆಯ ಪ್ರಿನ್ಸಿಪಾಲನು ದಯಾಳುವಾಗಿರುವನೆಂದು ನಿನಗೆ ಕೊಟ್ಟಿರುವನು, ತಿಳಿಯಿತೇ? ಹೋಗು, ಆಡು ಹೋಗು ಹೀಗೆಯೇ ಚನ್ನಾಗಿ ಅಭ್ಯಾಸ ಮಾಡುತ್ತಿರು

ನಾನು: ಏನಿರೀ ರಾಯರೇ, ತ ಸ್ಪಷ್ಟಲ ಏನು ಅನ್ನುತ್ತಾರೋ ನನಗೆ ಹೇಳಲಿಕ್ಕೆ ಬಾರದು--ಅಂದರೇನು? ನಮ್ಮ ಬಾಳನಿಗೆ ತಿಂಗಳಿಗೆ ಇಪ್ಪತ್ತೈದು ರೂಪಾಯಿ ಸಂಬಳವಷ್ಟೇ?

ವಾ:—ಛೀ-ಛೀ! ಅದು ಸಂಬಳವಲ್ಲ. ಅವನು ಇನ್ನೂ ಕಲಿಯಬೇಕಾಗಿದೆ.

ಈಗಲೇ ಸಂಬಳವೆಲ್ಲಿ? ನಿಮ್ಮ ಬಾಳನ ಶಿಕ್ಷಣದ ಖರ್ಚನ್ನು ಸರಕಾರವು ಇನ್ನು ಮುಂದೆ ಕೊಡತೊಡಗುವದು.

ನಾನು:—ಹಾಗಾದರೆ ಅದು ಸಂಬಳವಲ್ಲವೆನ್ನಿರಿ. ಇನ್ನೂ ಕಲಿಯುವುದಿದೆ-ಯೇ ಅಲ್ಲವೆ?

ವಾ:—ಗುರುಭಟ್ಟರೇ, ನಿಮ್ಮ ಬಾಳನಿಗೆ ದೊರಕೀತು ಕೆಲಸ. ಆ ಕೆಲಸದ ಬಗ್ಗೆ ನೀವು ಯೋಚಿಸಬೇಕಾದ್ದಿಲ್ಲ. ಬಾಳನು ಇನ್ನು ಹತ್ತಿದನು ಯೋಗ್ಯ ಮಾರ್ಗ-ಕ್ಕೆ; ಹಾಗು ಇನ್ನು ನಿಮ್ಮ ಬಡತನವೂ ಹಿಂಗಿತೆಂದು ತಿಳಿಯಿರಿ.

ನಾನು:—ತಥಾಸ್ತು. ವೇದೋ ನಾರಾಯಣನ ಕೃಪೆಯು! ಆದರೆ ನಮ್ಮ ಬಾಳನು ಅಷ್ಟು ಬುದ್ಧಿವಂತನೂ ಅಲ್ಲ; ಅಭ್ಯಾಸಿಯೂ ಅಲ್ಲ. ದೇವರಿಗೆ ನಮ್ಮ ಬಗ್ಗೆ ದಯೆಯುಂಟಾದದ್ದೇನೋ ನಿಜ.

ವಾ:—ದೇವರ ದರ್ಬಾರದಲ್ಲೇನು ಅನ್ಯಾಯವಿದೆಯೆ? ಬಡಬಗ್ಗರ ಸಂರಕ್ಷಕನು ಆತನೇ ಅಲ್ಲವೆ? ಮತ್ತು ನೀವು ಹೀಗೆಕನ್ನುವಿರಿ? ನಿಮ್ಮ ಬಾಳನು ಒಳ್ಳೇ ಜಾಣನೂ ಸಾಹಸಿಗನೂ ಆಗಿರುತ್ತಾನೆ ಅವನು ಇನ್ನು ಚೆನ್ನಾಗಿ ದಾರಿಗೆ ಹತ್ತಿದನು. ನಿಮ್ಮ ಬಾಳನು ಇಷ್ಟು ಬುದ್ಧಿವಂತನಾದಾನೆಂದು ನನಗನಿಸಿರಲಿಲ್ಲ ಇರಲಿ. ಆದದ್ದು ವಿಹಿತವೇ ಆಯಿತು.

ಇತ್ತ ಹೊರಗಿನ ಪಡಸಾಲೆಯಲ್ಲಿ ನಾನು-ವಾಸುದೇವರಾಯರು ಈ ಬಗೆಯಾಗಿ ಮಾತನಾಡುತ್ತಿರಲಿಕ್ಕೆ, ಅತ್ತ ಒಳಗೆ ನನ್ನ ಗೃಹಿಣಿಗೆ ಎಷ್ಟು ಸಂತೋಷವಾಗಿತ್ತೆಂಬದನ್ನು ಹೇಳಲಾಸಲ್ಲ. ಅವಳು ನನ್ನೆದುರಿಗೆ ಬಂದು ತನ್ನ ಮಗನ ಪ್ರೌಢಿಯನ್ನು ಕೊಚ್ಚಿಕೊಳ್ಳಬೇಕಾಗಿತ್ತು. ಆದರಿಂದ ಅವಳು ಒಳ-ಹೊರಗೆ ಎಡತಾಕಲಾರಂಭಿಸಿದಳು. ಇನ್ನು ತಮ್ಮ ಬಾಳನನ್ನು ಎಲ್ಲಿ ಇರಿಸಲಿ, ಎಲ್ಲಿ ಬಿಡಲಿ ಎಂಬಂತೆ ಅವಳಿಗಾಗಿತ್ತು; ಆದರೆ ಪಡಸಾಲೆಯ ಮೇಲೆ ಕಟ್ಟೇಮನೆ ವಾಸುದೇವರಾಯರು ಕುಳಿತದ್ದರಿಂದ ಅವಳು ನಿರುಪಾಯಳಾದಳು; ಆದರೂ ಆ ಪಡಸಾಲೆಗೆ ಏನಾದರೊಂದು ನೆವ ಮಾಡಿ ಆಕೆಯು ಎರಡು-ಮೂರು ಸಾರೆ ಬಂದು ಹೋದಳು. ನಾವು ಏನು ಮಾತಾಡುತ್ತಿರುವೆವೆಂಬದನ್ನು ಕೇಳಬೇಕೆಂದು ಅವಳ ಉದ್ದೇಶವಿದ್ದೀತು. ಇಷ್ಟರಲ್ಲಿ ವಾಸುದೇವರಾಯರು:—"ನಿಮ್ಮ ಚಂಪೆಯೆಲ್ಲಿರುವಳು? ಅವಳು ಕಾಣುವದಿಲ್ಲವಲ್ಲ! ಅವಳ ಲಗ್ನದ ನಿಶ್ಚಯವೊಂದು ಆಯಿತೆಂದರೆ, ಸದ್ಯಕ್ಕೆ ಎಲ್ಲ ಚಿಂತೆಗಳಿಂದಲೂ ನೀವು ಮುಕ್ತರಾದಿರೆನ್ನಬಹುದು."

ನಾನು ಅವರ ಈ ಪ್ರಶ್ನೆಗೆ ಉತ್ತರ ಕೊಡುವ ಮೊದಲು ಚಂಪೆಯನ್ನು ಕೂಗಿ ಕರೆದು:—"ರಾಯರೇ, ಅದೂ ಆದೀತು. ದೇವರ ಇಚ್ಛೆ. ಈಶಸಂಕಲ್ಪದಂತೆಯೇ ಆದೀತು. ಅದಕ್ಕೆ ಹೊರತಾಗಿ ಯಾವ ಕಾರ್ಯ-ಕಲಾಪಗಳೂ ನಡೆಯಲಾರವು" ಎಂದು ಹೇಳುತ್ತಿರಲಿಕ್ಕೆ ಚಂಪೆಯು ಅಲ್ಲಿಗೆ ಬಂದೇ ಬಿಟ್ಟಳು. ಅವಳನ್ನು ಹತ್ತರ ಕುಳ್ಳಿರಿಸಿಕೊಂಡು ನಮ್ಮ ವಾಸುದೇವರಾಯರು ಏನೇನೋ ಅನ್ನಹತ್ತಿದರು.

ಆಗ ನಾನು ಮನಸ್ಸಿನಲ್ಲಿ:—'ಇಂದು ಹೇಗಾದರೂ ಈ ಚಿಂತೆಯಿಂದೊಮ್ಮೆ ಮುಕ್ತನಾದೆನು. ನಮ್ಮ ಬಾಳನು ಇನ್ನು ನಿಜವಾಗಿಯೂ ದೈವ ತೆರೆಯುವನು; ಮತ್ತು ಸದ್ಯಕ್ಕೆ ಒಂದು ತಿಂಗಳ ಖರ್ಚಿನ ಹಣವಾದರೂ ಕೈಗೆ ಬಂದಿದೆ' ಈ ವಿಚಾರಗಳಿಂದ ನನ್ನ ಮನಸ್ಸೇನೋ ಮೋದಗೊಂಡಿತು; ಆದರೆ ಅಷ್ಟರಲ್ಲೇ:—ಈ ವಾಸುದೇವರಾಯರೇಕೆ ಬಂದರು? ಚಂಪೆಯ ಲಗ್ನದ ಬಗ್ಗೆ ಮಧ್ಯಸ್ಥಿಕೆಯನ್ನೇನಾದರೂ ಮಾಡ ಬಂದರೋ ಹೇಗೆ? ಮೋರಪ್ಪನು ಇವರನ್ನು ಸುತ್ತುವರೆದಿರಲಿಕ್ಕಿಲ್ಲಷ್ಟೇ? ಇಂಥ ತುದಿಮೊದಲಿಲ್ಲದ ಜಿಜ್ಞಾಸೆಯು ನನ್ನನ್ನು ಸ್ವಸ್ಥವಾಗಿ ಕೂಡ್ರಗೊಡಲೊಲ್ಲದು. ವಾಸುದೇವರಾಯನೆಂದರೇನು? ಒಳ್ಳೇ ಮುತ್ಸದ್ದಿಗಳು. ನನ್ನಂತಹ ಕೇವಲ ವೈದಿಕ ಬ್ರಾಹ್ಮಣನಲ್ಲ. ಆತನು ಬಾಯಿಗೆ ಬಂದದ್ದನ್ನು ಬೊಗಳಿ, ಸುಮ್ಮನಾಗುವ ಬಾಯಿಬಡುಕಾಯೊ ಪ್ರಾಣಿಯಾಗಿಲ್ಲ ತನ್ನ ಅಂತರಂಗದಲ್ಲಿ ನಿಡಿಯೆಂಬದರ ಸುಳಿವು ಕೂಡ ಮುಂದಿಗೆ ಹತ್ತಗೊಡದೆ, ಮುಂದಿಯ ಇಂಗಿತವನ್ನೆಲ್ಲ ಬೈಲಿಗೆಳೆಯಲಿಕ್ಕೆ ಆತನು ಬಹು ನಿಷ್ಣಾತನಾಗಿದ್ದನು. ಸಹಜವಾಗಿ ಪ್ರಶ್ನೆ ಮಾಡಿ, ದಕ್ಷಿಣ ದಿಶೆಗೆ ಹೋಗುವದಿದ್ದಾಗ ಉತ್ತರಕ್ಕೆ ಮೋರೆಮಾಡಿ ನಿಂತಾನು; ಆದರೆ ತನ್ನ ಉದ್ದೇಶವನ್ನು ತೋರಗೊಡದೆ, ಮುಂದಿಯ ಬಾಯಿಯು ಮಾತ್ರ ಮುಚ್ಚದ ಹಾಗೆ ಅವರಿಂದ ಮಾತಾಡಹಚ್ಚುವವನೆಂಬದು ನನಗೆ ಒಳಿತಾಗಿ ಗೊತ್ತಿತ್ತು. ಅದರಿಂದಲೇ ಆತನ ಮನೋಗತವು ಹೇಗೆ ತಿಳಿದೀತೆಂಬ ಯೋಚನೆಯಲ್ಲಿ ನಾನಿರಲು, ವಾಸುದೇವರಾಯನೇ ಮತ್ತೆ:—

"ಗುರುಭಟ್ಟರೇ, ಇನ್ನು ನಿಮಗೆ ಹೇಳಿಕೊಳ್ಳುವಂತಹ ಚಿಂತೆಯಾವುದೂ ಉಳಿದಿಲ್ಲವಷ್ಟೇ?"

ಅದಕ್ಕೆ ನಾನು:—ರಾಯರೇ, ಚಿಂತೆಯು ಎಂದಿಗಾದರೂ ತಪ್ಪಿದ್ದೇ? ಇನ್ನು ಈ ನಮ್ಮ ಚಂಪೆಯು ದೊಡ್ಡವಳಾಗಲಿಲ್ಲೇನು? ಇವಳಿಗೆ ತಕ್ಕ ವರಮನೆತನವು ಹೇಗೆ ಸಿಕ್ಕೀತು? ಅಂಥ ಮನೆತನವು ಸಿಕ್ಕರೂ, ನಮ್ಮಿಂದ ಆ ಲಗ್ನದ ಖರ್ಚು ಹೇಗೆ ನೀಗಬೇಕು? ಈ ಪ್ರಕಾರದ ಚಿಂತೆಗಳು ಕಡಿಮೆಯಾಗಿವೆಯೆ? ರಾಯರೇ, ಬಡತನವನ್ನು ದೇವರು ನಮ್ಮ ವೈರಿಗಳಿಗೆ ಕೂಡ ಕೊಡಬಾರದು ಒಂದುವೇಳೆ ಬಡತನವಿದ್ದರೂ ನಡೆದೀತು; ಆದರೆ ಹೆಣ್ಣುಗಳು ಮಾತ್ರ ಸರ್ವಥಾ ಇರಲಾಗದು.

ವಾಸು:—ಹೀಗೆಂದರೆ ಹೇಗೆ ನಡೆದೀತು? ಅವುಗಳೆಲ್ಲ ನಿಮ್ಮ ವೇದಾಂತದೊಳಗಿನ ವಚನಗಳು. ಪ್ರಾಣಿಯು ಹುಟ್ಟಿ ಬರುವಾಗಲೇ ತನ್ನ ಅನ್ನ ಹಾಗು ದೈವಗಳನ್ನು ಸಂಗಡ ತರುವದಿಲ್ಲವೆ? ಅಂದ ಬಳಿಕ ನೀವು ಹೀಗೆ ಸುಮ್ಮನೆ ಅದೇಕೆ ಚಿಂತಿಸುತ್ತೀರಿ?

ವಾಸುದೇವರಾಯನ ಮಾತಿನ ಹೊಯ್ಲು ಮೋರಪ್ಪನ ಧಾಟಿಯನ್ನೇ ಹಿಡಿಯುತ್ತಿತೆಂದು ನನಗನಿಸಿದ್ದರಿಂದ ನಾನು ಮನಸ್ಸಿನಲ್ಲೇ:—"ಓಹೋ! ಈ ರಾಯರೂ ಅದೇ ಸ್ವಾರ್ಥ್ಯದಿಂಡಿಗೆ ನಡೆದರೆಂಬಂತೆ ತೋರುತ್ತಿದೆ; ಆದರೆ ಇವರನ್ನು ಅಲ್ಲಿಯ ವರೆಗೆ ತಲುಪಗೊಡದೆ, ಇವರಿಗೆ ಏನಾದರೂ ಹೇಳಿ, ಇವರನ್ನು ಇಲ್ಲಿಂದಲೇ ಹೊರಳಿಸುವದು

ವಿಹಿತವು" ಎಂದು ಯೋಚಿಸಿ, 'ರಾಯರೇ, ಹೇಳಲಿಕ್ಕೆ ಮಾತುಗಳೆಷ್ಟು ಸುಲಭ ಕಾಣುವವೋ, ಅಷ್ಟು ಪ್ರತ್ಯಕ್ಷ ಪ್ರಮಾಣಗಳಲ್ಲಿ ಎಷ್ಟು ಶ್ರಮ? ನಾವು ಇತ್ತ ವೇದಾಂತಿಗಳೂ ಅಲ್ಲ; ಅತ್ತ ಧಾದಾಂತಿಗಳೂ ಅಲ್ಲ. ಇಕೊಳ್ಳಿರಿ, ತಾಂಬೂಲವನ್ನು. ಹೊಗೆಸೊಪ್ಪೂ ಬೇಕಲ್ಲವೇ? ಎಂದಂದು ಹೊರದಾರಿ ಹಚ್ಚಲು,

ವಾಸುದೇವರಾಯರು:— ಅವುಗಳೆಲ್ಲ ಇರಲಿ. ಬೇಕು ಬೇಕಾದ ಹಾಗೆ ನಾನು ತಕ್ಕೊಳ್ಳುತ್ತೇನೆ; ಆದರೆ ಮತ್ತೇನು ಹೊಸ ಸುದ್ದಿ?

ನಾನು:—ಮತ್ತೇನು ಹೊಸ ಸುದ್ದಿಯಿರಬೇಕು? ಸಂಜೆಯಾಗುತ್ತ ನಡೆದಿರುವದರಿಂದ ಇನ್ನು ದೇವರ ದರ್ಶನಕ್ಕೆ ಹೊರಡಬೇಕೆಂದಿರುತ್ತೇನೆ. ನಮ್ಮ ಕರ್ಮ-ಕಥೆಗಳು ನಿತ್ಯದವೇ ಆಗಿವೆ. ಅವುಗಳಿಗೆ ದೇವರೇ ಬೇಸರಗೊಳ್ಳುವದಿಲ್ಲೆಂದ ಬಳಿಕ, ನಾವು ಬೇಸರಗೊಂಡು ಪ್ರಯೋಜನವೇನು?

ಹೀಗೆ ನಾನು ಹೊರದಾರಿ ಹಚ್ಚಿ ಮಾತಾಡಹತ್ತಿದರೂ ವಾಸದೇವರಾಯರು ಇನ್ನೂ ಕೂಡ್ರುವ ಇಚ್ಛೆ ಧರಿಸಿದರು. ಆಗ ಮಾತ್ರ ಚಂಪೆಯ ಲಗ್ನದ ಶಿಫಾರಸಿಗೇ ಇವರು ಬಂದಿರುತ್ತಾರೆಂದು ನಾನು ಖಂಡಿತವಾಗಿಯೂ ತಿಳಿದುಕೊಂಡೆನು ಮನಸ್ಸೇ ಅದು! ಅದು ಏನನ್ನು ಕಲ್ಪಿಸೀತು-ಏನನ್ನು ಕಲ್ಪಿಸಲಿಕ್ಕಿಲ್ಲ ಎಂಬದರ ನಿಯಮವನ್ನು ಅದಾರು ಹೇಳಬೇಕು? ನನ್ನ ಆ ಬಗೆಯ ಹಾರಿಕೆಯ ಮಾತಿನ ಮೇಲಿಂದ ಆ ವಾಸುದೇವರಾಯರಿಗೆ ಮಾತ್ರ "ಈತನ ಮಗನಿಗೆ ಈಗ ತಾನೆ ಸ್ಕಾಲರ ಶಿಪ್ಪು ಸಿಕ್ಕಿದೆ. ಇದನ್ನು ಕೇಳಿ ಈ ಹಾರುವನು ನಮ್ಮನ್ನು ಯಾವ ಗಿಡದ ತೊಪ್ಪಲೆಂದು ತಿಳಿಯಹತ್ತಿರುವನು" ಎಂದು ತಿಳಕೊಳ್ಳಬಹುದಾಗಿತ್ತು; ಆದರೆ ನನ್ನ ಮನಸ್ಸಿನಲ್ಲಿ ಅದಾವುದೂ ಇರಲಿಲ್ಲ. ನಾನು ಅಂಜುತ್ತಿದುದು ಬೇರೆ ಮಾತಿಗೇ ಅಸ್ತು. ವಾಸುದೇವರಾಯರೇನೂ ತಮ್ಮ ಹಿಡತವನ್ನು ಬಿಡಲೊಲ್ಲರೆಂಬದು ನನಗೆ ಖಾತ್ರಿಯಾಗಲು, ನಾನೂ ಅವರೆದುರಿಗೆ ಸ್ಥಿರಾಸನವನ್ನು ಹಾಕಿ ಕುಳಿತೆನು.

ಆಗ ವಾಸುದೇವರಾಯರು:—ಗುರುಭಟ್ಟರೇ, ಇನ್ನು ನಿಮಗೆ ಕಾಲವು ಅನುಕೂಲವಾಗಹತ್ತಿತು. ದೇವರ ಕೃಪೆಯು ನಿಮ್ಮ ಮೇಲೆ ಆಗತೊಡಗಿತು. ಅಂದ ಮೇಲೆ ನಿಮಗೆ ಇನ್ನು ನಮ್ಮಂತಹರ ಅವಶ್ಯಕತೆಯು ಬೀಳಲಿಕ್ಕಿಲ್ಲೆಂಬದು ನಿಜವಿದೆ; ಆದರೆ ನಾನೇನೂ ವೋರೆಪ್ಪನಲ್ಲ. ಬಿಸಿ ಹಾಲಿನಿಂದ ಬಾಯಿ ಬೆಂದಿತೆಂದು ಮಜ್ಜಿಗೆಯನ್ನೂ ಊದಿ ಕುಡಿಯಬೇಕಾಗುವಂತೆ ಮಾಡಬೇಡಿರಿ. ನಾನು ಇನ್ನು ನಿಮ್ಮ ಹೆಚ್ಚು ವೇಳೆಯನ್ನು ಖರ್ಚು ಮಾಡುವದಿಲ್ಲ. ನಿಮ್ಮ ಚಂಪೆಯು ಬಹು ಭಾಗ್ಯವಂತಳಿರುತ್ತಾಳೆ. ಈಕೆಯ ಬಗ್ಗೆ ನೀವಿನ್ನು ಚಿಂತಿಸುವ ಕಾರಣವಿಲ್ಲ. ನೆರೆಮನೆಯ ಶಾಮರಾಯರ ಮಗನಿಗೆ ನೀವು ನಿಮ್ಮ ಈ ಚಂಪೆಯನ್ನು ಧಾರೆಯೆರೆದು ಕೊಡಿರಿ.

ಆದಕ್ಕೆ ನಾನು:—ಆ ನಾಡಗೌಡರ ಶಾಮರಾಯರೇ? ಅವರು ಈ ಬಡ ಗುರುಭಟ್ಟನ ಮಗಳನ್ನು ಸೊಸೆಯನ್ನಾಗಿ ಮಾಡಿಕೊಳ್ಳುವರೇ? ರಾಯರೇ, ನಾನೇನೂ ಅಂಥ ಅರೆಮನುಷ್ಯನಲ್ಲ!

ವಾಸು:—ಅರೆಮನುಷ್ಯರಾಗದಿದ್ದರೆ ಸಂಪೂರ್ಣ ಮನುಷ್ಯರೇ ಆಗಿರಿ; ಆದರೆ ನೀವು ನಾಡಗೌಡರ ಬೀಗರಾದರೆ ಏನು ಹೇಳುವಿರಿ?

ನಮ್ಮಗಳ ಈ ಸಂಭಾಷಣವನ್ನು ನನ್ನ ಗೃಹಿಣಿಯು ಮನೆಯೊಳಗಿಂದಲೇ ಕೇಳುತ್ತಿದ್ದಳು. ನಮ್ಮ ಚಂಪೆಯನ್ನು ನಾಡಗೌಡರ ವಸಂತನು ಲಗ್ನವಾಗುವ ನೆಂಬದನ್ನು ಕೇಳಿ ಆಕೆಗೆ ಉಂಟಾದ ಆನಂದದ ಭರದಲ್ಲಿ ಅವಳು ತಟ್ಟನೆ ಹೊರಗೆ ಪಡಸಾಲೆಗೆ ಬಂದು:—"ನಾಡಗೌಡರ ಮನೆತನವಲ್ಲವೇ? ಬಹು ಚನ್ನಾಗಿದೆ. ಹೇ-ಗಿರಬೇಕೋ ಹಾಗಿದೆ ವರನು ಚಲುವನು, ಕೆಂಪು ಮೈಬಣ್ಣದವನು, ಮನೆಯಲ್ಲಿ ಸಾಕಷ್ಟು ದುಡ್ಡಿದೆ. ವಯಸ್ಸು ಚಿಕ್ಕದು ಅತ್ತೆ-ಮಾವಂದಿರು ಸುಜನರು ಮತ್ತೇನು ಬೇಕು ಅಲ್ಲ ನಮ್ಮ ಚಂಪೆಗೆ?...."ಎಂದು ಒಂದೇ ಉಸಿರಿನಿಂದ ಹೇಳಹತ್ತಲು, ನಾನು ಅವಳ ಭಾಷಣಕ್ಕೆ ನಡುವೇ ಅಡ್ಡಿಯನ್ನುಂಟುಮಾಡಿ:—"ಮತ್ತೇನೂ ಬೇಡ. ಲಗ್ನದ ಖರ್ಚಿಗೆ ಹದಿನೈದು-ಇಪ್ಪತ್ತು ಸಾವಿರ ರೂಪಾಯಿಗಳು ಆದರೆ ತೀರಿತು" ಎಂದೆನು.

ವಾಸುದೇವರಾಯರು: ಗುರುಭಟ್ಟರೇ, ಅದಿರಲಿ. ಈಗ ನಿಮ್ಮ ದೈವವೇ ಫಲಿಸಿದ್ದರಿಂದ ಯಾವುದಕ್ಕೂ ಕೊರತೆಯುಂಟಾಗಲಾರದು. ನಾನು ನಿಮಗೆ ಈಗ ತಿಳಿಸುವದೇನಂದರೆ, ನಾಡಗೌಡರ ಆ ವಸಂತನು ನಿಮ್ಮ ಅಳಿಯನಾಗುವದು ಖಂಡಿತವು. ಈಗ ನಾನು ನುಡಿದಂತೆ ನಡೆಯುದಿದ್ದರೆ, ಆ ಮೇಲೆ ನನ್ನನ್ನು ಕೇಳಿರಿ.

ಅದನ್ನು ಕೇಳಿ ನಾನು ಮನಸ್ಸಿನಲ್ಲಿಯೇ ಸೋಜಿಗಗೊಂಡೆನು. ಇಷ್ಟು ದೊಡ್ಡ ಶ್ರೀಮಂತರ ಮನೆತನವು ನಮ್ಮ ಚಂಪೆಗೆ ಹೇಗೆ ದೊರೆಯಬೇಕು? ಆದರೆ ಆ ಹುಡುಗನಿಗೆ ಯಾವುದೊಂದು ದುಶ್ಚಟ ಇಲ್ಲವೆ ಗುಪ್ತರೋಗವಿರಲಿಕ್ಕಿಲ್ಲವಷ್ಟೇ? ಎಂಬ ವಿಕಲ್ಪವು ನನ್ನ ಮನಸ್ಸಿನಲ್ಲಿ ಬಾರದಿರಲಿಲ್ಲ ಇಷ್ಟರಲ್ಲಿ ವಾಸುದೇವರಾಯರು ಮತ್ತೆ: -ಗುರುಭಟ್ಟರೇ, ಆ ನಾಡಗೌಡರ ವೃದ್ಧತಂದೆಯಾದ ಆನಂದರಾಯರು ನಿಮ್ಮ ಚಂಪೆಯನ್ನೇ ತಮ್ಮ ಮೊಮ್ಮಗನಿಗೆ ಮಾಡಿಕೊಳ್ಳುವದನ್ನು ನಿಶ್ಚಯಿಸಿರುತ್ತಾರೆ; ಯಾಕಂದರೆ ನಿಮ್ಮ ಈ ಚಂಪೆಯು ಒಳ್ಳೇ ಕಾಲ್ಗುಣದವಳೆಂದೂ ಸುಲಕ್ಷಣಿಯೆಂದೂ ಅವರ ಗ್ರಹಿಕೆಯಾಗಿಹೋಗಿದೆ ಕೆಲ ದಿನಗಳ ಹಿಂದೆ ಅವರ ಮನೆಯದೊಂದು ಭಾರೀ ಬೆಲೆಯ ವಜ್ರದ ಉಂಗುರವು ಇಲ್ಲದಂತಾಗಿ, ಎಷ್ಟು ಹುಡುಕಿದರೂ ಸಿಗದಾಗಿತ್ತು. ಇಷ್ಟರಲ್ಲಿ ನಿಮ್ಮ ಚಂಪೆಯು ಅವರಲ್ಲಿಗೆ ಆಕಸ್ಮಿಕವಾಗಿ ಹೋಗಲಿಕ್ಕೂ ಆ ಉಂಗುರವು ಸಿಕ್ಕಿತೆಂದು ಒಳಗಿನಿಂದ ಆ ಮುದುಕನ ಕಿವಿಗೆ ಸುದ್ದಿ ಬಡಿಯಲಿಕ್ಕೂ ಗಂಟೀ ಬಿದ್ದಿತು! ಇದೇ ಪ್ರಕಾರ ಮತ್ತೆ ನಾಲ್ಕಾರು ಬೇರೆ-ಬೇರೆ ಪ್ರಸಂಗಗಳು ಘಟಿಸಿದವು. ಅಂತೆಯೇ ಆ ಮುದುಕನು ನನಗೆ ಒಂದೇಸವನೆ ಈ ನಿಮ್ಮ ಚಂಪೆಯನ್ನು ಅವನ ಮೊಮ್ಮಗನಿಗೆ ಕೊಡಿಸಲಿಕ್ಕೆ ಒತ್ತಾಯ ಪಡಿಸುತ್ತಿರುವನು. ಗುರುಭಟ್ಟರೇ, ಈ ನಿಮ್ಮ ಚಂಪೆಯೆಂದರೆ ಇವಳೊಬ್ಬ ಗೃಹಲಕ್ಷ್ಮಿಯಾಗಿದ್ದು, ಇವಳನ್ನು ತನ್ನ ಮೊಮ್ಮಗನಿಗೆ ಲಗ್ನ ಮಾಡಿಕೊಂಡು ತನ್ನ ಮನೆಯಲ್ಲಿ

ಸೇರಿಸಿಕೊಳ್ಳಬೇಕೆಂದು ಆ ಮುದುಕನು ಒಳ್ಳೇ ಆತುರಗೊಂಡಿರುತ್ತಾನೆ. ಈಕೆಯ ಕಾಲ್ಗುಣದಿಂದ ತಮ್ಮ ಮನೆತನದ ಕಲ್ಯಾಣವಾಗುವದೆಂದು ಆತನ ಗ್ರಹಿಕೆಯಾಗಿದೆ. ಮೊನ್ನೆ ಒಮ್ಮೆ ಆ ಮುದುಕನು ಬೇನೆಯಿಂದ ತೀರ ಹೈರಾಣಾಗಿರಲು, ಆಗ ಈ ನಿಮ್ಮ ಚಂಪೆಯು ಅಲ್ಲಿಗೆ ಸಹಜವಾಗಿ ಹೋಗಿ ಆತನ ಬಳಿಯಲ್ಲಿ ಕುಳಿತು, ನಿಮ್ಮ ಈ ಬೇನೆಯು ನಾಳೆಗೆ ಗುಣವಾಗುವದೆಂದು ಹೇಳಿದ್ದಳಂತೆ ಆ ಮೇರೆಗೆ ಅದು ನಿಜ ವಾಗಿಯೂ ಹಿಮ್ಮೆಟ್ಟಲು ಆ ಮುದುಕನಂತೆ ಆತನ ಮನೆಯವರೆಲ್ಲರಿಗೂ ಈಕೆಯಲ್ಲಿ ಶ್ರದ್ಧೆಯುಂಟಾಗಿರುತ್ತದೆ. ನಾನು ಇಂಥ ಅವರೆಲ್ಲರ ಆಗ್ರಹದ ಹೇಳಿಕೆಯ ಮೇರೆಗೆ ನಿಮ್ಮಲ್ಲಿಗೆ ಬಂದಿರುತ್ತೇನೆ. ಜನ್ಮ ಪತ್ರಿಕೆಗಳ ಮೇರೆಗೆ ಘಟಿತಾರ್ಥವು ಬಹು ಚನ್ನಾಗಿ ಕೂಡಿ ಬರುತ್ತದಂತೆ. ನಾಳಿನ ಮಾಘಮಾಸದಲ್ಲೇ ಲಗ್ನವು ಒಳ್ಳೇ ವಿಜೃಂಭಣೆಯಿಂದ ಆಗಬೇಕಂತೆ ಇದೆಲ್ಲವೂ ಆ ವೃದ್ಧ ನಾಡಗೌಡ ಆನಂದರಾಯರ ಇಚ್ಛೆ ಯಾಗಿರುತ್ತದೆ. ನಾನು ಅವರಿಗೆ ಹೇಳತಕ್ಕದ್ದೆಲ್ಲವನ್ನೂ ಹೇಳಿರುತ್ತೇನೆ ನಿಮ್ಮಿಂದ ಒಂದು ಪೈ ಕೂಡ ಅಪೇಕ್ಷಿಸದೆ, ನಿಮಗೆ ಒಂದು ದುಡ್ಡು ಕೂಡ ಖರ್ಚು ಹತ್ತಗೊಡದೆ ಲಗ್ನ ಸಮಾರಂಭವಾಗುವ ಸಿದ್ಧತೆಯಿದೆ. ಇನ್ನು ನೀವು ನಿಮ್ಮ ಅಂಬೋಣ ವನ್ನಷ್ಟು ತಿಳಿಸಿದರೆ ಕೆಲಸ ಪೂರೈಸುವದು.

ನಮ್ಮ ಯಜಮಾನರಾದ ಕಟ್ಟೀವನೆ ವಾಸುದೇವರಾಯರ ಆಗಿನ ಆ ಮಾತು ಗಳನ್ನು ಕೇಳಿ ನನಗೂ ನನ್ನ ಗೃಹಿಣಿಗೂ ಏನೆನಿಸಿರಬಹುದೆಂಬದನ್ನು ಸುಹೃದಯ ರಾದ ವಾಚಕರೇ ಊಹಿಸಿಕೊಳ್ಳಬೇಕು. ಆ ಆನಂದದ ಪಡಿಕಟ್ಟನ್ನು ಶಬ್ದಗಳಿಂದ ವರ್ಣಿಸಿ ಹೇಳುವದು ಅಶಕ್ಯವೇ ಸರಿ ಇದೆಲ್ಲವೂ ಭಗವಲ್ಲೀಲೆಯೇ! ಎಂದು ನಾನು ಮನಸ್ಸಿನಲ್ಲಿ ಅಂದುಕೊಂಡು, ಆ ದಯಾಘನನಾದ ಭಗವಂತನನ್ನು ಮನದಲ್ಲಿಯೇ ಹೆಚ್ಚಾಗಿ ಕೊಂಡಾಡತೊಡಗಿದೆನು.

---

## ೧೦ ಸುಖವು ಸಾಸಿವೆಯಷ್ಟಾದರೆ, ದುಃಖವು ಗುಡ್ಡದಷ್ಟು.




ಖ-ಕಷ್ಟಗಳು ಒಂದರ ಹಿಂದೊಂದರಂತೆ ಹೇಗೆ ಬರುವವೋ, ಸುಖ-ಸಂತೋಷಗಳಾದರೂ ಸಂಸಾರದಲ್ಲಿ ಅದೇ ಪ್ರಕಾರ ಬರುತ್ತವೆ. ದುಃಖವು ಒಂದೇ ಎಂದೂ ಬರುವದಿಲ್ಲ. ತನ್ನ ಆಪ್ತ, ಇಷ್ಟ, ಮಿತ್ರ ಇದೆಲ್ಲ ಬಳಗದೊಡನೆ ಮನುಷ್ಯನ ಮೇಲೆ ಏರಿ ಬರುತ್ತದೆ. ಆ ದುಃಖದ ಪರಿಪಾಠದಂತೆ, ಸುಖದ ಪರಿಪಾಠವಾ ದರೂ ಹಾಗೆಯೇ ಇರುತ್ತದೆಂದು ಈಗ ನನಗೆ ಅನುಭವಕ್ಕೆ ಬರತೊಡಗಿತು. ದುಃಖದ ಅನುಭವವನ್ನೇ ಕಡೆತನಕ ತಕ್ಕೊಳ್ಳಲಿಕ್ಕೆ ನನ್ನ ಜನ್ಮವಿದೆಯೆಂದು ನನಗಿದು ವರೆಗೆ ಮೇಲಿಂದ ಮೇಲೆ ಅನಿಸುತ್ತಿತ್ತು. ದೇವರು ಇಡಿ ಬ್ರಹ್ಮಾಂಡದ ನಿಯಾಮ

ಕನು. ಆ ದಯಾರ್ಣವನು ನನ್ನನ್ನು ಮರೆತನು; ಇಷ್ಟೇ ಅಲ್ಲ, ಆತನು ನನ್ನ ಕಡೆಗೆ ಬೆನ್ನು ಮಾಡಿ ನಿಂತುಕೊಂಡು ನನ್ನ ಬಗ್ಗೆ ನಿಷ್ಠುರನೂ, ಕಠೋರನೂ, ನಿರ್ದಯನೂ ಆಗಿರುತ್ತಾನೆಂದು ನನಗೆ ಯಾವಾಗಲೂ ಅನಿಸುತ್ತಿತ್ತು. ನಾನು ಬಯಸುವದೊಂದು; ಅಥವಾ ನನಗೆ ಬೇಕಾದದ್ದೊಂದಾದರೆ, ದೇವರಿಂದ ನನಗೆ ಕೇವಲ ಅದಕ್ಕೆ ವಿಪರೀತವಾಗಿಯೇ ದೊರೆಯತಕ್ಕ ರಿವಾಜು ಇದುವರೆಗೂ ಬಿದ್ದು ಹೋಗಿತ್ತು. ಅದೊಂದು ವಿರುದ್ಧ ಸಿದ್ಧಾಂತವೇ ಆಗಿಬಿಟ್ಟಿತ್ತು; ಆದರೆ ಇತ್ತೀಚೆಗೆ ಅದೆಲ್ಲವೂ ಬದಲಾಗಿ, ಹೊಸ ಮನ್ವಂತರಕ್ಕೆ ಪ್ರಾರಂಭವಾದಂತಾಗಿತ್ತು. ದೇವರು ಇದುವರೆಗೆ ನನ್ನನು, ಉಪೇಕ್ಷಿಸಿದುದರ ತೀರ ವಿಪರೀತ ಸ್ಥಿತಿಯೇ ಈಗ ಉಂಟಾಗುತ್ತಿರುವದೆಂಬುದು ನನ್ನ ಅನುಭವಕ್ಕೆ ಬರಲಾರಂಭಿಸಿತು.

ಇತ್ತೀಚೆಗೆ ನಮ್ಮ ಬಾಳನಿಗೆ ತಿಂಗಳಿಗೆ ನೂರೈವತ್ತು ರೂಪಾಯಿಗಳ ನೌಕರಿಯು ಹತ್ತಿತು. ನಮ್ಮ ಇಡೀ ವರ್ಷದ ಪ್ರಪಂಚಕ್ಕೆ ಎರಡು-ಎರಡೂವರೆ ನೂರು ರೂಪಾಯಿಗಳೆಂದರೆ ಬೇಕಾದಷ್ಟಾಗುತ್ತಿರಲು, ನನ್ನ ಮಗನು ತಿಂಗಳಿಗೆ ೧೫೦ ರೂ. ಸಂಪಾದಿಸ ಹತ್ತಲು ನನಗೆ ನು ಕೊರತೆಯಾಗಬೇಕು? ಅಲ್ಲದೆ, ನಮ್ಮ ಬಾಳನಿಗೆ ೧೫೦ರಿಂದ ೧೦೦೦ ರೂ. ಗಳ ಗ್ರೇಡು ದೊರಕಿದೆಯೆಂದು ಜನರ ಬಾಯಿಂದ ಕೇಳಿ ನನಗೆಷ್ಟು ಸಂತೋಷವಾಗಿದ್ದೀತು? ಆ ಸುಖ ಸಂತೋಷಗಳಿಂದ ನನ್ನ ಬಜ್ಜು ದಿನೆ ಮೇಣ ರೀತಿಯಿಂದ ಬೆಳೆಯುತೊಡಗಿತು. ನಾನು ಮನೋರಾಜ್ಯ ಶಕಟ ನಡಿಸುವದಕ್ಕೆ ಶುರುವುಗೊಂಡು, ಆ ನನ್ನ ಮನೋರಾಜ್ಯದಲ್ಲಿ ನಾನೆಷ್ಟೋ ಪ್ರಾಂತ, ಸುಭೆ, ದೇಶಗಳನ್ನು ರಚಿಸಿದೆನು ಎಷ್ಟೋ ಮಾನಸಿಕ ಮುತ್ಸದ್ದಿರಿಯನ್ನು ನಡಿಸಿದೆನು.

ನಮ್ಮ ಚಂಪೆಯು ಶ್ರೀಮಂತರ ಸೊಸೆಯಾದಳು. ಆಕೆಯ ಲಗ್ನದ ಸಲುವಾಗಿ ನನಗೆ ಸ್ವಲ್ಪವೂ ಖರ್ಚು ಬರಲಿಲ್ಲ ಅಳಿಯನು ಶ್ರೀಮಂತನೂ, ಮನೆತನಸ್ಥನೂ, ವಯಸ್ಸು ರೂಪಗಳಿಂದ ನಮ್ಮ ಚಂಪೆಗೆ ಅನುರೂಪನೂ ಆಗಿದ್ದನು. ಲಗ್ನ ಸಮಾರಂಭವು ಒಳ್ಳೇ ಸಡಗರದಿಂದ ನಡೆದಿತ್ತು. ಈ ಸರ್ಪಪುರಿಯ ಕರಕ ಗುರುಭಟ್ಟನು ಈಗ ದೊಡ್ಡ ನಾಡಗೌಡರ ಬೀಗನಾಗಿದ್ದನು. ಅದರಿಂದ ಇತ್ತೀಚೆಗೆ ನನ್ನ ಮನಸ್ಸು ಇಲ್ಲದ ದೊಡ್ಡಿಸ್ತಿಕೆಯಲ್ಲಿ ದಂಗಾಗಿಬಿಟ್ಟಿತು. ಆ ಶ್ರೀಮಂತಿಕೆಯು ನಮ್ಮ ಚಂಪೆಯ ಮಾವನದು ಹಾಗು ಗಂಡನದು, ಆದರೆ ಅವರ ಮನೆಯ ವಸ್ತ್ರ-ಒಡವೆ, ಅವರ ಮನೆ-ಹೊಲಗಳ, ತೋಟ-ಪಟ್ಟಿಗಳ, ಧನ-ಧಾನ್ಯಗಳ, ದನ-ಕರುಗಳ, ಆಳು-ಹೋಳುಗಳ ಧನ್ಯತೆಯು ನನಗನಿಸಹತ್ತಿತು! ಈ ಗುರುಭಟ್ಟನೆಂದರೆ ಇದು ವರೆಗೆ ಯಾರಿಗೂ ಮಹತ್ವದ ಮನುಷ್ಯನೆಂದೆನಿಸುತ್ತಿರಲಿಲ್ಲ. ನನ್ನ ವಿದ್ವತ್ತೆಯ ಕೌತುಕವು ಯಾರಿಗೂ ಎಂದೂ ಅನಿಸಿರಲಿಲ್ಲ ನನ್ನ ರೀತಿ-ನಡವಳಿಗಳನ್ನು ಇಲ್ಲವೆ ನನ್ನಲ್ಲಿಯ ಎಷ್ಟೋ ಸದ್ಗುಣಗಳನ್ನು ಕಂಡುಕೊಂಡವರು ಇದು ವರೆಗೆ ನನಗಾರೂ ಸಿಕ್ಕಿರಲಿಲ್ಲ; ಆದರೆ ಈಗ ಆ ಮನ್ವಂತರವು ಕಳೆದ್ದದರಿಂದ, ತಮ್ಮ ಬೀಗರ ಯೋಗ್ಯತೆಯು ಸಣ್ಣ-ಪುಟ್ಟದಲ್ಲ, ಅವರು ದೊಡ್ಡ ಮನೆತನದವರು, ಅವರ ಮನೆಯವರೆಲ್ಲರೂ ಸಜ್ಜನರೂ ಕುಲೀನರೂ

ಆಗಿರುವರು ಮುಂತಾದ್ದನ್ನು ನಮ್ಮ ಚಂಪೆಯು ಮಾವನ ಮನೆಯವರು ಜನರಿಗೆಲ್ಲ ಹೇಳತೊಡಗಿದರು. ಆದರಿಂದ ಇತ್ತೀಚೆಗೆ ನನ್ನನ್ನು ಸ್ತುತಿಸುವವರ ಸಂಖ್ಯೆಯು ಉಬ್ಬತೊಡಗಿತು.

ಈ ಬಗೆಯಾಗಿ ಎಲ್ಲ ರೀತಿಯಿಂದಲೂ ತುಸ ದಿನಗಳಲ್ಲಿಯೇ ವಿಪರೀತಸ್ಥಿತಿಯುಂಟಾಯಿತು ಆದರಿಂದ ನನಗೆ ಎಷ್ಟೋ ವಿಚಾರಗಳು ಹೊಳೆದು, ಈ ಲೋಕದೊಳಗಿನ ಮೋಸುಗಾರಿಕೆಯ ಬಗ್ಗೆ ಬಹು ಮೋಜೆನಿಸಹತ್ತಿತು. ಯಾವ ಮನುಷ್ಯನ ಕೈಯಲ್ಲಿ ಸತ್ತೆಯು ಅಂದರೆ ಅಂಜಿಕೆಯನ್ನುಂಟುಮಾಡುವ ಸಾಧನವಿಲ್ಲವೋ, ಆತನ ಬಾಳು ನಾಯಿಗಿಂತಲೂ ಕಡೆ! ಬಾಳನ ನೌಕರಿಯಿಂದ ಹಾಗು ನನ್ನ ಬೀಗರ ಶ್ರೀಮಂತಿಕೆಯ ಯೋಗದಿಂದ ನನ್ನಲ್ಲಿ ಸತ್ತೆ ಹಾಗು ಭಯವನ್ನುಂಟುಮಾಡುವ ಸಾಧನಗಳಿರುತ್ತವೆಂದು ಜನರು ತಿಳಕೊಳ್ಳಹತ್ತಿದರು. ಸೂಕ್ಷ್ಮವಾಗಿ ಅವಲೋಕಿಸಿದರೆ, ಈ ಲೋಕದೊಳಗಿನ ವ್ಯವಹಾರಗಳೆಲ್ಲವೂ ಸತ್ತೆ ಹಾಗು ಭಯಗಳ ತಂತ್ರಗಳಿಂದಲೇ ನಡೆದಿರುತ್ತವೆಂದರೆ ತಪ್ಪಾಗಲಿಕ್ಕಿಲ್ಲ ದುಡ್ಡು ಹಾಗು ಅಧಿಕಾರ ಇವುಗಳ ಬಲದಿಂದಲೇ ಮಾನವನ ಬೆಲೆಯು ಹೆಚ್ಚುತ್ತದೆಂಬದು ಸತ್ಯವು, ಸತ್ಯವು; ತ್ರಿವಾರ ಸತ್ಯವು! ಹೇಳುವ ತಾತ್ಪರ್ಯವಿಷ್ಟೇ, ಈ ಸರ್ಪಪುರಿಯ ಗುರುಭಟ್ಟನು ಬೆಂಗಳೂರ ನಿವಾಸಿಗಳಾದ ನಾಡಗೌಡರ ಬೀಗತನದಿಂದಲೂ ತನ್ನ ಮಗನ ಅಧಿಕಾರದ ನೌಕರಿಯಿಂದಲೂ ಲೋಕದವರ ಮಾನ್ಯತೆಗೆ ಪಾತ್ರನೆಂದು ಅನ್ನಬಹುದು.

ಇದುವರೆಗೆ ನನ್ನಲ್ಲಿಯ ಸಜ್ಜನ ಸ್ವಭಾವದ, ದಶಗ್ರಂಥೀ ವಿದ್ವತ್ತೆಯ, ನಮ್ಮ ದೊಡ್ಡ ಮನೆತನದ, ರೀತಿ-ನಡಾವಳಿಗಳ ಬಗ್ಗೆ ಯಾರಿಗೂ ವಿಶೇಷವೆನಿಸುತ್ತಿರಲಿಲ್ಲ; ಆದರೆ ಮೇಲಿನ ಸತ್ತೆ-ದುಡ್ಡುಗಳ ಪ್ರಭಾವದಿಂದ ಅದು ಇತ್ತೀಚೆಗೆ ಜನರ ಕಣ್ಣಿಗೆ ಒಡೆದು ಕಾಣಿಸತೊಡಗಿತು. ಹೀಗೆ ಅತ್ತ ಜನರೂಢಿಯಲ್ಲಿ ತಿರುವು-ಮುರುವಾಗಲು, ಇತ್ತ ನನ್ನ ಅಂತರಂಗದಲ್ಲಿಯೂ ಅದೇ ಸ್ಥಿತಿಯು ಪ್ರಾಪ್ತವಾಯಿತು ಇತ್ತೀಚೆಗೆ ನನಗೆ ದೇವರ ನೆನಪೇ ಆಗದಾಯಿತು! ಕ್ಷಣಕ್ಷಣಕ್ಕೆ ದೇವಾ! ದೇವಾ! ಎಂದು ಕೂಗಿಕೊಳ್ಳುತ್ತಿದ್ದ ನನ್ನ ಮನಸ್ಸು, ಇತ್ತೀಚೆಗೆ ಆ ದೇವರನ್ನು ಮರೆತೇ ಬಿಟ್ಟಿತು. ಸಂಕಟ ಬಂದಾಗ ಮನುಷ್ಯನು ವೆಂಕಟರಮಣನನ್ನು ನೆನಿಸಿ ಪ್ರಾರ್ಥಿಸುತ್ತಿರುತ್ತಾನೆ; ಆದರೆ ಅನುಕೂಲ ಸ್ಥಿತಿಯು ಪ್ರಾಪ್ತವಾದಾಗ ಆ ದೇವರನ್ನು ಸ್ಮರಿಸದಿರುವದು ಒಳ್ಳೇ ಚಮತ್ಕಾರವೇ ಆಗಿದೆ.

ಶ್ರೀ ಕೃಷ್ಣಪರಮಾತ್ಮನು ಒಮ್ಮೆ ಕುಂತೀದೇವಿಯನ್ನು ಕುರಿತು:—"ದೇವೀ, ನಾನು ಪ್ರಸನ್ನನಾಗಿರುತ್ತೇನೆ ನಿನಗೆ ಬೇಕಾದ ವರವನ್ನು ಬೇಡಿಕೋ" ಎಂದು ಹೇಳಲು, ಕುಂತಿಯು—"ದೇವಾ! ನಾನು ಬೇಡುವ ವರವನ್ನು ಖಂಡಿತವಾಗಿಯೂ ಕೊಡುವೆಯಾ?" ಎಂದು ಮತ್ತೆ ಮತ್ತೆ ಬಿಚಾರಿಸಿ ಕೇಳಿದಳು. ಅದಕ್ಕೆ ಶ್ರೀ ಕೃಷ್ಣನಿಗೆ ಇವಳು ಅಂಥ ಯಾವ ವರವನ್ನು ಕೇಳುವಳೋ ಎಂದೆನಿಸಿತು; ಆದರೂ ಆತನು ತನ್ನ ಮನಸ್ಸಿನಲ್ಲಿ ಇಂದು ಇವಳು ಬೇಡುವ ವರವನ್ನು ಇವಳಿಗೆ ಕೊಟ್ಟೇ

ತೀರಬೇಕೆಂದು ನಿಶ್ಚಯಿಸಿಕೊಂಡು:—"ದೇವಿ, ನಿರಾಲೋಚನೆಯಿಂದ ಇಚ್ಛಿತ
ವರವನ್ನು ಕೇಳಿಕೋ" ಎಂದು ಹೇಳಿದನು. ಆಗ ಕುಂತಿಯು:—"ದೇವಾ! ನನಗೆ
ಯಾವಾಗಲೂ ವಿಪತ್ಕಾಲವನ್ನೇ ಒದಗಿಸು" ಎಂದು ಬೇಡಿಕೊಂಡದ್ದನ್ನು ಕೇಳಿ ಪರ
ಮಾತ್ಮನಿಗೆ ಬಹು ಕೆಡಕೆನಿಸಿತು. ಆದರಿಂದ ಆತನು ಕುಂತಿಯನ್ನು ನಿಷೇಧಿಸಿ:—
"ದೇವೀ, ನಿನಗೆ ಇಚ್ಛಿತ ವರವನ್ನು ಕೊಡಲಿಕ್ಕೆ ನಾನು ತತ್ಪರನಾಗಿರಲು, ನೀನಿದೇ
ನನ್ನು ಕೇಳಿಕೊಂಡೆ?" ಎಂದೆಂದನು. ಅದಕ್ಕೆ ಕುಂತೀದೇವಿಯು:—"ಕೃಷ್ಣಾ,
ಸಂಕಟಕಾಲದಲ್ಲಿಯೇ ನಿನ್ನ ನೆನಪಾಗುತ್ತದೆ; ಮತ್ತು ಅದೇ ಕಾಲಕ್ಕೆ ದೇವಾ, ನಿನ್ನ
ದೇನಾದರೂ ಸೇವೆ ಘಟಿಸುತ್ತದೆ; ಆದರ ಸುಖ-ಸಂತೋಷದ ಕಾಲಕ್ಕೆ ಅದಾವುದೂ
ಆಗುವದಿಲ್ಲ."

ಕುಂತೀದೇವಿಯ ಆ ಅಭಿಪ್ರಾಯವು ನನಗೆ ನಿಜವೆನಿಸುತ್ತದೆ. ಇತ್ತೀಚೆ;
ನಾನು ಮನಸ್ಸನ್ನು ಎಳೆ ಎಳೆದು ದೇವರ ಧ್ಯಾನಕ್ಕೆ ಹಚ್ಚುತ್ತಿರಲು, ಅದು ಅದರಲ್ಲಿ
ಕ್ಷಣಕಾಲ ಸಹ ಆಸಕ್ತವಾಗದೆ, ಎತ್ತಲೋ ಹೋಗಿಬಿಡುತ್ತಿತ್ತು. ಇಲ್ಲದ ಕಲ್ಪನೆ
ಗಳನ್ನು ಕಲ್ಪಿಸುವದರ ಕಡೆಗೇ ಆ ಮನಸ್ಸಿನ ಒಲವು. ಹೊಟ್ಟೆ ಹಾಗು ಬಹಿರಾ
ಡಂಬರದ ಅಭಿಮಾನಕ್ಕಾಗಿಯೇ ಆ ಮನಸ್ಸಿನ ಚಳವಳಿಯು. ನಾನು ನನ್ನ ಆಶೆ
ಯನ್ನು ಹತ್ತಿಕ್ಕಿ ಹತ್ತಿಕ್ಕಿ ಅದನ್ನು ಕೇವಲ ನನ್ನ ಅಂಕಿತಕ್ಕೆ ತಂದು ಕೊಂಡಿದ್ದೆನು;
ಆದರೆ ಅದು ಈಗ ಮನಸೋಕ್ತವಾಗಬಿಟ್ಟಿತ್ತು. ಗರ್ವವನ್ನು ತಾಳುವಂತಹ
ಪ್ರಸಂಗವು ನನಗೆ ಇದುವರೆಗೆಂದೂ ಬಂದಿರಲಿಲ್ಲ. ಎಂದಾವರೂ ನನ್ನ ವಿದ್ವತ್ಪ
ರೀಕ್ಷೆಯಾದರೆ, ವಿದ್ವಾನ್ ಬ್ರಾಹ್ಮಣನೆಂದು ನನ್ನ ಸನ್ಮಾನವಾದರೆ ಅಥವಾ ಯಾವು
ದೊಂದು ಸಭೆಯಲ್ಲಿ ನನ್ನ ಗೌರವವಾದರೆ ನನಗೆ ಧನ್ಯತೆಯೆನಿಸುತ್ತಿತ್ತು; ಆದರೆ
ಈಗಲೇನು? ಕಂಡಕಡೆಗೆಲ್ಲ ಅಭಿಮಾನವೆನಿಸುವ ಹಾಗು ಗರ್ವಪಡಹಚ್ಚುವ ಸಂಗತಿ
ಗಳೇ ಕಾಣಲಾರಂಭಿಸಿದವು. ಅದರಿಂದ ನನ್ನ ಮನೋವಿಕಾರಗಳು ಜನರ ನಿದರ್ಶ
ನಕ್ಕೆ ಬರಹತ್ತಿದವು. ನಾನು ಬಹು ಪ್ರಯತ್ನಿಸುತ್ತಿದ್ದೆನು. ಗರ್ವದ ನೆರಳು ಕೂಡ
ನನ್ನ ಮೇಲೆ ಬೀಳಲಾಗದೆಂದು ನನಗೆನಿಸುತ್ತಿತ್ತು; ಯಾಕೆಂದರೆ ಮನುಷ್ಯನು ಗರ್ವ
ದಿಂದ ಮೆರೆಯಹತ್ತಿದ ಕೂಡಲೆ ಆತನ ಅವನತಿಯ ನಿಶಾನೆಯು ಮೆರೆಯಹತ್ತಿ
ದಂತೆ ತಿಳಿಯತಕ್ಕದ್ದೆಂದು ಬೇರೆಯವರ ಗರ್ವದಿಂದ ನಾನು ಅನುಭವ ಪಡೆದಿದ್ದೆನು.
ದೇವರ ಹೆದರಿಕೆಯ ಸಲುವಾಗಿ ನಾನು ನನ್ನಲ್ಲಿ ತಲೆದೋರಹತ್ತಿದ್ದ ಗರ್ವವನ್ನು
ಸಾವರಿಸಿಕೊಳ್ಳುತ್ತಿದ್ದೆನು. ಈಗ ನಾನು ದೇವರನ್ನು ಮರೆತೆನೆಂದರೆ, ಆ ಪರಮಾ
ತ್ಮನು ಮತ್ತೆಲ್ಲಿ ಸಿಟ್ಟಾಗುವನೋ ಎಂಬ ಭೀತಿಯಿಂದ ನಾನು ಆಗಾಗ್ಗೆ ನನ್ನ ಮನ
ಸ್ಸನ್ನು ದೇವರ ಕಡೆಗೆ ಎಳೆದೊಯ್ಯುತ್ತಿದ್ದೆನು. ಜನರು ನನ್ನನ್ನು ಗರ್ವಿಷ್ಠನು,
ಮೂರ್ಖನು ಇಲ್ಲವೆ ಸ್ವಪರಿಸ್ಥಿತಿಯನ್ನು ಮರೆತವನು ಎಂದೆಂದಾರೆಂಬ ಅಂಜಿಕೆ
ಯಿಂದ ನಾನು ನನ್ನ ನಡವಳಿಕೆಯಲ್ಲೂ ಮಾತಿನಲ್ಲೂ ಬಹು ಎಚ್ಚರಿಕೆಯಿಂದ ನಡೆ
ಯುತ್ತಿದ್ದೆನು. ಆದರೆ ಇದುವರೆಗೆ ನನ್ನಲ್ಲಿದ್ದ ಸ್ವಾಭಾವಿಕತನವು ಇತ್ತೀಚೆಗೆ

ನನ್ನಿಂದ ದೂರಾಗಿ, ನನ್ನ ಸ್ವಾಮಿತ್ವವೆಲ್ಲ 'ಕಲಿತು ನಡೆಯುವ ವರ ಸ್ವಾಧೀನವಾಗಿ ಬಿಟ್ಟಿತ್ತು!

ಮೇಲೆ ವಿವರಿಸಿದ ಸಂಗತಿಯು ನನ್ನ ಸ್ವಂತದ್ದಾಯಿತು; ಆದರೆ ನನ್ನ ಗೃಹಿಣಿಯ ಸ್ಥಿತಿ-ಗತಿಗಳನ್ನೇನು ಬಣ್ಣಿಸಬೇಕು? ಅವಳಿಗೆ ಸ್ವರ್ಗವೆಂಬದು ಕೇವಲ ಮೂರೇ ಬೆರಳು ಉಳಿದಂತಾಗಿತ್ತು. ಮಳೆಗಾಲದೊಳಗಿನ ಹೊಳೆ-ಹಳ್ಳಗಳಂತೆ ಅವಳು ಯಾವಾಗಲೂ ಉಬ್ಬುಬ್ಬಿ ನಡೆಯತೊಡಗಿದ್ದಳು. ಅವಳ ಈ ತರದ ವರ್ತನಕ್ಕೆ ನನ್ನ ದೋಷವೋ ಅಥವಾ ಅವಳ ನಿರಂತರದ ಸ್ವಭಾವವೇ ಹಾಗಾಗಿ ಬಿಟ್ಟಿತೋ ದೇವರೇ ಬಲ್ಲ! ನಮ್ಮ ಬಾಳನೂ-ಆತನ ಸಂಬಳವೂ, ಚಂಪೆಯೂ-ಆಕೆಯ ಅತ್ತೆಯ ಮನೆಯೂ ಇವುಗಳ ಹೊರತು ನನ್ನ ಗೃಹಿಣಿಯು ಮಾತಿನಲ್ಲಿ ಬೇರೆ ಶಬ್ದಗಳೇ ಹೊರಡುತ್ತಿದ್ದಿಲ್ಲ. ಇವುಗಳ ವ್ಯತಿರಿಕ್ತವಾದ ಸಂಭಾಷಣವನ್ನು ಅವಳು ಯಾರ ಕೂಡವೂ ಮಾಡುತ್ತಿರಲಿಲ್ಲ! ಇತ್ತೀಚೆಗೆ ಅವಳಿಗೆ ಬೇಕಾದಷ್ಟು ಪುರುಸೊತ್ತಿತ್ತಾದರೂ ಅವಳು ನನ್ನೊಡನೆ ಮನಬಿಚ್ಚಿ ಮಾತನಾಡಲಿಕ್ಕೆ ಕೂಡುತ್ತಿರಲಿಲ್ಲ. ಇದು ಬೇಕು-ಅದು ಬೇಕು ಮುಂತಾದ ಸಾಮಾನು-ಸಟ್ಟುಗಳ ಅಥವಾ ಬೇರೆ ಪ್ರಾಪಂಚಿಕ ತರ-ಬರುವ ಸಂಗತಿಗಳ ಹೊರತು ಅವಳು ಬೇರೆ ವಿಷಯಕ್ಕೆ ನನ್ನೊಡನೆ ಮಾತೇ ಆಡದಾದಳು! ಇನ್ನು ಅವಳಿಗೆ ನಾನೆಂದರೆ, ನಿರುಪಯುಕ್ತವಾದ ನಿರ್ಮಾಲ್ಯವೆಂದೆನಿಸಿತೋ ಅಥವಾ ನನ್ನನ್ನು ಇನ್ನು ಕೇಳುವವಾದರೂ ಏನು? ಎಂದೆನಿಸಿತೋ, ಆದಾರು ಬಲ್ಲರು? ಅಳಿಯನ, ಮಗಳ ಮತ್ತು ಮಗನ ಡೌಲನ್ನು ಬರ-ಹೋಗುವವರಿಗೆ ಹೇಳುತ್ತ ಕೂಡ್ರುವದರ ಹೊರತು ಅವಳಿಗೆ ಮತ್ತೇನೂ ಸೂಚಿಸುವದೇ ಇಲ್ಲೋ ಏನೋ ಎಂಬದು ನನಗೆ ತಿಳಿಯದಾಯಿತು; ಆದರೆ ಅವಳ ಸ್ಥಿತಿಯು ಮಾತ್ರ ಹಾಗಾದದ್ದು ನಿಜವು. ಕೆಲಸವಾದ ಮರುತಿಂಗಳ ಒಂದನೇ ತಾರೀಖಿನ ದಿವಸ ನಮ್ಮ ಬಾಳನಿಗೆ ದೊರೆತ ಮೊದಲನೇ ತಿಂಗಳ ಸಂಬಳದ ೧೫೦ ರೂಪಾಯಿಗಳನ್ನು ಆತನು ತನ್ನ ಕಚೇರಿಯಿಂದಲೇ ಶಿಪಾಯಿಯೊಡನೆ ನನ್ನ ಕಡೆಗೆ ಕಳಿಸಿಕೊಟ್ಟನು. ಆ ಕಾಲಕ್ಕೆ ನನ್ನ ಮನಸ್ಸಿನ ಸ್ಥಿತಿಯೇನಾಯಿತೆಂಬದನ್ನು ವರ್ಣಿಸಲಸಾಧ್ಯವು! ದೇವರ ಮಹಿಮೆಯನ್ನು ನೆನಿಸುವ ಮೊದಲು 'ನಾನು ನನ್ನ ಜಾಣತನವನ್ನುಪಯೋಗಿಸಿ ಸರ್ಪಪುರಿಯನ್ನು ಬಿಟ್ಟು ಈ ಬೆಂಗಳೂರಿಗೆ ಬಂದನೆಂದೇ ಈ ದಿನಗಳು ಲಭಿಸಿದವು!' ಎಂದು ನನ್ನ ಸ್ವಂತದ ಬಗ್ಗೆ ನನಗೆ ಅಹಂಮನ್ಯತೆಯೆನಿಸದಿರಲಿಲ್ಲ!

ವಾಚಕರೇ, ನೋಡಿದಿರಾ ಈ ಚಮತ್ಕಾರವನ್ನು! ಅನಿಷ್ಟ ಸಂಗತಿಗಳ ಭಾರವನ್ನು ಮಾತ್ರ ದೇವರ ಮೇಲೆ ಹೊರಿಸಲಿಕ್ಕೆ ಧಾವಿಸುವದು; ಮತ್ತು ಇಷ್ಟವಾದುದನ್ನೆಲ್ಲ ತಾನೇ ಮಾಡಿದೆನೆಂದು ಅಭಿಮಾನ ವಹಿಸಲಿಕ್ಕೆ ಹಾತೊರೆಯುವದು ಇದಕ್ಕೆ ಮಾನವನ ಮೂರ್ಖತನವೆನ್ನಬೇಕಲ್ಲದೆ ಮತ್ತೇನು ಹೆಸರಿಸಬೇಕೋ ತಿಳಿಯದು. ಇರಲಿ. ಬಾಳನು ನನ್ನ ಕಡೆಗೆ ತನ್ನ ಸಂಬಳ ಕಳಿಸಿದುದರಿಂದ ಒಂದು ಸಂಗತಿಯು ಮಾತ್ರ ಬಹು ವಿಹಿತವಾದಂತಾಯಿತು; ಯಾಕಂದರೆ, ಅಂದಿನಿಂದ ನನ್ನ

ಗೃಹಿಣಿಯು ಸಂಸಾರದ ಪ್ರತಿಯೊಂದು ಮಾತಿನ ಬಗ್ಗೆ ನನ್ನಲ್ಲಿ ಹೇಳ-ಕೇಳಲಿಕ್ಕೆ ಬರತೊಡಗಿದಳು. ಆಗ ನಾನು ಅವಳನ್ನುದ್ದೇಶಿಸಿ:—"ಏನಿರೀ, ಇಂದು ಮತ್ತೆ ಈ ಗುರುಭಟ್ಟನನ್ನು ಈ ಬಗ್ಗೆ ಕೇಳಬೇಕೆಂದೆನಿಸಿತೇನು?" ಎಂದು ಕೇಳಲು, ಅವಳು:—"ಅಂದರೆ, ಈ ಮಾತಿನ ಅರ್ಥವೇ ನನಗೆ ತಿಳಿಯುಲೊಲ್ಲದು" ಎಂದು ಅಂದಳು.

ನಾನು:—"ನಿಜ; ಆ ಅರ್ಥವು ನಿಮಗೆ ಹೇಗೆ ತಿಳಿದೀತು?"

ನನ್ನ ಈ ಮಾತನ್ನು ಕೇಳಿದ ಕೂಡಲೆ ಅವಳು ಸಿಟ್ಟಿನಿಂದ ಚಡಪಡಿಸುತ್ತ ಒಳಗೆ ಹೊರಟು ಹೋದಳು. ಈಗ ಅವಳಿಗೆ ನನ್ನ ಇಷ್ಟು ಮಾತೂ ರುಚಿಸಲಿಲ್ಲ! ಈ ಮೊದಲು ನಾನು ಸಿಟ್ಟಾದಾಗ್ಗೆ ಅವಳು ನನ್ನನ್ನು ಪ್ರಸನ್ನ ಪಡಿಸಿಕೊಳ್ಳುವದಕ್ಕಾಗಿ ಹಲವು ಬಗೆಯಿಂದ ಪ್ರಯತ್ನಿಸಿ, ನನ್ನ ಸಿಟ್ಟನ್ನು ಕಳೆಯಲಿಕ್ಕೆ ಪ್ರಯತ್ನಿಸುತ್ತಿದ್ದಳು; ಆದರೆ ಇತ್ತೀಚೆಗೆ ನನ್ನ ಗೃಹಿಣಿಯ ಮನಸ್ಸಿನ ಆ ಭಾವವು ಬದಲಾಗಿ ಹೋಗಿತ್ತು. ಆಗ ನಾನೂ ನನ್ನ ಮನಸ್ಸಿನಲ್ಲಿ ಆಲೋಚಿಸಿದ್ದೇನಂದರೆ, ಪ್ರಸ್ತುತದ ಅನುಕೂಲ ಸ್ಥಿತಿಯಿಂದ ಸುಖ-ದುಃಖಗಳ ಪ್ರಸಂಗದಲ್ಲಿ ಏಕೋಪ್ರಕಾರವಾಗಿರಬೇಕೆಂಬ ತತ್ತ್ವಜ್ಞಾನವನ್ನು ಬಲ್ಲ ನನ್ನಂಥ ಪ್ರಾಜ್ಞನ ಸ್ಥಿತಿಯೇ ಬದಲಾಗಿರಲು, ನನ್ನ ಗೃಹಿಣಿಯಂತಹ ಕೇವಲ ಅಜ್ಞ ಹೆಂಗಸಿನ ಪಾಡೇನು? ಹೀಗೆ ನಾನು ಮನಸ್ಸಿನಲ್ಲಿ ಅಂದುಕೊಳ್ಳುತ್ತಿರುವಾಗಲೇ, ನನ್ನ ಗೃಹಿಣಿಯು ಒಳಗಿನಿಂದಲೇ "ಚಂಪಕ್ಕಾ, ದೇವರ ಹರಕೆ ತೀರಿಸುವದಕ್ಕೆಂದು ಅಭಿಷೇಕ ಮಾಡಿಸುವದಿದೆ; ಬ್ರಾಹ್ಮಣ ಮುತ್ತೈದೆಯರಿಗೆ ಊಟಕ್ಕೆ ಹೇಳುವದಿದೆ; ಗುರ್ತಿನ ಜನರಿಗೆಲ್ಲ ಮಿಠಾಯಿ ಹಂಚತಕ್ಕದ್ದಿದೆಯೆಂದು ಹೊರಗೆ ಹೇಳು ಹೋಗು" ಎಂದು ಸಿಟ್ಟಿನಿಂದ ಹೇಳಿದಳು.

ಅದನ್ನು ಕೇಳಿದ ಕೂಡಲೆ ನಾನು ಚಟ್ಟನೆ ಎದ್ದು ಒಳಗೆ ಹೋಗಿ, ಸೌಮ್ಯ ರೀತಿಯಿಂದ ಅವಳಿಗೆ ನಾಲ್ಕು ತಿಳುವಳಿಕೆಯ ಮಾತುಗಳನ್ನು ಹೇಳಿದೆನು. ಗರ್ವ ಪಡಬಾರದು, ಲೀನತೆಯನ್ನು ಬಿಡಕೂಡದು; ಇದೆಲ್ಲ ಊರ್ಜಿತ ಸ್ಥಿತಿಗೆ ದೇವರ ದಯೆಯೇ ಹೊರತು ನಮ್ಮ ಮಾನವರ ಪ್ರಯತ್ನವೇನು? ಎಂಬದಾಗಿ ಉಪದೇಶಿಸಿದೆನು. ಅದನ್ನು ಕೇಳಿ ಅವಳು ಮತ್ತೆ ದಾರಿಗೆ ಬಂದಳು. ನನ್ನ ಗೃಹಿಣಿಯು ಹುಟ್ಟಾ ಸಜ್ಜನ ಸ್ವಭಾವದವಳು! ಮತ್ತು ದೊಡ್ಡ ಮನಸ್ಸಿನವಳು. ಅಂಥವಳಲ್ಲಿ ನಮ್ಮ ವೈದಿಕರ ಉಪದೇಶವು ನಾಟದಿದ್ದರೆ ಮತ್ತಾರಲ್ಲಿ ನಾಟಬೇಕು? ಮನೆಯೊಳಗಿನ ಹೆಂಗಸರು ರೀತಿಯಿಂದ ನಡೆಯದಿರುವಾಗ ಇಲ್ಲವೆ ಇಲ್ಲದ ದೋಷಗಳು ಅವರ ಭಾಷಣದಲ್ಲಿ ಅಥವಾ ನಡವಳಿಕೆಯಲ್ಲಿ ಕಂಡು ಬಂದಾಗ ಸಿಟ್ಟಾದರೆ ಆ ಕಾಲಕ್ಕೆ ನಡೆಯುವುದಿಲ್ಲ. ಶಾಂತರೀತಿಯಿಂದ ಹಾಗು ವಿಸ್ತಾರಪೂರ್ವಕವಾಗಿ ಅವರೊಳಗಿನ ದೋಷಗಳ ಬಗ್ಗೆ ಚರ್ಚಿಸಿ, ಅವುಗಳ ಬಗ್ಗೆ ಅವರ ಮತವೇನಿರುತ್ತದೆಂಬದನ್ನು ಕೇಳಿಕೊಂಡರೆ ಮತ್ತು ಅವರ ದೋಷಗಳನ್ನು ಅವರಿಗೆ ನಿಃಸಂಕೋಚದಿಂದ ತೋರಿಸಿ ಕೊಟ್ಟರೆ, ಅವರಿಗೆ ಚನ್ನಾಗಿ ತಿಳಿಯುವದೆಂದು ನನ್ನ ಸ್ವಂತದ ಅನುಭವವಿರುತ್ತದೆ. ಸಿಟ್ಟಿನಿಂದ ಹುಚ್ಚನಂತಾಗಿ, ಆ ಸಿಟ್ಟಿನ ಭರದಲ್ಲಿ ಬಾಯಿಗೆ ಬಂದಂತೆ ಬೊಗಳುವದರಿಂದ ಅವರಲ್ಲಿ

ನಮ್ಮ ವಿಷಯಕ್ಕೆ ಹೆಚ್ಚು ತಪ್ಪು ತಿಳುವಳಿಕೆಯುಂಟಾಗುತ್ತದೆ; ಹಾಗು ಪರಸ್ಪರರೊಳಗಿನ ಒಕ್ಕಟ್ಟಿಗೆ ಬಾಧಕವುಂಟಾಗದಿರುವುದಿಲ್ಲ. ತಪ್ಪು ತಿಳುವಳಿಕೆಯುಂಟಾಗಲಿಕ್ಕೆ ಆಸ್ಪದವನ್ನೇ ಕೊಡ ಕೂಡದು; ಮತ್ತು ತನಗೆ ಏನು ಅನಿಸಿತು ಹಾಗು ಏನು ಅನಿಸುತ್ತದೆ; ಜನರಿಗೆ ಏನು ಅನಿಸಿತು? ಮುಂತಾದವುಗಳ ಬಗ್ಗೆ ವಿಶದವಾಗಿ ವಿವರಿಸಿ ಹೇಳಿತೆಂದರೆ, ಆ ಮೇಲೆ ಮನೆಯ ಕೆಲಸದಲ್ಲಿ ದೋಷಗಳುಳಿಯುವದಿಲ್ಲ. ಮಾತುಮಾತಿಗೆ ಸಿಟ್ಟಿಗೇಳುವದಕ್ಕಿಂತ ಶಾಂತರೀತಿಯಿಂದ ತಿಳಿಹೇಳುವ ಪದ್ಧತಿಯು ಪ್ರಪಂಚದಲ್ಲಿ ಹೆಚ್ಚು ಉಪಯೋಗವಾಗುತ್ತದೆ, ಸಂಸಾರ ಸುಖಕ್ಕೆ ಅದೇ ಮಹಾಮಂತ್ರದಂತಾಗಿರುತ್ತದೆ.

ನನ್ನ ಹೆಂಡತಿಯು ಸಿಟ್ಟಿನಿಂದ ಕಾಲುಗಳನ್ನಪ್ಪಳಿಸುತ್ತ ಒಳಗೆ ಹೊರಟು ಹೋದಳೆಂದು ನಾನೂ ಆಗ ಸಿಟ್ಟಾಗಿದ್ದರೆ, ಅವಳಿಗುಂಟಾಗಿದ್ದ ತಪ್ಪುತಿಳುವಳಿಕೆಯು ನಿವಾರಣವಾಗದೆ, ಅದು ದೃಢಮೂಲವಾಗುತ್ತಿತ್ತು. ನನ್ನ ಸಿಟ್ಟಿನಿಂದ ಅವಳಿಗೆ ತ್ರಾಸವಾಗುತ್ತಿತ್ತು; ಮತ್ತು ನನಗಂತೂ ಅದರಿಂದ ತ್ರಾಸವು ಬಿಟ್ಟಿದ್ದೇ ಅಲ್ಲ. ಇದ್ದಾಗಿಯೂ ಉಭಯತರೂ ಬಿನ್ನರೂ ತ್ರಸ್ತರೂ ಆಗುತ್ತಿದ್ದೆವು. ಅದರ ಮೂಲ ಕಾರಣವು ಕಡಿಯದ್ದರಿಂದ ಅದೇ ಕಾರಣದ ಮೂಲಕ ಪುನಃ ಮತ್ತೆ ತಪ್ಪುತಿಳುವಳಿಕೆಯಾಗುವದು. ಅದು ವೃದ್ಧಿಂಗತವಾಗುತ್ತ ಆಗುತ್ತ ಪ್ರೇಮ ಮತ್ತು ಆನಂದ, ಸಂತೋಷ ಮತ್ತು ಸಮಾಧಾನ ಇವುಗಳ ಬದಲು ತಿರಸ್ಕಾರ, ತ್ರಾಸ, ಬೇಸರಿಕೆ, ಧಡಪಡಿಕೆ ಇವುಗಳುಂಟಾಗಿ ಸುಖವನ್ನು ಭ್ರಷ್ಟಗೊಳಿಸಿ, ಕುಟುಂಬದಲ್ಲೆಲ್ಲ ದುಃಖದ ಸಾಮ್ರಾಜ್ಯವನ್ನೇ ನೆಲೆಗೊಳಿಸುತ್ತವೆ. ಸವಿನಯತೆಯಿಂದ ಚೆನ್ನಾಗಿ ತಿಳಿಹೇಳಿದರೆ, ಉಭಯತರಿಗೂ ಸುಖ-ಸಮಾಧಾನಗಳುಂಟಾಗುತ್ತವೆ. ತನ್ನ ಸ್ವಭಾವದ ಪಡಿಕಟ್ಟು ಹೀಗೆ; ತನಗೆ ಇದು ರುಚಿಸುತ್ತದೆ; ಇದು ರುಚಿಸುವದಿಲ್ಲ. ಈ ಸಂಗತಿಗಳನ್ನು ಗಂಡಸರು ಒಮ್ಮೆ, ತಮ್ಮ ಹೆಂಡಂದಿರಿಗೆ ಚೆನ್ನಾಗಿ ತಿಳಿಹೇಳಿದರೆ ಮತ್ತು ಅವು ಅವರಿಗೆ ತಿಳಿದರೆ ಮತ್ತು ತಮ್ಮ ಗಂಡನ ಮನಸ್ಸಿನ ಒಲವಿನಂತೆ ಹಾಗು ಆತನಿಗೆ ರುಚಿಸುವಂತೆಯೇ ವರ್ತಿಸುವೆವೆಂದು ಹೆಂಡಂದಿರು ಮನದಟ್ಟು ಮಾಡಿಕೊಂಡರೆಂದರೆ ಹಾಗು ಗಂಡಸರು ಕೆಲ ಸಹಜವಾದ--ಸ್ತ್ರೀಸ್ವಭಾವಕ್ಕನುರೂಪವಾದ-ಕ್ಷುಲ್ಲಕ ಸಂಗತಿಗಳ ಕಡೆಗೆ ದುರ್ಲಕ್ಷ್ಯ ಮಾಡಿ ಬಿಟ್ಟರೆ ಸಂಸಾರವು ಸಕ್ಕರೆಗಿಂತಲೂ ಸವಿಯಾಗದಿರಲಿಕ್ಕಿಲ್ಲ. ತಪ್ಪು ತಿಳುವಳಿಕೆ, ತನ್ನ ಮನೋಗತವನ್ನು ಬಿಚ್ಚಿ ಹೇಳದೆ ಬಚ್ಚಿಡುವುದು ಹಾಗು ಪರಸ್ಪರರ ಹಕ್ಕು-ಬಾಧ್ಯತೆಗಳ ವಿಷಯದ ಅಜ್ಞಾನ ಈ ತ್ರಿದೋಷಗಳ ಮೂಲಕ ಬಹು ಜನರ ಪ್ರಾಪಂಚಿಕ ಸುಖ-ಸಮಾಧಾನಗಳ ಕೊಲೆಯಾಗಿ ಹೋಗಿರುವದು.

ತಮ್ಮ ಇಚ್ಛೆ, ತಮ್ಮ ತಿಳುವಳಿಕೆ, ತಮ್ಮ ರುಚಿವೈಚಿತ್ರ್ಯ ಇವುಗಳನ್ನು ಮೂಕ ಭಾವದಿಂದಿರಿಸುವದರ ಬದಲು, ಅವುಗಳನ್ನು ಮನಬಿಚ್ಚಿ ಹೇಳುವದು ಪ್ರಪಂಚದಲ್ಲಿ ಅತ್ಯವಶ್ಯವಾಗಿರುತ್ತದೆ. ವರ್ತನದ ಧೋರಣದಿಂದಲೂ ಸಹವಾಸದ

ಯೋಗದಿಂದಲೂ ಅವು ಪರಸ್ಪರರಿಗೆ ತಿಳಿಯಬೇಕೆಂಬ ಮಾತು ನಿಜವು; ಆದರೆ ಅವು ಹಾಗೆ ತಿಳಿಯುವ ಪೂರ್ವದಲ್ಲೇನು ಅಲ್ಪಸ್ವಲ್ಪ ಅನರ್ಥಗಳಾಗುವವೋ? 'ಮುಳುಗುವವನಕಾಲು ತೆಗ್ಗಿನಲ್ಲಿ' ಎಂಬಂತೆ ತಪ್ಪು ತಿಳುವಳಿಕೆಯು ಶೀಘ್ರವು ವೈರದ ಕಡೆಗೆ ಒತ್ತರಿಸುವದೆಂಬ ಅನುಭವವನ್ನು ಲಕ್ಷ್ಯದಲ್ಲಿರಿಸಬೇಕು. ಸಾರಾಂಶವೇನೆಂದರೆ, ಸದುಪದೇಶದಿಂದಲೂ ಶಾಂತವೃತ್ತಿಯಿಂದಲೂ ನಾನು ನನ್ನ ಗೃಹಿಣಿಗೆ ಆಕೆಯ ದೋಷಗಳನ್ನು ತೋರಿಸಿದೆನು; ಮತ್ತು ಕಡೆಗೆ ಅದರ ಪರಿಣಾಮವು ಚೆನ್ನಾಗಿಯೇ ಆಯಿತು. ಸುಖದ ಮೊದಲನೇ ಸುಳಿಗಾಳಿಯಿಂದ ಎಚ್ಚರದಪ್ಪಿದ್ದ ಆಕೆಯ ಮನೋವೃತ್ತಿಯು ದಾರಿಗೆ ಬಂತು. ತಾವು ಒಮ್ಮೆಲೆ ಶ್ರೀಮಂತಿಕೆಯನ್ನೇರಿದ್ದರೂ ಸರಿಯಿದ್ದವರು ಹುಚ್ಚರಾಗಿಲ್ಲವೆಂಬದನ್ನು ತಮ್ಮ ಕೃತಿಯಿಂದ ಲೋಕದವರಿಗೆ ತೋರಗೊಡುವದು ಎಷ್ಟು ಅವಶ್ಯವಿದೆಯೆಂಬದನ್ನೂ, ತಮ್ಮ ಮೊದಲಿನ ಬಡತನವು ಹಾಗು ಆಗಿನ ತಮ್ಮ ರೀತಿ-ರಿವಾಜುಗಳು ಕಾಯುವಂತಾದರೆ ಶೋಭಿಸುತ್ತದೆಂಬದನ್ನೂ, ದೇವರು ತಮ್ಮ ದೈನ್ಯವನ್ನು ನೀಗಿದನು, ಆ ದೇವರ ದಯೆಯಿಂದಲೇ ಈ ಸುಖದ ದಿನಗಳು ಕಂಡೆವೆಂದು ಆತನ ಉಪಕಾರವನ್ನು ಸ್ಮರಿಸುವದಕ್ಕೆ ತಾವು ಎಂದೂ ಅಜಾಗರೂಕರಾಗಕೂಡದು ಮುಂತಾದ ಸಂಗತಿಗಳನ್ನು ನಾನು ನನ್ನ ಗೃಹಿಣಿಗೆ ಚೆನ್ನಾಗಿ ತಿಳಿಸಿಹೇಳಿದೆನು. ಅದರ ಉಪಯೋಗವು ವಿಶೇಷವಾಗಿ ಆಯಿತು. ಕಾಲವು ಚಂಚಲವಿರುತ್ತದೆ ಸುಖದ ನೆಳಲು ನಡುಹಗಲಿನಂತೆ. ಅದರಿಂದ ಅದನ್ನು ನೆಚ್ಚಕೂಡದು. ಸುಖ ಮತ್ತು ದುಃಖ ಇವುಗಳ ಮಿಶ್ರಣವನ್ನೇ ಮನುಷ್ಯನಿಗೆ ಒದಗಿಸುವದು ದೇವರ ನಿಯಮವು, ಮತ್ತು ಅದೇ ಸೃಷ್ಟಿಕ್ರಮವು. ಮುಂತಾದ ವಿಷಯಗಳನ್ನು ಉದಾಹರಣೆ ಸಹಿತವಾಗಿ ನನ್ನ ಗೃಹಿಣಿಗೆ ನಾನು ಹೇಳಿದೆನು. ಅದರ ಪರಿಣಾಮವು 'ಬೋರ್ಗಲ್ಲಮೇಲೆ ಮಳೆಗರೆದಂತಾ'ಗಲಿಲ್ಲ. ಬೇರೆಯವರಿಗೆ ಉಪದೇಶ ಮಾಡುವಾಗ ಪಾಂಡಿತ್ಯವನ್ನು ಬೇಕಾದಷ್ಟು ಹೇಳಿಕೊಳ್ಳಲಿಕ್ಕೆ ಬರುತ್ತದೆ; ಆದರೆ ಆ ಮಾತು ಸ್ವಂತಕ್ಕೆ ಏನೂ ಉಪಯೋಗವಾಗುವದಿಲ್ಲವೆಂಬ ವಿಚಾರವು ಆಗ ನನ್ನ ಮನಸ್ಸಿನಲ್ಲಿ ಬಾರದಿರಲಿಲ್ಲ. ನಾನು ನನ್ನ ಗೃಹಿಣಿಗೆ ಉಪದೇಶ ಮಾಡಿದಂತೆ ನನಗಾದರೂ ಅಂಥ ಉಪದೇಶದ ಅವಶ್ಯಕತೆಯಿದ್ದಿತು. ಇರಲಿ

ನಾವು ಅಂದಿನಿಂದ ಸುಖ-ಸಮಾಧಾನದಲ್ಲಿ ಕಾಲ ಕ್ರಮಿಸತೊಡಗಿದೆವು. ನಾಲ್ಕೈದು ತಿಂಗಳುಗಳು ಹಾಗೆ ಕಳೆದಿರಬಹುದು; ಆದರೆ ಬರಬರುತ್ತ ನನಗೆ ಆ ಸುಖದಲ್ಲಿಯೂ ಬೇಸರವುಂಟಾಗಹತ್ತಿತೆಂದು ಹೇಳಿದರೆ ನನ್ನ ಈ ಮಾತು ಹೆರವರಿಗೆ ಸಟೆಯೆಂದು ತೋರಲಿಕ್ಕಿಲ್ಲ. ಸತ್ತವನ ಬಗ್ಗೆ ದುಃಖಿಸುತ್ತಿರುವಾಗಲೂ ಒಂದು ಬಗೆಯ ಸುಖವೆನಿಸುತ್ತದೆ. ಅದರಂತೆಯೇ ಪ್ರಪಂಚದೊಳಗಿನ ಮೊದಲಿನ ದಾರಿದ್ರ್ಯದ ಹಾಗು ದುಃಖ-ಕ್ಲೇಶಗಳ ಅನುಭವವನ್ನು ಮತ್ತೆ ಮತ್ತೆ ಸ್ಮರಿಸುವದರಿಂದಲೂ ಒಂದು ಬಗೆಯ ಸಮಾಧಾನವುಂಟಾಗುತ್ತದೆ. ಬರಿಯ ಸುಖವು ಎಂದೂ ಆನಂದದಾಯಕವಿರುವದಿಲ್ಲೆಂದು ನನ್ನ ಅನುಭವವಿರುತ್ತದೆ. ಹೊಟ್ಟೆಯು ಹಸಿಯದ ಹೊರತು

ಅನ್ನವು ಹೇಗೆ ರುಚಿಸುವದಿಲ್ಲವೋ, ಬಿಸಿಲೊಳಗೆ ಹೋಗದ ಹೊರತು ನೆಳಲಿನ ಸುಖವು ಹೇಗೆ ತಿಳಿಯುವದಿಲ್ಲವೋ ಅದರಂತೆಯೇ ಬಡತನ-ದಾರಿದ್ರ್ಯಗಳನ್ನು ಚೆನ್ನಾಗಿ ಅನುಭೋಗಿಸದ ಹೊರತು ಶ್ರೀಮಂತಿಕೆಯ ಸುಖವು ತಿಳಿಯಲಿಕ್ಕೆ ಶಕ್ಯವಿಲ್ಲೆಂಬದು ನಮ್ಮ ಕುಟುಂಬದವರು ಚೆನ್ನಾಗಿ ಅನುಭವ ಪಡೆದಿದ್ದರು; ಆದರೆ ಇಡೀ ದಿವಸವು ಸುಖದ್ದಾದರೂ ಅದನ್ನು ಕ್ರಮಿಸಲಿಕ್ಕೂ ಜಡವೆನಿಸದಿರುವದಿಲ್ಲ. ಅದು ಹಾಗೆ ಏಕೆ ಆಗುವದೆಂಬದು ಮಾತ್ರ ನನಗೆ ತಿಳಿಯದಾಯಿತು. ಇದಕ್ಕೆ ಮೊದಲು ಪ್ರಪಂಚದಲ್ಲಿ ನನಗೆ ದಿನಾಲು ಹೊಸ ಹೊಸ ಚಿಂತೆಗಳುಂಟಾಗುತ್ತಿದ್ದವು. ಇಂದಿನ ದಿನವು ಕಳೆಯಿತು; ನಾಳೆಯ ದಿನವು ಹೇಗೆ ಕಳೆದೀತೆಂಬದರ ಬಗ್ಗೆ ನನಗೆ ಯೋಚನೆಯೆನಿಸುತ್ತಿತ್ತು. ಉಪ್ಪು ತಂದೆನು, ಬೆಲ್ಲಕ್ಕೆ ದುಡ್ಡಿಲ್ಲಲ್ಲ! ಹೇಗೆ ಮಾಡಬೇಕೆಂಬ ಯೋಚನೆಯು ನನ್ನನ್ನೆಂದೂ ಬಿಟ್ಟಿರಲಿಲ್ಲ. ಯಾವನೊಬ್ಬ ಸುಖೀ ಪುರುಷನನ್ನು ಕಂಡ ಕೂಡಲೆ ಆತನು ಸುಖಿಯೇಕೆ? ನಾನು ಹೀಂಗೆ ಸದಾ ದುಃಖಿಯೇಕೆಂಬ ಆಲೋಚನೆಯು ನನ್ನನ್ನು ಯಾವಾಗಲೂ ಹುರುಪಳಿಸಿ ಬಿಡುತ್ತಿತ್ತು. ಬಡತನದ ಮೂಲಕ ನನ್ನ ಸದ್ಗುಣಸ್ವಭಾವದ ಹಾಗು ಸಚ್ಛೀಲ ವರ್ತನದ ಬೆಳಕು ಯಾರ ಮೇಲೆಯೂ ಬೀಳುತ್ತಿರಲಿಲ್ಲ; ಹಾಗು ಆ ಬಗ್ಗೆ ಎಲ್ಲಿಯಾದರೂ ಸ್ತುತಿ-ಗೌರವಗಳ ವರ್ಣನವು ನಡೆದಿದ್ದರೆ ಅದು ನನ್ನ ಕಿವಿಗೆ ಕೇಳುತ್ತಿರಲಿಲ್ಲ. ಅಂತೆಯೇ ನನಗಾಗ ಜೀವವು ಬೇಡೆಂದೆನಿಸುತ್ತಿತ್ತು; ಮತ್ತು ಲೋಕದೊಳಗಿನ ಮೋರೆ ನೋಡಿ ಮಣೆ ಹಾಕುವ ರೀತಿಯ ಬಗ್ಗೆ ನನ್ನಲ್ಲಿ ತಿರಸ್ಕಾರವುಂಟಾಗುತ್ತಿತ್ತು. ಹೃದಯದೊಳಗಿನ ಅಂತರಾತ್ಮನೂ ಆಕಾಶದೊಳಗಿನ ಜಗಚ್ಚಾಲಕನಾದ ಪರಮೇಶ್ವರನೂ ಇವರುಗಳ ಸಂತುಷ್ಟತೆಯ ಹೊರತು ಹಾಗು ಅವರುಗಳ ಉತ್ಸಾಹದ ಹೊರತು ಬೇರೆ ಯಾರದೂ ದೊಡ್ಡಿಸ್ತಿಕೆಯಿಲ್ಲ. ಮನುಷ್ಯರಿಂದಾಗುವ ಸ್ತುತಿಯು ಇಲ್ಲವೆ ಲೋಕದೊಳಗಿನ ದೊಡ್ಡಿಸ್ತಿಕೆಯು ನಿರುಪಯೋಗವಾದುದು ಎಂಬ ನನ್ನ ನಿರ್ಧಾರವು ಹಲವು ಸಾರೆ ಶೈಥಿಲ್ಯವನ್ನು ಹೊಂದಿತ್ತು; ಮತ್ತು ಅದರಿಂದ ಹೆಚ್ಚು ಕಡಿಮೆ ಮಾನದಿಂದ ದುಃಖದ ಬರೆಗಳೂ ನನ್ನ ಮೈಗೆ ಹತ್ತುತ್ತಿದ್ದವು. ಅಶಾಶ್ವತವೂ, ಮಿಥ್ಯವೂ, ಪೊಳ್ಳೂ ಆಗಿರುವ ಸುಖದ ಆಶೆಯಿಂದ ನಾನು ವೃಥಾ ದುಃಖಿಯಾಗುತ್ತೇನೆಂಬದು ನನಗೆ ತಿಳಿಯುತ್ತಿತ್ತು. ಆದರೆ ಸದ್ಯಕ್ಕೆ ನನಗೆ ಪ್ರಾಪಂಚಿಕವಾದ ಯಾವ ಚಿಂತೆಗಳೂ ಇರಲಿಲ್ಲ. ಸಂತೆ-ಪೇಟೆಗಳನ್ನು ಮಾಡಲಿಕ್ಕೆ ಅಡಚಣೆಯುಂಟಾಗುತ್ತಿರಲಿಲ್ಲ. ಹೆರವರಷ್ಟು, ಅದೇಕೆ ತುಸ ಹೆಚ್ಚೇ ನಾನು ಸುಖಿಯಾಗಿರುತ್ತೇನೆಂದು ನನಗನಿಸುತ್ತಿತ್ತು. ಜನರಲ್ಲಿ ಮಾನ-ಮರ್ಯಾದೆಗಳು ಹೆಚ್ಚಿದವು. ನನ್ನ ಹಾಗು ನನ್ನ ಮಗನ ಸ್ತುತಿ-ಸ್ತೋತ್ರಗಳು ನನ್ನ ಕಿವಿಗೆ ಬೀಳಹತ್ತಿದವು. ಇತ್ಯಾದಿ ಪ್ರಕಾರಗಳಿಂದ ನನಗೆ ಆನಂದವಾಗುತ್ತಿತ್ತು. ಆ ಸುಖ-ಸಮಾಧಾನಗಳ ಮಡುವಿನಲ್ಲಿ ನಾನು ಕುಟುಂಬ ಸಹಿತವಾಗಿ ಹೋಗಿ ಬಿದ್ದಿದ್ದೆನು; ಆದರೆ ಅಲ್ಲಿ ಈ ಮುಂಚಿನ ಬಡತನ ಸ್ಥಿತಿಯಲ್ಲಿ ಯಾವ ಒಂದು ಬಗೆಯ ಸುಖವಿದ್ದಿತೋ ಅದು ಮಾತ್ರ ಅನುಭವಕ್ಕೆ ಬಾರದಾಯಿತು!

ಇತ್ತೀಚೆಗೆ ನನಗೆ ಬೇಸರಿಕೆಯೇ ವಿಶೇಷವಾಗಿ ಬರತೊಡಗಿತು. ಅದೇಕೆಂಬದು ಮಾತ್ರ ಹೇಳಲಿಕ್ಕೆ ಬಾರದಾಯಿತು. ವಿಷದೊಳಗಿನ ಹುಳಕ್ಕೆ ವಿಷದಲ್ಲಿಯೇ ಸುಖ-ಸಮಾಧಾನವೆನಿಸುತ್ತಿರುವದು; ಅದನ್ನು ಸಕ್ಕರೆಯಲ್ಲೊಯ್ದಿಟ್ಟರೆ ಸುಖವೆನಿಸಲಾರದು. ಅದೇಸ್ಥಿತಿಯು ನನ್ನದಾಗಿದೆಯೋ ಏನೋ ಎಂಬದು ನನಗೆ ತಿಳಿಯದಾಯಿತು. ಈಶ್ವರೀ ಮಾಯೆಯ ಚಮತ್ಕಾರವೇ ಇದೆಂದು ಅನ್ನದ ಹೊರತು ಬೇರೆ ಉಪಾಯವಿರಲಿಲ್ಲ. ಮೀನಗಳಿಗಾಗಿ ನೀರೊಳಗೆ ನಿದ್ರಿಸಲಿಕ್ಕೆ ಯೋಜನೆ ಮಾಡಿರುವ ಪರಮೇಶ್ವರನೇ ಮನುಷ್ಯನಿಗೆ ಉಂಟುಮಾಡುವ ನಾನಾ ಬಗೆಯ ದುಃಖಗಳಲ್ಲೇ ಸುಖದ ಸಣ್ಣ ಪುಟ್ಟ ಸೆಲೆಗಳನ್ನು ಹರಿಸುತ್ತಿರುವ ಯೋಚನೆಯನ್ನು ಮಾಡಿರುತ್ತಾನೆಂದು ಅನ್ನಬೇಕಾಗುತ್ತದೆ; ಮತ್ತು, ಅದಕ್ಕಾಗಿಯೇ 'ದೇವರು ಒದಗಿಸಿದ ಸ್ಥಿತಿಯಲ್ಲೇ ಸುಖವೆಂದು ತಿಳಿ' ಹೀಗೆಂದು ಸಾಧುಸಂತರು ಪ್ರಾಣಿಮಾತ್ರರಿಗೆ ಉಪದೇಶಿಸುತ್ತಿರುತ್ತಾರೆ; ಆದರೆ ಮಹನೀಯರ ಆ ಮಾತಿನ ಕಡೆಗೆ ಕಿವಿಗೊಡುವವರಾರು? ತನ್ನ ಸ್ಥಿತಿ-ಗತಿಗಳಿಗಿಂತ ಬೇರೆ ಕಡೆಗಳಲ್ಲೇ ಸುಖದ ನಿವಾಸವಿರುವದೆಂಬ ಪೊಳ್ಳು ಭ್ರಮದಿಂದ ಪಾಪ! ಬಡ ಮನುಷ್ಯಪ್ರಾಣಿಯು ಇಷ್ಟ ಸುಖಕ್ಕೆ ಎರವಾಗಿ, ನಾಯಿಗೆ ನೀರೊಳಗಿನ ತನ್ನ ನೆಳಲಿನ ನಾಯಿಯ ಬಾಯೊಳಗಿನ ಮಾಂಸದ ತುಂಡು ತನ್ನ ತುಂಡಿಗಿಂತಲೂ ದೊಡ್ಡದಿರುವದೆಂದು ತಿಳಿಯಲು, ಅದಕ್ಕಾಗಿ ಅದು ತನ್ನ ಬಾಯಿ ತೆರೆದ ಕೂಡಲೆ ಬಾಯೊಳಗಿನ ಮಾಂಸದ ತುಂಡು ಹರಿದು ಹೋಗಿ ನೆಳಲಿನ ನಾಯಿಯ ಬಾಯೊಳಗಿನ ಮಾಂಸದ ತುಂಡೂ ಇಲ್ಲದಂತಾಗುವಂತೆ ಆಶೆಯಲ್ಲಿ ತೋರುವ ಸುಖಕ್ಕೂ ಎರವಾಗುತ್ತಿರುತ್ತಾನೆ! ಆಶೆಯು ದಾರಿದ್ರ್ಯ ಮತ್ತು ಪ್ರಾಪಂಚಿಕ ನೋವುಗಳಿಗೆ ರಾಮಬಾಣ ಔಷಧವಾಗಿದೆ; ಮತ್ತು ಆಶೆಯಲ್ಲಿಯೇ ನಿಜವಾದ ಸುಖವಿರುತ್ತದೆಂದೆನಿಸುವದು ನಿಜವಿರುತ್ತದೆ.

ಹೀಗಿದ್ದರೂ ನನ್ನ ಇಷ್ಟು ದಿನಗಳ ಅನುಭವವೇನಂದರೆ, ದೇವರು ಎಂತಹ ಸ್ಥಿತಿಯನ್ನುಂಟು ಮಾಡಿದರೂ ಅದರಲ್ಲಿ ಸುಖವು ಇದ್ದೇ ಇರುತ್ತದೆ; ಆದರೆ ಅದನ್ನು ಸೂಕ್ಷ್ಮದೃಷ್ಟಿಯಿಂದ ನಿರೀಕ್ಷಿಸಲಿಕ್ಕೆ ಬೇಕು; ಮತ್ತು ಅದನ್ನು ಹಚ್ಚಿಕೊಳ್ಳಲಿಕ್ಕೆ ಬೇಕು; ಆದರೆ ಮನುಷ್ಯನಿಗೆ ಯಾವ ಸಂಗತಿಯ ಜ್ಞಾನವು ಚೆನ್ನಾಗಿ ಆಗುವದಿಲ್ಲವೋ ಅದೇ ಇದು! ಈ ತತ್ವವನ್ನು ಬದಿಗೊತ್ತಿ ಮನಸ್ಸು ಕಂಡಕಡೆಗೆಲ್ಲ ಅಂಡಲೆಯ ತೊಡಗುತ್ತದೆ. ಆ ಮನಸ್ಸನ್ನು ಬಿಗಿದು ಹಿಡಿದು ಇದೇ ತತ್ವಕ್ಕೆ ಕಟ್ಟಿಹಾಕಬೇಕು. ನನಗಾದರೂ ಈ ಸಂಗತಿಯು ಬಹಳ ತಡವಾಗಿ ತಿಳಿಯಿತು; ಅಂದರೆ ಆ ಜ್ಞಾನದ ಉಪಯೋಗವು ಮೀರಿದ ಕಾಲಕ್ಕೆ ಅದು ನನಗೆ ಆಯಿತು; ಆದರೆ ನಾನು ಹೀಗೆ ಎಡವಿ ಬಿದ್ದಿದ್ದರ ಅನುಭವದಿಂದ ನನ್ನ ಮುಂದಿನ ಜನರು ಜಾಣರಾಗಬೇಕೆಂಬ ಒಂದೇ ಉಚ್ಚ ಉದ್ದೇಶವನ್ನಿಟ್ಟುಕೊಂಡು ನಾನೀ ನನ್ನ ಶುಷ್ಕ ಹಾಗು ಬೇಸರಿಕೆಯನ್ನುಂಟು ಮಾಡುವ ಕರ್ಮಕಥೆಯನ್ನು ಹೇಳುತ್ತಿರುವೆನು.

ಅದ್ಭುತ ಹಾಗು ಅಸಂಭವನೀಯವಾದ ಸಂಗತಿಗಳು ಜನರಿಗೆ ಹೆಚ್ಚಾಗಿ ರುಚಿಸುತ್ತವೆ. ಯುದ್ಧವಾರ್ತೆ, ಸಾಧು-ಸತ್ಪುರುಷರು ತೋರಿಸಿದರೆಂದು ಹರಡುವ

ಅದ್ಭುತ ವಾರ್ತೆಗಳನ್ನು ಕೇಳಲಿಕ್ಕೂ ಅವುಗಳ ಪ್ರಸಾರವನ್ನು ಗಣಿತ ಶ್ರೇಢಿಯಂತೆ ಮಾಡಲಿಕ್ಕೂ ಜನರು ಹಾತೊರೆಯುತ್ತಾರೆ. ಅದರಂತೆ ಪತಿ-ಪತ್ನಿಯರ ಇಲ್ಲವೆ ಆಶಕ-ಮಾಶಕ ಜನರ ಮನೋರಂಜಕ ಕಥೆಗಳೂ ಅರಸು-ಅರಸಿಯರ ಕಥೆಗಳೂ ಜನರಿಗೆ ಹೆಚ್ಚಾಗಿ ರುಚಿಸುತ್ತವೆ. ಅವುಗಳನ್ನು ಕೇಳಿಕೊಳ್ಳುವ ಚಟವು ನಮಗೆ ಚಿಕ್ಕಂದಿನಿಂದಲೂ ಹತ್ತಿರುತ್ತದೆ; ಮತ್ತು ಜನರಂತೆಯೇ ಪ್ರತ್ಯಕ್ಷ ವ್ಯವಹಾರದಲ್ಲಿ ಸಂಭವಿಸಿದ, ಆದರೆ ಆಗಾಗ್ಗೆ ಜನ ನಿದರ್ಶನಕ್ಕೆ ಬಾರದ ಸಂಗತಿಗಳನ್ನು ಕೇಳುವದಕ್ಕೆ ಮನಸ್ಸು ಒಳ್ಳೇ ಹಾತೊರೆಯುತ್ತದೆಂಬದು ನನಗೆ ಚೆನ್ನಾಗಿ ಗೊತ್ತಿದೆ; ಆದರೆ ನನ್ನ ಈ ಕರ್ಮಕಥೆಯು ಆ ವರ್ಗದೊಳಗಿನದಾಗಿಲ್ಲ. ಬೋಧವು ಸ್ಪಷ್ಟವಾಗಬೇಕೆಂಬದೂ ತಾತ್ಪರ್ಯವೇನೆಂಬದು ತಟ್ಟನೆ ತಿಳಿಯಬೇಕೆಂಬದೂ ನನ್ನ ಮುಖ್ಯವಾದ ಕಟಾಕ್ಷವು. ಅದನ್ನು ವಾಚಕರು ಮರೆಯಕೂಡದು.

ಸುಖ, ಸುಖ ಎಂದು ಮನುಷ್ಯಪ್ರಾಣಿಯು ಯಾವುದಕ್ಕಾಗಿ ಹೆಣಗಾಡುತ್ತಿರುವನೋ, ಆ ಪದಾರ್ಥವು ಸಾಪೇಕ್ಷವಂತೂ ಇದ್ದೇ ಇದೆ; ಆದರೆ ಸುಖವು ಹಚ್ಚಿಕೊಳ್ಳುವವರಲ್ಲಿರುತ್ತದೆ; ಸುಖವೆಂಬದೊಂದು ಸ್ವತಂತ್ರ ಪದಾರ್ಥವಾಗಿರುವುದಿಲ್ಲ. ಬಹು ದಿನಗಳಿಂದ ಉಂಡಾಗಿರಬೇಕೆಂಬ ಸ್ಥಿತಿಯು ನನಗೆ ಒಮ್ಮೆ ಪ್ರಾಪ್ತವಾದಂತಾಯಿತು; ಆದರೆ ಅದರಲ್ಲಿಯೂ ನನಗೆ ತೀವ್ರವೇ ಸುಖವೆನಿಸದಾಯಿತು. ಮನುಷ್ಯನು ಒಮ್ಮೆ ಯಾವುದೊಂದು ವಸ್ತುವಿನ ಕಡೆಗೆ ಸಂಶಯದ ಮನಸ್ಸಿನಿಂದ ನಿರೀಕ್ಷಿಸತೊಡಗಿದನೆಂದರೆ, ಅವನಿಗೆ ಸುತ್ತಮುತ್ತಲೂ ಯಾವುದು ಬೇಡೆನಿಸುವುದೋ ಅದೇ ತೋರಹತ್ತುತ್ತದೆ. ಕಾಮಣಿಯೆಂಬ ರೋಗವಾದವರಿಗೆ ಸೃಷ್ಟಿಯೊಳಗಿನ ಪ್ರತಿಯೊಂದು ಜೀನಸೂ ಹೇಗೆ ಅರಿಶಿಣ ಬಣ್ಣದ್ದಾಗಿಯೇ ತೋರುವುದೋ, ಅದೇ ಸ್ಥಿತಿಯು ಸಂಶಯಗ್ರಸ್ತ ಮನಸ್ಸಿನವನದಾಗುತ್ತದೆ. ಸಂಶಯ ಪಿಶಾಚಿಯು ಬಡಕೊಂಡವರ ಸ್ಥಿತಿಯನ್ನೇನು ವರ್ಣಿಸುವದಿದೆ? ಹೆಂಡತಿಯ ನಡವಳಿಕೆಯ ಸಂಶಯಗ್ರಸ್ತನಿಗೆ ಆಕೆಯ ನಗೆ, ನೋಟ, ಮಾತು, ಕಥೆ, ಅಡ್ಡಾಡುವದು ಮುಂತಾದ ಪ್ರತಿಯೊಂದು ವ್ಯವಹಾರದಲ್ಲಿಯೂ ಏನಾದರೊಂದು ಅನಿಷ್ಟ ಸಂಗತಿಯೇ ದೃಗ್ಗೋಚರವಾಗಿ, ಅವಳ ವಿಷಯದ ಸಂಶಯವು ಬರಬರುತ್ತ ಹೆಚ್ಚತೊಡಗುತ್ತದೆ. ಇದರಂತೆಯೇ ವೈರಿಗಳ ಸಂಶಯ, ಧನದ ಸಂಶಯ ಮುಂತಾದ ಹಲವು ಸಂಶಯ ಪಿಶಾಚಿ ಬಾಧೆಗಳು ಮನುಷ್ಯನ ಇರವನ್ನು ಕೆಡಿಸಿಬಿಡುತ್ತವೆ. ಆದುದರಿಂದ ಬುದ್ಧಿವಂತ ಮನುಷ್ಯನು ಸಾಧ್ಯವಾದ ಮಟ್ಟಿಗೂ ಸಂಶಯದಿಂದ ದೂರವಿರಲಿಕ್ಕೆ ಪ್ರಯತ್ನಿಸತಕ್ಕದ್ದು.

ನನ್ನ ಗೃಹಿಣಿ, ನಮ್ಮ ಚಂಪೆ ಹಾಗು ನಮ್ಮ ಬಾಳ ಈ ಮೂವರೂ ಇತ್ತೀಚೆಗೆ ಬಹು ಮಟ್ಟಿಗೆ ನನ್ನನ್ನು ಲೆಕ್ಕಿಸುವದಿಲ್ಲ, ಎಂದು ಒಮ್ಮೆ ನನ್ನ ಮನಸ್ಸಿನಲ್ಲಿ ಕಿಂತುವು ಉತ್ಪನ್ನವಾಯಿತು. ಮುಗಿಯಿತು. ಅಂದಿನಿಂದ ಆ ತ್ರಿವರ್ಗದ ಪ್ರತಿಯೊಂದು ಕೃತಿಯಲ್ಲೂ ನನಗೆ ಅದೇ ಕಾಣಿಸತೊಡಗಿತು; ಆದರೆ ಮೋಹಪಾಶದ

ಮೂಲಕ ನಾನು ಮತ್ತೆ ಮತ್ತೆ ನನ್ನ ಮನಸ್ಸನ್ನು ಬಿಗಿಹಿಡಿಯುವ ಪ್ರಯತ್ನ ಮಾಡುತ್ತಿದ್ದೆನು. ನನ್ನ ಗೃಹಿಣಿಯು ನಮ್ಮ ಬಾಳನ ಕೌತುಕ ಮಾಡುವದರಲ್ಲಿಯೂ ಶುಷ್ರೂಷೆಯಲ್ಲಿಯೂ ಯಾವಾಗಲೂ ಆಸಕ್ತಳಾಗಿದ್ದಳು. ಬಾಳನ ಕೆಲಸಗಳನ್ನೇ ಮೊದಲು ಮಾಡಬೇಕೆಂದು ನನ್ನ ಗೃಹಿಣಿಗೆ ಇತ್ತೀಚಿಗೆ ಅನಿಸಹತ್ತಿತ್ತು. ಆದರಿಂದ ಸ್ವಾಭಾವಿಕವಾಗಿಯೇ ನನ್ನ ಸ್ವಂತದ ಕೆಲಸಗಳ ಬಗ್ಗೆ ಅವಳ ದುರ್ಲಕ್ಷ್ಯವೂ ತಡವೂ ಆಗಹತ್ತಿತು. ಇದುವರೆಗೆ ನಮ್ಮ ಮನೆಯಲ್ಲಿ ನಾನೊಬ್ಬನೇ ಮನೆತನ ನಡಿಸುವ ಯಜಮಾನನಾಗಿದ್ದೆನು; ಆದರಿಂದ ಇದುವರೆಗೆ ಮನೆಯಲ್ಲಿ ನನ್ನಷ್ಟು ವರ್ಚಸ್ಸವು ಬೇರೆ ಯಾರದೂ ಇರಲಿಲ್ಲ. ಇತ್ತೀಚಿಗೆ ನಮ್ಮ ಬಾಳನೇ ದುಡಿಯುವವನಾದನು; ಆತನ ದುಡಿಮೆಯಿಂದ ನನಗಿಂತ ಎಷ್ಟೋ ಪಟ್ಟು ಹೆಚ್ಚು ದುಡ್ಡು ಬರಹತ್ತಿತು. ಅಂದ ಮೇಲೆ ಮನೆಯೊಳಗಿನ ನನ್ನ ವರ್ಚಸ್ಸವು ಕಡಿಮೆಯಾಗಿ, ನಾನು ಸಹಜ ವಾಗಿಯೇ ಗೌಣ ವ್ಯಕ್ತಿಯಾದೆನು!

ಪುತ್ರ ಮತ್ತು ಶಿಷ್ಯ ಇವರುಗಳ ಉತ್ಕರ್ಷವು ಆನಂದದಾಯಕವಿರುತ್ತದಿಷ್ಟೇ ಅಲ್ಲ; ಆದರೆ ಅವರಿಂದಾದ ತನ್ನ ಪರಾಭವವೂ ದುಃಖದಾಯಕವಾಗಿ ತೋರುತ್ತಿ ರುವುದಿಲ್ಲನೆಂಬ ಸಂಗತಿಯು ನಿಜವಾಗಿರುತ್ತದೆ; ಆದರೂ ಇದುವರೆಗೆ ನನ್ನ ಮನೆ ಯಲ್ಲಿ ನಾನೊಬ್ಬನೇ ಪ್ರಮುಖ ಪುರುಷನೆಂದು ಮೆರೆದಿದ್ದೆನು. ಆದರಿಂದ ಈಗಿನ ಪರಿಸ್ಥಿತಿಯ ಮೂಲಕ ಉಂಟಾದ ನನ್ನ ತೇಜೋಹೀನತೆಯು ನನಗೆ ಸುಖಾವಹ ವೆನಿಸದಾಯಿತು; ಆದರೆ ನಾನು ಅದನ್ನು ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ. ಮಗನು ಗಳಿಸುವವನಾದರೂ ಆತನು ತನ್ನ ಸಂಬಳವನ್ನೆಲ್ಲ ತಂದು ನನ್ನ ಕೈಯಲ್ಲೇ ಕೊಡು ತ್ತಿದ್ದನು; ನಮ್ಮ ಪ್ರಪಂಚದೊಳಗಿನ ಒಂದು ಕಡ್ಡಿಯೂ ಕೂಡ ನನ್ನ ಇಚ್ಛೆಯ ವಿರುದ್ಧವಾಗಿ ಅಲ್ಲಾಡುತ್ತಿರಲಿಲ್ಲ; ಮತ್ತು ನನ್ನಿಚ್ಛೆಯ ಮೇರೆಗೆ ನಮ್ಮ ಮನೆಯ ಕಾರಭಾರವನ್ನು ನಾನು ನಡಿಸುತ್ತಿದ್ದೆನು. ಹೀಗಿದ್ದರೂ ನನ್ನ ಆ ಏಕಛತ್ರರೂಪೀ ರಾಜ್ಯದಲ್ಲಿ ನನ್ನ ಗೃಹಿಣಿಯ ರೀತಿ-ನಡವಳಿಕೆಗಳು ದಿನಮೇಕರೀತಿಯಿಂದ ಬದಲಿಸ ಹತ್ತಿದವು. ಹಾಗೆ ಅವಳ ನಡವಳಿಕೆಯು ಬದಲಾಗುತ್ತ ನಡೆದಿದ್ದರೂ ಆದರಿಂದ ನನಗೆಂದೂ ಸಿಟ್ಟು ಬರಲಿಲ್ಲ. ಸಹಜ ವಿನೋದದ ಮೂಲಕ ನಗೆಚೇಷ್ಟೆಯಿಂದಲೇ ನಾನವಳಿಗೆ ಆಗಾಗ್ಗೆ ಉಪದೇಶ ಮಾಡುತ್ತಿದ್ದೆನು.

ಒಮ್ಮೆ ಸಹಜವಾಗಿ ಏತರ ಮೇಲಿಂದಲೋ ಮಾತು ಹೊರಡಲು, ನಾನು ನನ್ನ ಗೃಹಿಣಿಯನ್ನುದ್ದೇಶಿಸಿ:—"ಏನೇ, ನೀನಿನ್ನು ಅವ್ವನವರಾದೆ; ಚಂಪೆಯು ತಾಯಿ ಸಾಹೇಬಳಾದಳು; ಮತ್ತು ಬಾಳನು ಬಾಳಾಸಾಹೇಬರಾದನು; ಆದರೆ ನಾನು ಮಾತ್ರ ಮುಂಚಿನಂತೆಯೇ ಗೊಡ್ಡು ವೈದಿಕರ ಗುರುಭಟ್ಟನೇ ಆಗಿರುತ್ತೇನಲ್ಲ!" ಎಂದು ಕೇಳಿದೆನು. ಆ ನನ್ನ ಮರ್ಮಭೇದಕವಾದ ವಿನೋದದ ಅರ್ಥವು ಅವಳಿಗೆ ತಿಳಿಯಿತು; ಆದರಿಂದ ಅವಳಿಗೆ ಒಮ್ಮೆಲೆ ತುಸ ಸಿಟ್ಟು ಬಂದಿತು; ಆದರೆ ಕೆಲ ಹೊತ್ತಿನ ಮೇಲೆ ನನಗೆ ತಿಳಿದು ಬಂದುದೇನಂದರೆ, ಇತ್ತೀಚಿಗೆ ಅವಳು ನನ್ನ ಸ್ವಂ

ತದ ಕೆಲಸಗಳ ಕಡೆಗೆ ಹೆಚ್ಚು ಲಕ್ಷ್ಯಗೊಟ್ಟು ಮಾಡುತ್ತಿದ್ದು, ಬಾಳನ ಕೆಲಸಗಳಲ್ಲಿಯ ಅವಳ ಆಸಕ್ತಿಯು ಕಡಿಮೆಯಾಗುತ್ತ ನಡೆದಿದೆ. ಬಾಳಾಸಾಹೇಬ-ಬಾಳಾಸಾಹೇಬ, ಎಂದು ಮೆರೆಯುವ ಅವಳ ಹವ್ಯಾಸವು ಇಷ್ಟು ತೀವ್ರವೇಕೆ ಕಡಿಮೆಯಾಯಿತು? ಹಾಗು ಮೊದಲಿನಷ್ಟು ಅಥವಾ ಅದಕ್ಕೂ ಹೆಚ್ಚು ನನ್ನ ಗೃಹಿಣಿಯ ಚಿತ್ತವು ನನ್ನ ಕಡೆಗೇಕೆ ಎಳೆಸಿತು? ಎಂಬ ಬಗ್ಗೆ ನನಗೆ ದೊಡ್ಡ ಗೂಢವೇ ಎನಿಸಿತು! ನನ್ನ ಗೃಹಿಣಿಯ ಸ್ಥಿತಿಯಲ್ಲಿ ಬದಲಾವಣೆಯಾಯಿತೆಂಬದು ಮಾತ್ರ ಕೂಡಲೆ ನನಗೆ ತಿಳಿಯಿತು; ಆದರೂ ಆ ಬಗ್ಗೆ ನಾನು ಒಂದಕ್ಕರವನ್ನೂ ಒಡನುಡಿಯಲಿಲ್ಲ. ತುಸ ತಾಳ್ಮೆವಹಿಸಿ ಮುಂದೇನಾಗುತ್ತದೋ ನೋಡಬೇಕು; ಅಂದರೆ ಏನಿದ್ದದ್ದು ತಾನೇ ಹೊರಬೀಳು ವುದೆಂದು ಯೋಚಿಸಿದೆನು.

ಆದರೆ ಹೆಣ್ಣುಮಕ್ಕಳಿಗೆ ನಿದಾನ-ತಾಳ್ಮೆಗಳೆಂಬವು ಗೊತ್ತೇ ಇಲ್ಲ. ಮುಂದೆ ಬೇಗನೆ ಒಂದು ದಿನ ಅವಳು ಮೆಲ್ಲನೆ ನನ್ನನ್ನುದ್ದೇಶಿಸಿ:—“ನಾವಿನ್ನು ನಮ್ಮ ಸರ್ಪ ಪುರಿಗೆ ಹೊರಟು ಹೋಗಬೇಕೆಂದೆನಿಸಹತ್ತಿದೆ; ಹೊರಡಬಹುದಲ್ಲವೆ?” ಎಂದು ಕೇಳಿದಳು.

ನಾನು:—ಅದೇಕೆ? ಈಗಾಗಲೆ ಇಲ್ಲಿ ಬೇಸರವೆನಿಸತೊಡಗಿತೇನು?

ನನ್ನ ಗೃಹಿಣಿ:—ಬೇಸರಿಕೆಯ ಮಾತಲ್ಲ; ಆದರೆ ಬಹು ದಿನಗಳಾದವು. ಅದ ರಿಂದ ಕೆಲ ದಿನ ಹೋಗಿ ಬರಬೇಕೆಂದೆನಿಸುತ್ತದಿಷ್ಟೇ.

ನಾನು:—ಇಷ್ಟೇ ಅಲ್ಲವೆ? ನೋಡೋಣವಂತೆ. ಬಾಳನ ಇನ್ನೂ ೨-೩ ತಿಂಗಳ ಸಂಬಳ ಬಂದವೆಂದರೆ, ಅವುಗಳಿಂದ ಏನಾದರೂ ತುಸ ಹಣ ಉಳಿಸಿಕೊಂಡು ಹೊರಡಲಿಕ್ಕೆ ಬಂದೀತು.

ನನ್ನ ಗೃಹಿಣಿ:—ಅಂದರೆ? ಖರ್ಚಿನದಿನ್ನೂ ತೊಂದರೆಯೇ ಇದೆ ಏನು? ಬಾಳಾಸಾಹೇಬನು ತನ್ನ ಎಲ್ಲ ಸಂಬಳವನ್ನೂ ತಂದು ಕೊಡುತ್ತಿರುವನಲ್ಲವೆ?

ನಾನು:—ಅಹುದು; ಎಲ್ಲವನ್ನೂ ಕೊಡುತ್ತಾನೆ; ಆದರೆ ಇತ್ತೀಚೆಗೆ ಖರ್ಚಿನ ಮಾನವೇ ತುಸ ಹೆಚ್ಚಿದಂತಾಗಿದೆ.

ನನ್ನ ಗೃಹಿಣಿ:—ಖರ್ಚು ಹೆಚ್ಚಾಗದೇನು ಮಾಡೀತು? ಸೊಸೆಯ ಧೋರಣ ದಿಂದಲೇ ಮನೆಯೊಳಗಿನ ಪ್ರತಿಯೊಬ್ಬರೂ ನಡೆಯತಕ್ಕವರು. ಆಕೆಗೇನು ಹೇಚು-ಪೇಚುಗಳ ಜ್ಞಾನವಿದೆಯೋ? ಬುದ್ಧಿಯಿದೆಯೋ? ಈ ನಮ್ಮ ಸೊಸೆಯು ಹೀಗೆ ಆದಾಳೆಂದು ನನಗೆಂದೂ ಅನಿಸಿರಲಿಲ್ಲ. ಇತ್ತೀಚೆಗೆ ಅವಳಿಗೆ ನಾವಿಬ್ಬರೂ ಜಡ ವೆನಿಸಹತ್ತಿರುತ್ತೇವೆ.

ಅವಳ ಬಾಯಿಯ ಆ ವಾಕ್ಯವನ್ನು ಕೇಳಿದ ಕೂಡಲೆ ನನಗೆ ಒಮ್ಮೆಲೆ ಎಲ್ಲವೂ ಹೊಳೆಯಿತು. ನಾನು ಇನ್ನೂ ಏನೊಂದು ಮಾತಾಡುವ ಮೊದಲೇ ಅವಳ ಕಣ್ಣು ಗಳು ಅಶ್ರುಗಳಿಂದ ತುಂಬಿ ಹೋದವು. ನಮ್ಮ ಸೊಸೆಯು ನನ್ನ ಗೃಹಿಣಿಗೇನಾ ದರೂ ಬಿರಿನುಡಿಯನ್ನಾಡಿರಬೇಕೆಂದು ನನ್ನ ಖಾತ್ರಿಯಾಯಿತು. ಅದಕ್ಕಾಗಿ

ನಾನು ನನ್ನ ಗೃಹಿಣಿಗೆ ಇನ್ನು ತಿಳಿಹೇಳತಕ್ಕವನು; ಇಷ್ಟರಲ್ಲಿ ಅವಳು ತನ್ನ ಕಂಬನಿಗಳನ್ನೊರಸುತ್ತ ಸದ್ಗದಿತ ಕಂಠದಿಂದ ತಾನಾಗಿಯೇ:—"ನಡೆಯಿರಿ; ನಾವಿನ್ನು ನಮ್ಮ ಸರ್ಪಪುರಿಗೇ ಹೋಗಿರೋಣ. ಇಲ್ಲಿಯ ಈ ನಿರ್ಜೀವ ಅನ್ನವನ್ನುಣ್ಣುವದು ಬೇಡ. ಸೊಸೆಯ ಕೈಕೆಳಗೆ ನಿರ್ಮಾಲ್ಯದಂತಿರುವುದು ನನಗೆ ರುಚಿಸುವದಿಲ್ಲ. ಬಿಕ್ಕೆಯಾದರೂ ಬೇಡಬಹುದು; ಆದರೆ ಸೊಸೆಯ ಮನೆಯ ಈ ದೌಲತ್ತು ನನಗೆ ಬೇಡ!" ನನ್ನ ಗೃಹಿಣಿಯ ಈ ಉದ್ಗಾರಗಳಿಂದ ನಮ್ಮ ಮನೆಯ ಯಾವ ಕಡೆಯಲ್ಲೋ ಕಲಹಾಗ್ನಿಯು ಹೊತ್ತಿರುತ್ತದೆಂದು ನನಗೆ ಗೊತ್ತಾಯಿತು. ಆಗ ನಾನು ನನಗೆ ತಿಳಿದ ಮಟ್ಟಿಗೆ ನನ್ನ ಗೃಹಿಣಿಗೆ ಬಗೆಬಗೆಯಿಂದ ಬೋಧಿಸಿದೆನು; ಆದರೆ ಅವಳಿಗೆ ಅದರಿಂದಲೇನೂ ಸಮಾಧಾನವೆನಿಸಲಿಲ್ಲ. ಅವಳು ಆಗ ವಿಶೇಷವೇನೂ ಮಾತಾಡದಿದ್ದರೂ ಹೆಂಗಸರು ಮೂಕಭಾವದಿಂದಿದ್ದೇ ತಮ್ಮ ಮನೋಗತವನ್ನು ಚೆನ್ನಾಗಿ ವ್ಯಕ್ತಗೊಳಿಸುತ್ತಿರುತ್ತಾರೆ. ಆ ಕಾಲದ ನನ್ನ ಗೃಹಿಣಿಯ ಆ ಕಣ್ಣು ಆ ಮುಖಭಾವಗಳನ್ನು ಕಂಡ ನನಗೆ ಆಡಿ ತೋರಿಸದಷ್ಟು ದುಃಖವು ಇವಳಿಗಾಗಿದೆಯೆಂದು ಅನಿಸದಿರಲಿಲ್ಲ. ತನಗಾದ ದುಃಖದ ಪರಿಹಾರವು ನನ್ನಿಂದಾದೀತೆಂದು ಅವಳು ನನ್ನೆಡೆಗೆ ಬಂದಿದ್ದಳು; ಅದರಿಂದ ಅವಳನ್ನು ನಿರಾಶೆಗೊಳಿಸಬಾರದೆಂದು ನಾನು ಮನಸ್ಸುಮಾಡಿದೆನು.

ನಮ್ಮ ಮನೆಯಲ್ಲಿ ನಮ್ಮ ಸೊಸೆಯ ಹೆಚ್ಚಾಳವು ಮಿತಿಮೀರಿತೆಂಬ ಸಂಗತಿಯು ನನಗಿದುವರೆಗೂ ತಿಳಿದಿರಲಿಲ್ಲ. ನನ್ನ ಗೃಹಿಣಿಯು ತನ್ನ ವಿಷಯವಾಗಿ ನನ್ನ ಹತ್ತಿರ ಏನೇನೋ ಹೇಳಿದಳೆಂಬುದು ನಮ್ಮ ಸೊಸೆಗೆ ತಿಳಿಯಿತು. ಆಗಿನಿಂದ ಅವಳು ನನಗೆ ತಿಳಿದ ದೂರು ಸುಳ್ಳಿರುವುದೆಂಬುದನ್ನು ತೋರಿಸುವ ಪ್ರಯತ್ನಕ್ಕೆ ತೊಡಗಿದಳು. ನಾನು ಅದನ್ನು ಕೂಡಲೆ ಕಂಡುಕೊಂಡೆನು. ನಮ್ಮ ಬಾಳನ ವೃತ್ತಿಯಲ್ಲಿ ಮಾತ್ರ ಬದಲಾದಂತೆ ನನಗೆ ತೋರಲಿಲ್ಲ. ನಮ್ಮ ಸೊಸೆಯಾದರೂ ನನ್ನೊಡನೆ ಒಳ್ಳೇ ಮರ್ಯಾದೆಯಿಂದಲೂ ಆದರಪೂರ್ವವಾಗಿಯೂ ನಡೆಕೊಳ್ಳುತ್ತಿದ್ದಳು. ಅದರಿಂದ ಅವಳ ವಿಷಯವಾಗಿ ನನ್ನ ಮನಸ್ಸಿನಲ್ಲಿ ಇದು ವರೆಗೆ ಯಾವ ಕಿಂತುವೂ ಬಂದಿರಲಿಲ್ಲ; ಆದರೆ ಇತ್ತೀಚೆಗೆ ದಿನಾಲು ಸೊಸೆಯು ಹೀಗೆ ಅಂದಳು; ಇಂದು ಹೀಗೆ ಅವಮಾನ ಮಾಡಿದಳು; ಹಾಗೆ ಮಾತನಾಡಿದಳು ಮುಂತಾದ ಎಷ್ಟೋ ದೂರುಗಳನ್ನು ನನ್ನ ಗೃಹಿಣಿಯು ನನ್ನ ಮುಂದೆ ಹೇಳ ತೊಡಗಿದಳು. ಚಾಡಿಯ ಮಾತೇ ಅವು! ಚಾಡಿಯು ಹೇಳುವವರಿಗೆ ದಂಡಣೆ ಏನೆಂದರೆ,ಚಾಡಿ ಹೇಳುವವನನ್ನು ಬಿಟ್ಟು ಚಾಡಿ ಕೇಳುವವರ ಕಿವಿಗಳನ್ನೇ ಕೊಯ್ಯಬೇಕು! ಈ ನ್ಯಾಯದಿಂದ ನಾನು ನನ್ನ ಗೃಹಿಣಿಯ ಚಾಡಿಯ ಮಾತುಗಳನ್ನು ಕೇಳಿಕೊಳ್ಳಬಾರದಾಗಿತ್ತು; ಮತ್ತೂ ಅದೇ ಮೇರೆಗೆ ನಾನು ಎಷ್ಟೋ ದಿನಗಳ ವರೆಗೆ ಆ ದೂರುಗಳನ್ನು ಬರಿಯ 'ಹೂಂ-ಹೂಂ' ಎಂದೆನ್ನುತ್ತ ಕೇಳಿಕೊಳ್ಳುತ್ತಿದ್ದೆನೇ ಹೊರತು, ಆ ಬಗ್ಗೆ ಏನೊಂದು ಉಪಾಯ ಯೋಜನೆಗೂ ತೊಡಗಿರಲಿಲ್ಲ.

---

## ೧೧ ಪುನಃ ದುಃಖದ ಝಳ.



ಆದರೆ ಆ ಪ್ರಕಾರದಿಂದ ಇತ್ತೀಚೆಗೆ ನನ್ನ ಮನಸ್ಸು ಮಾತ್ರ ಸಂಶಯಿತವಾಗತೊಡಗಿತು; ಮತ್ತು ನನ್ನ ಗೃಹಿಣಿಯು ಹೇಳುವ ದೂರುಗಳಲ್ಲಿ ತಥ್ಯಾಂಶವು ಎಷ್ಟಿರುತ್ತದೆಂಬದನ್ನು ಶೋಧಿಸಹತ್ತಿದೆನು. ಸೊಸೆಯಿಂದರೆಂದರೆ ಬೇರೆಯವರ ಮನೆಯ ಮಕ್ಕಳು. ಮಗನು ಇಲ್ಲವೆ ಮಗಳು ಇವರಿಗೆ ತಂದೆ-ತಾಯಿಗಳ ವಿಷಯದಲ್ಲಿ ದಯಾ-ಮಾಯೆಗಳೂ ಅಗತ್ಯವೂ ಅನಿಸಬಹುದಾದಷ್ಟು ಸೊಸೆಯಂದಿರಿಗೆ ಅನಿಸಲಾರದು. ಅಶಕ್ಯವಾದ ಸಂಗತಿಯ ಬಗ್ಗೆ ಹವ್ಯಾಸ ತಾಳುವದೇ ಮೂರ್ಖತನವು! ಸೊಸೆಯಂದಿರಿಗೆ ಗಂಡನ ಮೂಲಕವೇ ಅತ್ತೆ-ಮಾವನ ಅಗತ್ಯಾಗತ್ಯಗಳೆಂಬದು ನಿಜವು. ಸೊಸೆಯಂದಿರಿಗೆ ಹೆಚ್ಚಿನ ಸ್ವಾರ್ಥಬುದ್ಧಿಯುಂಟಾಯಿತೆಂದರೆ, ಅವರಿಗೆ ಅತ್ತೆ-ಮಾವನ 'ಖರ್ಚಿ'ನ ಭಾರವೆನಿಸಹತ್ತುವದು ಆಶ್ಚರ್ಯಕರವಲ್ಲ; ಆದರೆ ಅತ್ತೆ-ಮಾವಂದಿರೆದುರಿಗೆ ಸೊಸೆಯ ಸತ್ತೆಯೆಷ್ಟು? ಎಂಬ ವಿಚಾರವನ್ನು ಮನದಂದರೆ ಅವರ ಮೂರ್ಖತನದ ಇಲ್ಲವೆ ಸ್ವಾರ್ಥ ಬುದ್ಧಿಯ ಮಹತ್ವವನ್ನು ಮನ್ನಿಸುವ ಕಾರಣವಿಲ್ಲ; ಆದರೆ ಇಷ್ಟು ವಿಚಾರವು ಅದಾರಿಗೆ ಅದೆಂತು ಮೊದಲು ಸೂಚಿಸುವದು? ಮತ್ತು ಸೂಚಿಸಿದರೂ ಅದೆಷ್ಟುಹೊತ್ತು ಸ್ಥಿರವಾಗಿ ನಿಲ್ಲುವದು? ಮಾನಾಪಮಾನದ ವಿಷಯವು ಪ್ರಾಣಕ್ಕಿಂತಲೂ ಹೆಚ್ಚು ಮಹತ್ವದ್ದಾಗಿ ಅನಿಸುವದು. ಮರ್ಯಾದೆಯು ಜೀವಕ್ಕಿಂತಲೂ ಪ್ರಿಯಕರವು; ಅವಮಾನಕ್ಕಿಂತಲೂ ಉಪವಾಸ ಬಿದ್ದು ಸಾಯುವದು ಲೇಸು! ಅಂತೆಯೇ ನಮಗೆ ಸುಖ-ಸಮಾಧಾನದಲ್ಲಿ ಅನಾಯಾಸವಾಗಿ ನಿಶ್ಚಿಂತೆಯಿಂದ ಬೇಕು ಬೇಕಾದುದು ತಿನ್ನುಣ್ಣಲಿಕ್ಕೆ ಸಿಗುವದೂ ನನ್ನ ಮಗನು ಗಳಿಸುವವನಾಗಿ ಸಂಸಾರಭಾರವನ್ನು ಸಂಬಾಳಿಸಹತ್ತಿದನೆಂದು ದೊಡ್ಡಿಸ್ತಿಕೆ ಕೊಚ್ಚಿಕೊಳ್ಳುವದೂ ಇವುಗಳ ಸುಖವು ಇತ್ತೀಚೆಗೆ ಹೊಯ್ದಾಡಹತ್ತಿತ್ತು.

ನನ್ನ ಗೃಹಿಣಿಯು ದಿನಾಲು ನನ್ನೆದುರಿಗೆ ಹೇಳುತ್ತಿದ್ದ ದೂರುಗಳ ಪ್ರಾತ್ಯಕ್ಷಿಕವು ನನಗೆಲ್ಲಿಯೂ ಕಂಡು ಬರಲಿಲ್ಲ ಆದರಿಂದ ಈಕೆಯ ಹೇಳಿಕೆಯು ನಿಜವಾಗಿರದೆ, ಏನಾದರೂ ಒಣ ತಕರಾರಿನದಿವೆ; ಇಂಥ ತಕರಾರುಗಳನ್ನು ನಾನು ಮೊದಲು ಕೇಳಿಕೊಳ್ಳಲೇ ಬಾರದೆಂಬದು ಉತ್ತಮವು; ಮತ್ತು ಒಂದುವೇಳೆ ಕೇಳಿಕೊಂಡರೂ ಮನಸ್ಸಿನ ಮೇಲೆ ತಕ್ಕೊಳ್ಳಬಾರದೆಂಬದು ಅದಕ್ಕಿಂತಲೂ ಉತ್ತಮ ಸಂಗತಿಯು ನಾವು ನಮ್ಮ ಮನೆಯಲ್ಲಿ ಒಂದೆರಡು ಜನ ದಾಸ-ದಾಸಿಯರನ್ನಿರಿಸಿಕೊಂಡಿದ್ದರಿಂದ ಇತ್ತೀಚೆಗೆ ನನ್ನ ಗೃಹಿಣಿಗೆ ಮನೆಗೆಲಸವು ವಿಶೇಷವಿರಲಿಲ್ಲ. ಅದರಿಂದ ಅವಳಿಗೆ ಹೆಚ್ಚಾಗಿ ಪುರುಸೊತ್ತು ದೊರೆಯಹತ್ತಿತು.. ಅದಕ್ಕಾಗಿಯೇ ಈ ಬಗೆಯ ತಕರಾರುಗಳನ್ನು ಮಾಡಲಿಕ್ಕೆ ಅವಳಿಗೆ ಅನುವು ದೊರೆಯಿತೆಂದೂ ಒಮ್ಮೊಮ್ಮೆ

ನನಗನಿಸಹತ್ತಿತು. ಮನುಷ್ಯನಿಗೆ ಬೇರೆ ವೈರಿಗಳಾರೂ ಇರುವದಿಲ್ಲ. ಬಿಡುವಿ ನಂತಹ- ಕರ್ತವ್ಯವಿಹೀನತೆಯು-ದುಷ್ಟ ವೈರಿಯು ಮಾನವನಿಗಿನ್ನೊಂದಿಲ್ಲ. ಬಿಡು ವಿನ ಮೂಲಕ ಮನುಷ್ಯನಿಂದ ಹಲವು ಅನರ್ಥಗಳುಂಟಾಗುತ್ತವೆ. ಸಾಕಷ್ಟು-ಹೊರಲಾರದಷ್ಟು-ಕೆಲಸವಿದ್ದಿತೆಂದರೆ, ಮನುಷ್ಯನು ಸಹಜವಾಗಿಯೇ ಸಾಧುವೃತ್ತಿ ಯವನಾಗುತ್ತಾನೆ; ಮತ್ತು ಅಂಥವನ ದೇಹದಲ್ಲಿ ಷಡ್ರಿಪುಗಳ ಸಂಚಾರವು ಸಹಸಾ ಆಗುವುದಿಲ್ಲ. ಈ ಲೋಕದೊಳಗಿನ ಹಲವು ಅನರ್ಥಗಳು ಈ ಕರ್ತವ್ಯವಿಹೀನ ತೆಯು ಬಿಡುವಿನಿಂದಲೇ ಮನುಷ್ಯನಿಗುಂಟಾಗುತ್ತಿರುತ್ತವೆಂದು ನನ್ನ ದೃಢವಾದ ಮತವು. ಆದರಿಂದ ನನ್ನ ಗೃಹಿಣಿಯ ತಕರಾರುಗಳಲ್ಲಿ ನನಗೆ ನಂಬಿಗೆಯೇ ಉಂಟಾ ಗದಾಯಿತು; ಆದರೆ ಆ ಮೇಲೆ ನನಗೆ ಮತ್ತೊಂದು ವಿಚಾರವು ಸೂಚಿಸಿತು. ಯಾವ ನನ್ನ ಗೃಹಿಣಿಯು ತನ್ನ ಜಾಣ ಹಾಗು ಗಳಿಸುವ ಮಗನೆದುರಿಗೆ ನನ್ನನ್ನು ಕೂಡ ತುಚ್ಛವೆಂದು ತಿಳಿಯುತ್ತಿದ್ದಳೋ ಮತ್ತು ಮಗನ ಗೌರವದಲ್ಲಿ ಯಾವಳಿಗೆ ನನ್ನಂ ತಹ ಮುದುಕ ಗಂಡನ ಶುಶ್ರೂಷೆಯ ಪರಿವೆ ಕೂಡ ಉಳಿದಿರಲಿಲ್ಲವೆಂದು ನನಗನಿಸು ತ್ತಿತ್ತೋ, ಅಂಥ ಆ ನನ್ನ ಗೃಹಿಣಿಯು ಇತ್ತೀಚೆಗೆ ತನ್ನ ಮಗನ ಮೇಲೆಯೂ ಸಿಟ್ಟಾಗ ಹತ್ತಿದಳು; ಅವನ ಹೆಸರು ಕೂಡ ತೆಗೆಯುತ್ತಿರಲಿಲ್ಲ. ಆತನ ವೈಭವದ ಬಗ್ಗೆ ಅವಳಿಗೆ ಏನೊಂದೂ ಚೋಜಿಗವೆನಿಸದಾಯಿತು. ಇವೆಲ್ಲ ಸುಮ್ಮನೆ ಆಗಿರುವವೆ? ಸೊಸೆಯು ವಿಷಯದ ದೂರು ಹೇಳಿದ್ದರಿಂದ ನನ್ನ ಖಾತ್ರಿಯಾಗುವದಿಲ್ಲೆಂಬ ತಿಳುವಳಿಕೆಯಿಂದ ಅವಳು ಬರುಬರುತ್ತ ಮಗನ ವಿಷಯಕವಾಗಿಯೂ ದೂರು ಹೇಳತೊಡಗಿದಳು.

'ನನ್ನ ಸಮಕ್ಷ ಸೊಸೆಯು ಅಟ್ಟಕ್ಕೆ ಹೋಗಿ ತನ್ನ ಗಂಡನೊಡನೆ ಮಾತಾ ಡುತ್ತ ಕೂಡುವಳು; ಗಟ್ಟಿಗಟ್ಟಿಯಾಗಿ ಮಾತಾಡುತ್ತಾಳೆ; ನಗುತ್ತಾಳೆ; ಕೆಲೆಯು ತ್ತಾಳೆ. ಇದೇನು ರೀತಿಯೇ ನನಗೆ ಬಾಯಿಗೆ ಬಂದ ಹಾಗೆ ಅನ್ನುತ್ತಾಳೆ; ನನ್ನೊಡನೆ ಹೆಮ್ಮೆಯಿಂದ ವರ್ತಿಸುತ್ತಾಳೆ. ನಾನು ತನ್ನ ಮನೆಯ ಒಬ್ಬ ದಾಸಿ ಯೇ ಎಂಬಂತೆ ಅವಳ ರೋಷವಿರುತ್ತದೆ' ಹೀಗೆ ಹಾಗು ಇಂಥ ನನ್ನ ಗೃಹಿಣಿಯ ದೂರುಗಳನ್ನೆಲ್ಲ ನಾನು ಸ್ವಸ್ಥ ಮನಸ್ಸಿನಿಂದ ಕೇಳಿಕೊಳ್ಳುತ್ತಿದ್ದೆನು. ಸ್ವಂತಕ್ಕೆ ಆಡ ರದ ಹೊರತು ಬೇರೆಯವರಿಗಾಗುತ್ತಿದ್ದ ಅವಮಾನಾದಿಗಳ ದುಃಖವು ಚೆನ್ನಾಗಿ ತಿಳಿಯು ವದಿಲ್ಲ. "ಹೋಗಲಿ ಬಿಡು ಆ ಕ್ಷುಲ್ಲಕ ಸಂಗತಿಗಳನ್ನು! ಅವುಗಳ ಬಗ್ಗೆ ನೀನಿಷ್ಟೇಕೆ ಖತಿಗೊಂಡಿರುತ್ತೀ? ಆ ಹುಡುಗರು ನಮ್ಮವೇ ಅಲ್ಲವೇ? ಅವರುಗಳ ತಪ್ಪು-ಅಪರಾಧ ಗಳನ್ನು ಹಿರಿಯರಾದ ನಾವುಗಳು ಕ್ಷಮಿಸದಿದ್ದರೆ ಕ್ಷಮಿಸುವವರಾರು? ಇಂತಹ ಸಣ್ಣ-ಪುಟ್ಟ ಸಂಗತಿಗಳ ಕಡೆಗೆ ಲಕ್ಷ್ಯಗೊಟ್ಟು ನೀನು ಮಾತ್ರ ನಿನ್ನ ಜೀವಕ್ಕೆ ಕಷ್ಟವ ನ್ನುಂಟುಮಾಡಿಕೊಳ್ಳುತ್ತೀ. ಮತ್ತೇನೂ ಇಲ್ಲ. ಅವು ಕ್ಷುಲ್ಲಕ ಸಂಗತಿಗಳು. ಅವುಗಳ ಬಗ್ಗೆ ಮನೆಯ ಹಿರಿಯರಾದ ನಾವು ಲಕ್ಷ್ಯಗೊಡಕೂಡದು. ಏನೇ, 'ನಮ್ಮ'ಗಳ ಸಂಬಂಧವೆಂಬದೊಂದು ಪರಿಸಮಣಿಯಂತಿದೆ. ಪರಿಸಮಣಿಯ ಸಂಬಂಧ ದಿಂದ ಕಬ್ಬಿಣವು ಬಂಗಾರವಾಗುವಂತೆ 'ನಮ್ಮ' ಈ ಸಂಬಂಧದಿಂದಲೂ ದೋಷ

ಗಳೆಲ್ಲ ಗುಣವೆಂದು ತೋರಹತ್ತುತ್ತವೆ. ದೇವರ ದಯೆಯಿಂದ ಮಗನು ದೊಡ್ಡವವನಾಗಿ ಸಂಪಾದಿಸಹತ್ತಿ ಸಂಸಾರವನ್ನು ಸಾಗಿಸಹತ್ತಿರುತ್ತಾನೆ. ನಮಗಿನ್ನು ಆ ಸಂಗತಿಗಳನ್ನು ಕಟ್ಟಿಕೊಂಡು ಮಾಡುವುದೇನಿದೆ? ಹರಿ ಹರಿ ಎನ್ನುತ್ತ ಶೇಷಾಯುಷ್ಯದ ದಿನಗಳನ್ನೆಣಿಸಹತ್ತಬೇಕು; ಮತ್ತು ಆ ದಯಾಘನನಾದ ಪರಮೇಶ್ವರನ ಸೇವೆಯಲ್ಲಿಯೇ ಕಾಲಹರಣ ಮಾಡಬೇಕು. ಇದನ್ನೆಲ್ಲ ಬಿಟ್ಟು, ಅವಳು ಹಾಗೆ ಮಾಡಿದಳು; ಅವನು ಹೀಗೆ ಅಂದನು ಎಂಬ ಪಿಸಿ ನುಡಿಗಳನ್ನೇನು ನುಡಿಯುಹತ್ತಿರುವೆ? ನಿನಗೆ ಹುಚ್ಚುಗಿಚ್ಚು ಹಿಡಿದಿಲ್ಲವಷ್ಟೇ?" ಎಂದೆನು.

ಈ ಬಗೆಯ ನನ್ನ ಉಪದೇಶವು ಅವಳಿಗೆ ರುಚಿಸಲಿಲ್ಲ. "ನಿನ್ನೆ ರಾತ್ರಿ ನಮ್ಮ ಬಾಳನು ಮೈಯಲ್ಲಿ ಅಂಗಿ ಹಾಕಿಕೊಂಡು ಊಟಕ್ಕೆ ಕುಳಿತಿದ್ದನು. ಕಾಲು ಕೂಡ ತೊಳೆದಿರಲಿಲ್ಲ. ಸಂಧ್ಯಾವಂದನೆಯನ್ನು ಮಾಡಲಿಲ್ಲ! ಆಗ ನಾನು ಬಾಳಾ ಹೀಗೇಕೆ? ಎಂದು ಕೇಳಲು, ಅದಕ್ಕವನು-'ಅವ್ವಾ, ನಿಮ್ಮ ಈ ಬಗೆಯ ಮಡಿ-ಮೈಲಿಗೆಗಳಿಂದಲೇ ನಮ್ಮ ದೇಶವು ಈ ಪ್ರಕಾರದ ಕಂಗಾಲಸ್ಥಿತಿಗೆ ಬಂದಿತು; ನಮ್ಮ ರಾಜ್ಯಗಳೂ ಹಾಳಾದವು!' ಎಂದನು. ಅದಕ್ಕೆ ನಾನು 'ತಮ್ಮಾ, ಅಂಗಿ ತೆಗೆದಿಟ್ಟು ಕಾಲು ತೊಳೆದು ಊಟಕ್ಕೆ ಕೂಡ್ರುಲಿಕ್ಕೂ ನಮ್ಮ ದೇಶ-ರಾಜ್ಯಗಳು ಹಾಳಾಗಲಿಕ್ಕೂ ಸಂಬಂಧವೇನೆಂದು ಕೇಳಿದೆನು. ಇಷ್ಟರಲ್ಲಿಯೇ ಸೊಸೆಯು ಕಿರಿನಗೆ ನಗುತ್ತ ಅವನಿಗೆ ಉಣಬಡಿಸಿಬಿಟ್ಟಳು! ಕೂಡಲೆ ಬಾಳನು ಚಿತ್ರಾವತಿಗಳನ್ನು ಕೂಡ ಇಡದೆ ಹಾಗೆಯೇ ಒಡ್ಡರ ಹಾಗೆ ಉಣ್ಣತೊಡಗಿದನು! ಬಳಿಕ ಅವರಿಬ್ಬರೂ ಕೂಡಿ ನನ್ನ ಕಡೆಗೆ ಟಕಮಕವೆಂದು ನೋಡಿ ನಗತೊಡಗಿದರು. ಆಗಿನ ಅವರುಗಳ ನಗೆಯ ಭಾವದಿಂದ ನಾನೊಬ್ಬ ಹುಚ್ಚಳು. ಈ ಮನೆಯಲ್ಲಿ ನನ್ನ ಅಧಿಕಾರ-ಸ್ವಾಮಿತ್ವಗಳೇನೂ ಇರುವುದಿಲ್ಲ, ಎಂದು ವ್ಯಕ್ತವಾಗುತ್ತಿತ್ತು. ಅದರಿಂದ ನಿನ್ನೆ ರಾತ್ರಿ ನಾನು ಫಲಾಹಾರ ಮುಂತಾದದೇನೂ ಮಾಡಲಿಲ್ಲ; ಹಾಗೆಯೇ ಹೋಗಿ ಮಲಗಿಕೊಂಡೆನು. ಮಡಿಯಿಲ್ಲ-ಮೈಲಿಗೆಯಿಲ್ಲ; ಹಿರಿಯರಿಲ್ಲ-ಕಿರಿಯರಿಲ್ಲ; ಏನೂ ಇಲ್ಲ. ಇಂತಹ ಮನೆಯಲ್ಲಿ ನೀರಾದರೂ ಕುಡಿಯಬೇಕೇನು? ಆ ನಮ್ಮ ವಿಷ್ಣ್ಯಾನು ತನ್ನ ಅಣ್ಣನಿಗಿಂತಲೂ ಹೆಚ್ಚಾಗಿರುತ್ತಾನೆ. ಆ ಖೋಡಿಯ ಬಾಯಲ್ಲಿ ಯಾವಾಗಲೂ ದೇವರ ನಿಂದೆಯೂ ಧರ್ಮದ ಚೇಷ್ಟೆಯೂ ತುಂಬಿರುತ್ತವೆ. ನಿನ್ನೆ ತಾನು ತನ್ನ ಶಾಲೆಯಲ್ಲಿ ಭಿಸ್ತಿಯ ಪಕಾಲೆಯೊಳಗಿನ ನೀರು ಕುಡಿದನಂತೆ! ಈ ಖೋಡಿಗಳೇನು ನಮ್ಮ ಹುಡುಗರೋ, ನಮ್ಮ ಪೂರ್ವಜನ್ಮದ ವೈರಿಗಳೊ? ನಿನ್ನೆ ಬೆಳಗಿನ ಝಾವದಲ್ಲೆದ್ದ ಆ ವಿಷ್ಣ್ಯಾನು 'ಏಸೂಕ್ರಿಸ್ತನೇ ನನ್ನನ್ನುದ್ಧರಿಸುವವನು' ಎಂದು ಗಟ್ಟಿಗಟ್ಟಿಯಾಗಿ ಹಾಡತೊಡಗಿದನು! ಹಿರಿಯಮಗನಾದ ಬಾಳನ ಗತಿಯು ಹಾಗೆ; ಇನ್ನೂ ಏತರಲ್ಲಿಯೂ ಏನಿಲ್ಲದ ಈ ಚಿಕ್ಕವನ-ವಿಷ್ಣ್ಯಾನ-ಮತಿಯು ಹೀಗೆ!"

ದಿಟವಾಗಿ ಹೇಳುವದೆಂದರೆ ನಮ್ಮ ಬಾಳನು ತಮ್ಮ ಹೆಸರನ್ನುಳಿಸಲಾರನು. 'ಮಂದಿಯ ಮನೆಯ ಹೆಂಗಸರೆಲ್ಲ ಅಜ್ಞಾನಿಗಳಿರುತ್ತಾರಂತೆ; ಮೂರ್ಖರಿರುವರಂತೆ;

ಅವರನ್ನೆಲ್ಲ ಜಾಣರನ್ನಾಗಿ ಮಾಡಬೇಕಂತೆ; ಅವರಿಗೆಲ್ಲ ಕಲಿಸಬೇಕಂತೆ' ಮಂದಿಯ ಮನೆಯ ಹೆಂಗಸರ ಉಸಾಬರಿಯು ಇವನಿಗೇಕೆ? ಅದು ವಿಹಿತವಾಗಿ ತೋರುವುದೇ? ಮೊನ್ನೆ ಆತನ ಮೂರು ನಾಲ್ಕು ಜನ ಸ್ನೇಹಿತರು ಅಟ್ಟದ ಮೇಲೆ ನಗುತ್ತ ಮಾತಾಡುತ್ತ ಕುಳಿತಿದ್ದರು. ಅವರ ಮಾತಿನ ವಿಷಯುವೇ ವಿಚಿತ್ರವಾಗಿತ್ತು. ಅವರು 'ನಮ್ಮ ಸ್ತ್ರೀವರ್ಗ' ಎಂದೆನ್ನುತ್ತಿದ್ದುದು ಚೆನ್ನಾಗಿ ತೋರುವುದೇ? ಇವಳು ಮತ್ತೂ ಅನ್ನುತ್ತಿದ್ದುದೇನಂದರೆ, 'ನಮ್ಮ ಸ್ತ್ರೀವರ್ಗವನ್ನು ಮೊದಲು ಸುಧಾರಿಸಲಿಕ್ಕೆ ಬೇಕು; ಅವರಲ್ಲಿಯ ಲಜ್ಜೆ-ನಾಚಿಕೆಗಳನ್ನು ಹೋಗಲಾಡಿಸಬೇಕು; ಮತ್ತು ಅವರೆಲ್ಲರೂ ಗಂಡಸರೊಡನೆ ಕೂಡಿ ನಡೆಯಲಿಕ್ಕೆ ನಾಚಕೂಡದು....' ಹೀಗೆ ಏನೇನೋ ಮಾತನಾಡುತ್ತಿರುವಾಗ ನಮ್ಮ ಸೊಸೆಯು ಅವರೆಲ್ಲರ ಮಧ್ಯದಲ್ಲಿ ಕುಳಿತು ಅವರೊಡನೆ ನಗೆದಾಡ-ಕೆಲೆದಾಡುವದು ತಮಗೆ ವಿಹಿತವೆನಿಸುವದೇ? ಅಥವಾ ಈ ಹಾಳು ಬೆಂಗಳೂರಿಗೆ ಬಂದ ಮೇಲೆ ತಮ್ಮ ವೃತ್ತಿಯೂ ಹೀಗೆಯೇ ಆಗಿದೆಯೊ? ನಮ್ಮ ಬಾಳನಿಗೂ ಆತನ ಆ ಮಿತ್ರರಿಗೂ ಊರ ಹೆಂಗಸರ ಉಸಾಬರಿಯೇತಕ್ಕೆ ಬೇಕು? ಇಂಥ ಈ ಗುಣಗಳಿಂದ ಆತನ ಮುಖದ ಮೇಲೆಯಷ್ಟೇ ಅಲ್ಲ, ನನ್ನ-ನಿಮ್ಮಗಳ ಮೋರೆಯ ಮೇಲೂ ಜನರು ಉಗುಳದಿರರು!

ಈ ರೀತಿಯಾಗಿ ನನ್ನ ಗೃಹಿಣಿಯು ದಿನಾಲು ಒಂದಿಲ್ಲೊಂದು ಹೊಸ ತಕರಾರು ತಂದು ನನ್ನೆದುರಿಗೆ ಹೇಳುತ್ತಿದ್ದಳು. ಅದರಿಂದ ನನಗೆ ಅದೊಂದು ಹೃದ್ರೋಗವೇ ಗಂಟು ಬಿದ್ದಂತಾಯಿತು. ನನ್ನ ಮನೆಯ ಯಾರ ಬಗ್ಗೆಯೂ ಇತ್ತೀಚೆಗೆ ನನ್ನ ಸ್ವಂತದ ಯಾವ ತಕರಾರೂ ಇರಲಿಲ್ಲ. ಬಾಳನ ಸಂಬಳವು ತಿಂಗತಿಂಗಳಿಗೆ ನನ್ನ ಕೈಸೇರಿ, ನನ್ನಿಂದಲೇ ನಮ್ಮ ಪ್ರಪಂಚದ ಪ್ರತಿಯೊಂದು ಖರ್ಚು-ಕಂದಾಯಗಳು ನಡೆದಿದ್ದವು; ಆದರೂ 'ದ್ಯಾವಾ, ಅಪ್ಪನಿಗೆ ಆ ಅಂಗಡಿಕಾರನ ಇಷ್ಟು ರೂಪಾಯಿ ಕೊಡ ಹೇಳು' ಇಂಥ ನಿರೂಪಗಳೂ 'ಒಂದು ರೂಪಾಯಿ ಇಸಕೊಂಡು ಬಾ; ಐದರ ನೋಟು ಬೇಕೆಂದು ಹೇಳು' ಇಂಥ ಬೇಡಿಕೆಗಳೂ ದಿನಮೇಕ ರೀತಿಯಿಂದ ಹೆಚ್ಚತೊಡಗಿದವು. ಆ ಬೇಡಿಕೆ-ನಿರೂಪಗಳ ಹೆಚ್ಚಳದ ಮೂಲಕ ಸಂಬಳವು ಕೈಗೆ ಬಂದ ಹದಿನೈದು ದಿನಗಳಲ್ಲೇ ನನ್ನ ಹಣದ ಚೀಲದಲ್ಲಿ ಒಂದು ರೂಪಾಯಿ ಕೂಡ ಸಿಲ್ಕುಉಳಿಯದಾಯಿತು! ಪುಸ್ತಕ, ಖುರ್ಚಿ, ಟೇಬಲ್ಲು, ಪಲ್ಲಂಗ, ಕಾಜಿನ ಪಾತ್ರೆ, ಬಗೆಬಗೆಯ ಅರಿವೆ-ಅಂಚಡಿ, ಡ್ರೆಸ್ಸು, ಬೂಟು ಮುಂತಾದ ಜೀನಸುಗಳು ಮಿತಿಮೀರಿ ಬಂದು ಮನೆಯನ್ನು ತುಂಬತೊಡಗಿದವು. ಅದು ನನಗೆ ಸೇರದಾಯಿತು. ಘಂಡು-ಗಿಂಡುಗಳಿಗಾಗಿ ಪ್ರತಿ ತಿಂಗಳಲ್ಲಿ ಎಷ್ಟೋ ದುಡ್ಡು ವೆಚ್ಚವಾಗಹತ್ತಿತು; ಆದರೆ ಯಾವನೊಬ್ಬ ವೈದಿಕ ಬ್ರಾಹ್ಮಣನಿಗೆ ಇಲ್ಲವೆ ದೇವ-ದೇವಾಲಯಗಳಿಗೆ ಒಂದಿಷ್ಟೂ ಖರ್ಚಾಗದಾಯಿತು. ಈ ಸಮಾಜ ಸೇವೆ, ಆ ಸಾರ್ವಜನಿಕ ಸಭೆ, ಆ ಮಹಿಲಾವಿದ್ಯಾಲಯ, ಈ ಅಸ್ಪೃಶ್ಯರ ನಿಧಿ ಮುಂತಾದವುಗಳಿಗೆ ಮಾತ್ರ ದಶಮಸ್ಥಾನದ ವರೆಗೆ ಹಣ ಖರ್ಚಾಗಹತ್ತಿತು. ಅದಾವುದೂ ನನಗೆ ರುಚಿಸುತ್ತಿರಲಿಲ್ಲ;

ಆದರೂ ನಾನು ನನ್ನ ಮನಸ್ಸಿನಲ್ಲಿ 'ಆತನೇ ಗಳಿಸುವವನು. ತನ್ನಿಷ್ಟದಂತೆ ಖರ್ಚು ಮಾಡಲೊಲ್ಲನೇಕೆ?' ಎಂದು ಒಮ್ಮೆ ಯೋಚಿಸಿದರೆ, ಮತ್ತೊಮ್ಮೆ 'ಈ ರೀತಿಯಾಗಿ ಈತನ ಖರ್ಚುವೆಚ್ಚಗಳ ಓಘವು ನಡೆದರೆ ಮನೆಯಲ್ಲಿ ಸಿಲ್ಕು ಉಳಿಯುವ ಬಗೆ ಹೇಗೆ? ಇಡೀ ವರ್ಷದಲ್ಲಿ ನಮ್ಮ ಮನೆತನಕ್ಕೆ ಹತ್ತುದಷ್ಟು ಸಕ್ಕರೆಯು ಇತ್ತೀಚಿಗೆ ನಮಗೆ ಒಂದು ವಾರಕ್ಕೆ ಕೂಡ ಸಾಲದಾಯಿತು! ಚಹ-ಕಾಫಿಗಳ ಸಡಗರವಂತೂ ಒಂದೇ ಸವನೆ ನಡೆದದ್ದೇ. ಬೆಂಗಳೂರಿಗೆ ಬಂದ ನಂತರ ನಾವು ಒಂದು ತಿಂಗಳಿಗೆ ಎಷ್ಟು ಹಾಲು ಕೊಳ್ಳತೊಡಗಿದ್ದೆವೋ ಅಷ್ಟು ಹಾಲು ಈಗ ನಮಗೆ ಪ್ರತಿನಿತ್ಯ ಬೇಕಾಯಿತು.' ಇದೆಲ್ಲ ರೀತಿಯು ನನಗೆ ಸಹನವಾಗದ್ದರಿಂದ ನನ್ನ ಜೀವವು ತಲ್ಲಣಿಸತೊಡಗಿತು!

ಒಬ್ಬ ಮಗನೇ ದುಂದುಗಾರನೆನ್ನಬೇಕೇ? ಸೊಸೆಯು ಅವನಿಗಿಂತಲೂ ಕೈ ಸಡಿಲಿನವಳು. ಇತ್ತೀಚಿಗೆ ಅವಳ ಜಡೆಗೆ ಕೊಬ್ಬರೀ ಎಣ್ಣೆಯು ನಿರುಪಯೋಗವಾಯಿತು. ಕಾಮಿನಿಯಾ-ಸುರಂಗಿ ಮುಂತಾದ ದೇಶೀ-ವಿದೇಶೀಯ ಭಾರೀಬೆಲೆಯ ಕಾಜಿನ ಕುಪ್ಪಿಗಳನ್ನು ತರಿಸಹತ್ತಿದಳು. ಯಾವ ಉತ್ತಮವಾದ ಒಂದು ಸೇರು ಕೊಬ್ಬರಿ ಎಣ್ಣೆಗೆ ಒಂದು-ಒಂದೂಕಾಲು ಆಣೆ ಬೆಲೆ ಬೀಳುವದೋ, ಅದರ ಅಷ್ಟಮಾಂಶ ಭಾಗದ ಆ ಸುವಾಸನೆಯ ಎಣ್ಣೆಗಳಿಗೆ ಒಂದೆರಡು ರೂಪಾಯಿ ಬೆಲೆ ಬೀಳಹತ್ತಿತು. ನಮ್ಮ ಸೊಸೆಯು ತನ್ನ ಗಂಡನ ಮನವೊಲಿಸಿಕೊಂಡು ತನಗಾಗಿ ಕೆಲ ಭಾರೀ ಬೆಲೆಯ ಚಿನ್ನದ ವಸ್ತ್ರ-ಒಡವೆಗಳನ್ನೇನಾದರೂ ತರಿಸಿಕೊಂಡಾಳೆಂದರೆ, ಇವಳಿಗೆ ಅವುಗಳ ಬಗ್ಗೆ ತೀರ ಅನಾಸ್ಥೆಯು!

ನಮ್ಮ ಮನೆಯಲ್ಲಿ ಇಂಥ ಅನೇಕ ಪ್ರಕಾರಗಳು ಏಕೋಪ್ರಕಾರವಾಗಿ ನಡೆದಿದ್ದವು. ನಾನು ಮಾತ್ರ ಕಣ್ಣ ಮೇಲೆ ರೆಪ್ಪೆಗಳನ್ನೆಳೆದುಕೊಂಡು ಸುಮ್ಮನೆ ಕುಳಿತುಬಿಟ್ಟಿದ್ದೆನು. ಹೊಸ ಕಾಲ, ಹೊಸ ಜನರು. ಅದರಲ್ಲಿ ನಮ್ಮಂತಹ ಹಳೇ ಮನ್ವಂತರದವರ ಆಟವೇನು ನಡೆಯ ಬೇಕಾಗಿದೆ? ದಿನಾಲು ಸಂಜೆಯ ಮುಂದೆ ನಾನು ದೇವರ ದರ್ಶನಕ್ಕೆ ಹೋಗುತ್ತಿದ್ದೆನು. ಒಂದು ದಿನ ಅದೇ ಕಾಲಕ್ಕೆ ನಮ್ಮ ಸೊಸೆಯು ಸಾರೋಟಗಾಡಿಯಲ್ಲಿ ಕುಳಿತು ಗಂಡನ ಕಚೇರಿಯ ಕಡೆಗೆ ಹೊರಟುದುದು ಅದೇ ಮೊದಲು ನನಗೆ ಗೊತ್ತಾಯಿತು. ಅದರಿಂದ ಆಗ ನನಗೆ ತುಸ ವಿಷಾದವೂ ಅನಿಸಿತು. ನನಗೆ ಕೆಡಕೆನಿಸಿದ್ದರ ಕಾರಣವೇನಂದರೆ, ಇತ್ತೀಚಿಗೆ ನಮ್ಮ ಮಗ-ಸೊಸೆ ಇವರಿಗೆ ನಮ್ಮಗಳ ಭಿಡೆ-ಮುರುವತ್ತುಗಳ ಪರಿವೆಯಿಲ್ಲದಂತಾಗಿತ್ತು. ಅವರ ಈ ಪ್ರಕಾರಗಳು ನಮಗೆ ರುಚಿಸಲಾರವೆಂಬದರ ಅಂಜಿಕೆಯು ಅವರಿಗೆ ಉಳಿದಿರಲಿಲ್ಲ; ಮತ್ತು ನಮ್ಮಗಳ ಸಿಟ್ಟು-ಲೋಭಗಳೆಂದರೆ ಯಾವ ಗಿಡದ ತೊಪ್ಪಲವೋ? ಎಂದು ಅವರಿಗೆ ಅನಿಸಹತ್ತಿತು.

ಏನಾದರೂ ಅವರು ತರುಣರು; ದೇವರು ಅವರಿಗೆ ಎಲ್ಲ ಬಗೆಯ ಅನುಕೂಲತೆಗಳನ್ನೊದಗಿಸಿ ಕೊಟ್ಟಿರುತ್ತಾನೆ; ಗಂಡ-ಹೆಂಡಂದಿರು ಪರಸ್ಪರರಲ್ಲಿ ಪ್ರೇಮದಿಂದ ನಡೆಯುತ್ತಿದ್ದಾರೆ; ವಿಲಾಸ-ವಿನೋದಗಳನ್ನು ಮಾಡುವ ವಯಸ್ಸು; ತಕ್ಕ

ಸಾಧನಗಳಿರುತ್ತವೆ. ಅಂದ ಬಳಿಕ ಅವರು ಅವುಗಳನ್ನೇಕೆ ಮಾಡಬಾರದು? ಎಂಬ ವಿಚಾರವು ಹೊಳೆಯಲು, ನನಗೆ ತುಸ ಸಮಾಧಾನವೂ ಅನಿಸುತ್ತಿತ್ತು; ಆದರೆ ಅದರಿಂದ ನಮ್ಮ ಹಿರಿಯರ ಅವಮಾನವಾಗುತ್ತಿರುವದಲ್ಲದೆ ಜನರೀತಿಗೆ ಅದು ವಿಪರೀತವಾಗಿಯೂ ತೋರುವುದು, ಮುಂತಾದ ಕಾರಣಗಳ ಮೂಲಕ ನನಗದು ರುಚಿಸದಾಯಿತು.

ನಾನು ದೇವರ ದರ್ಶನ ಮಾಡಿಕೊಂಡು ಮನೆಗೆ ಹಿಂದಿರುಗಲು, ನನ್ನ ಗೃಹಿಣಿಯು ನನ್ನ ಬಳಿಗೆ ಬಂದು:—"ನೋಡಿದಿರಾ, ಸೊಸೆಯು ಸಾರೋಟಿನಲ್ಲಿ ಕುಳಿತು ಕಚೇರಿಯ ಕಡೆಗೆ ಹೋದಳು. ತಾನು ಎಲ್ಲಿಗೆ ಹೋಗುತ್ತೇನೆಂಬದನ್ನು ಕೂಡ ಅವಳು ನನ್ನ ಬಳಿಯಲ್ಲಿ ಹೇಳಲಿಲ್ಲ!" ಎನ್ನಲು, ನಾನು ಆಕೆಯ ಮಾತುಗಳಿಗೆ ತುಸ ಸಹಜವಾಗಿಯೇ ನಕ್ಕೆನು. ಆ ಕೂಡಲೆ ಅವಳು ರೋಷಗೊಂಡು:—"ಮನೆಯೊಳಗೆ ನಡೆದಿರುವ ಈ ಅನನ್ವಿತಗಳಿಗೆಲ್ಲ ನಿಮ್ಮದೇ ಸಮ್ಮತಿಯಿದೆ. ಅವಳು ಹೊರಡುವಾಗ ನಮ್ಮ ಆಳು ಅವಳಿಗೆ 'ನೀವು ಹೀಗೆ ಒಬ್ಬೊಂಟಿಗರಾಗಿ ಹೊರಟರೆ ಅಪ್ಪನವರು ಸಿಟ್ಟುಮಾಡಬಹುದೆ'ಂದು ಹೇಳಲು, ಅದಕ್ಕೆ ನಿಮ್ಮ ಅಕ್ಕರೆಯ ಸೊಸೆಯು 'ಸಿಟ್ಟಾದಾರು. ಸಿಟ್ಟಾಗಲಿಕ್ಕೆ ಅವರದೇನು ಹೊಗಬೇಕಾಗಿದೆ? ನಮ್ಮನ್ನು ಅವರೇ ಸಾಕಿಸಲುಹುತ್ತಿರುವರೇನು?' ಎಂದಂದಳು. ನೋಡಿರಿ! ಅವಳ ಆ ನುಡಿಗಳನ್ನು ನಾನು ಸುಮ್ಮನೆ ಕಿವುಡರ ಹಾಗೆ ಕೇಳಿಕೊಂಡೆನು.

ನನ್ನ ಗೃಹಿಣಿಯ ಆ ಉದ್ರೇಕದ ನುಡಿಗಳಿಂದಲೂ ಮನೆಯಲ್ಲಿ ನಡೆದಿರುವ ಆ ಅನಾಚಾರ-ಅತ್ಯಾಚಾರಗಳ ಸ್ಮರಣದಿಂದಲೂ ಅಂದಿನ ರಾತ್ರಿಯಲ್ಲಿ ನನಗೆ ನಿದ್ರೆಯೇ ಬರಲಿಲ್ಲ. ನಮ್ಮ ಬಾಳನ ಸಂಸಾರದಲ್ಲಿ ಇದುವರೆಗೆ ನನಗನಿಸುತ್ತಿದ್ದ ಸುಖದ ಬದಲು ಇತ್ತೀಚೆಗೆ ಕಡು ದುಃಖವಾಗತೊಡಗಿತು. ನಮಗೆ ಆಯುತ್ತವಾಗಿ ಬೇಕು ಬೇಕಾದ್ದನ್ನು ತಿನ್ನುಣ್ಣಲಿಕ್ಕೆ ಸಿಗಹತ್ತಿತ್ತು. ಯಾವ ಬಗೆಯ ಚಿಂತೆ-ಯೋಚನೆಗಳೂ ಉಳಿದಿರಲಿಲ್ಲ. ಸುಖಸಮಾಧಾನದಿಂದ ಕಾಲಕ್ರಮಣವಾಗಹತ್ತಿತ್ತು. ಹೀಗಿದ್ದರೂ ಇತ್ತೀಚೆಗೆ ನಮ್ಮಗಳ ಮತಭೇದ, ರೀತಿ-ನಡಾವಳಿ, ಮಾನಾಪಮಾನ ಮತ್ತು ರೂಢಿ ಮುಂತಾದವುಗಳು ನಮ್ಮ ಸ್ವಂತದ ಮೇಲೆಯೇ|ಶಸ್ತ್ರವನ್ನೆತ್ತಲಾರಂಭಿಸಿದವು. ಒಮ್ಮೆ ಯಾವನೊಬ್ಬನು ಮನಸ್ಸಿನಿಂದ ಬೇಡಾದನೆಂದರೆ, ಆತನಲ್ಲಿಯ ಸದ್ವರ್ತನವೂ ದುರ್ವರ್ತನದಲ್ಲಿ ಪರಿಣತಗೊಳ್ಳುತ್ತದೆ. ನನ್ನ ಮಗ ಮತ್ತು ಸೊಸೆ ಇವರು ಇದುವರೆಗೆ ನನಗೆ ಒಳ್ಳೇ ಕೌತುಕದವರಾಗಿ ತೋರುತ್ತಿದ್ದರು; ಆದರೆ ಇತ್ತೀಚೆಗೆ ನನ್ನ ಆ ಮನೋಧರ್ಮವು ಬದಲಿಸಹತ್ತಿತು. ನನ್ನಲ್ಲಿಯ ಸುಖ-ಸಮಾಧಾನಗಳಿಗೆ ನಾನೇ ಅಡ್ಡಬರತೊಡಗಿದೆನು. ಅವರ ಎಷ್ಟೋ ಸಹಜವಾದ ಮಾತು-ಕಥೆಗಳನ್ನು-ಈ ಮೊದಲು ಎಂದೂ ನನ್ನ ಧ್ಯಾನದಲ್ಲಿರದಂತಹವುಗಳನ್ನು-ಇತ್ತೀಚೆಗೆ ನಾನು ಚರ್ವಿತ-ಚರ್ವಣ ಮಾಡಲಾರಂಭಿಸಿದೆನು. ನಾನು ಬಹು ವಿವೇಕಿಯು; ವಿಚಾರಿಯು. ಇಂಥ ನನ್ನ ದೆಸೆಯೇ ಹೀಗಾದ ಬಳಿಕ, ಮಂದಮತಿಯಾದ ನನ್ನ ಗೃಹಿಣಿಯು

ಅವಸ್ಥೆಯನ್ನೇನು ಬಣ್ಣಿಸಬೇಕು?

ಒಂದು ದಿನ ಬೆಳಗ್ಗೆ ನಾನು ನನ್ನ ಕೋಣೆಯಲ್ಲಿ ಕುಳಿತಿರುವಾಗ ನನ್ನ ಗೃಹಿಣಿಯು ನನ್ನೆಡೆಗೆ ಬಂದು:—"ಸರ್ಪುರಿಗೆ ಹೊರಡುವ ಸಿದ್ಧತೆಗೆ ಬೇಗನೆ ತೊಡಗಬೇಕು" ಎಂಬದೊಂದು ವಾಕ್ಯವನ್ನು ನುಡಿಯುವಷ್ಟರಲ್ಲೇ ಅವಳ ಕಣ್ಣೊಳಗಿಂದ ಅಶ್ರುಗಳು ಧಾರೆಗಟ್ಟಿ ಪ್ರವಹಿಸತೊಡಗಿದವು! ಅದರಿಂದ ಮುಂದೆ ಅವಳ ಬಾಯಿಂದ ಒಂದು ಶಬ್ದವೂ ಹೊರಹೊರಡದಾಯಿತು. ಕಣ್ಣುಗಳನ್ನೊರಸಿಕೊಳ್ಳುತ್ತ ಅವಳು ಲಗುಬಗನೆ ಒಳಗೆ ಹೊರಟು ಹೋದಳು. ನನ್ನ ಗೃಹಿಣಿಯ ಆ ಕಾಲದ ಮುಖಚರ್ಯೆ ಹಾಗು ರೋದನಗಳನ್ನು ಕಂಡು ನನ್ನ ಮನಸ್ಸು ಕರಗಿ ಹೋಯಿತು! ತನ್ನ ದುಃಖದ ಕಾರಣವೇನೆಂಬದನ್ನು ಅವಳು ನನಗೆ ತಿಳಿಸಲಿಲ್ಲ; ಆದರೆ ಅವಳಿಗೆ ಹಾಗೆ ಒಮ್ಮೆಲೆ ಅಳುವು ಒತ್ತರಿಸಿದ್ದರಿಂದ, ನಿಜವಾಗಿಯೂ ಅವಳಿಗೆ ಅಸಹ್ಯವಾದ ದುಃಖವಾಗಿರಲಿಕ್ಕೇ ಬೇಕೆಂದು ನನ್ನ ಮನಸ್ಸಿನ ಖಾತ್ರಿಯಾಯಿತು. ನಾನು ಇದುವರೆಗೆ ದಾರಿದ್ರ್ಯದಲ್ಲಿ ಕಾಲಹರಣ ಮಾಡಿದೆನು. ನಾನಾ-ಬಗೆಯ ಕಷ್ಟ-ನಷ್ಟಗಳನ್ನು ಸಹಿಸಿದೆನು; ಆದರೆ ಅವಳು ಒಂದು ದಿನವಾದರೂ ಕಣ್ಣೀರು ಹಾಕಿದ್ದನ್ನು ನಾನು ಇದುವರೆಗೂ ಕಂಡಿರಲಿಲ್ಲ. ನನ್ನ ಗೃಹಿಣಿಯು ಒಳ್ಳೇ ಧೈರ್ಯದವಳೆಂದು ನನಗೆ ಅಭಿಮಾನವೆನಿಸುತ್ತಿತ್ತು. ಅವಳು ಏತಕ್ಕೂ-ಎಂಥ ಸಂಕಟಕ್ಕೂ ಅಂಜತಕ್ಕವಳಲ್ಲೆಂದು ನಾನು ಅನುಭವಗೊಂಡಿದ್ದೆನು. ಯಾವಾಗಲೂ ಸಂತುಷ್ಟವೃತ್ತಿಯೂ ನಗೆಮೊಗವೂ ಇವು ನನ್ನ ಗೃಹಿಣಿಯ ದೃಕ್‌ಚಿಹ್ನಗಳು. ಹೀಗಿದ್ದು ಈಗ ಅವಳು ಅಳುಮೋರೆ ಮಾಡಲಿಕ್ಕೆ ಅವಳಿಗೆ ಅದಾವ ದುಃಖವಾಯಿತೆಂಬದು ನನಗೆ ತಿಳಿಯದಾಯಿತು. ಅವಳ ಆ ರೋದನವನ್ನು ಕಂಡು ನನ್ನ ಅಂತಃಕರಣದಲ್ಲಿ ಅಲ್ಲೋಲ-ಕಲ್ಲೋಲವಾಯಿತು. ಅವಳ ಆ ಸ್ಥಿತಿಯಿಂದ ನನಗೆ ಹೆಚ್ಚಾಗಿ ಕೆಡಕೆನಿಸಿತು. ನನ್ನಲ್ಲಿಯ ಸಂತಾಪವು ಜ್ವಾಲಾಮುಖಿಯಂತೆ ಒಮ್ಮೆಲೆ ಜಾಗೃತವಾಯಿತು. ಸ್ವಂತದ ಹೆಂಡತಿಯ ಅನುಕಂಪನೀಯ ಸ್ಥಿತಿಯನ್ನು ಕಂಡು ಗಂಡನಲ್ಲುಂಟಾಗುವ ಸಂತಾಪವು ಬಹು ವಿಲಕ್ಷಣವಾದದ್ದೇ ಸರಿ!

ಶ್ರೀ ಕೃಷ್ಣ ಪರಮಾತ್ಮನ ತಂಗಿಯಾದ ದ್ರೌಪದೀದೇವಿಯ ವಿಡಂಬನೆಯು ಕೌರವರ ಸಭೆಯಲ್ಲಿ ಅವಳ ಐದು ಜನ ಗಂಡಂದಿರೆದುರಿಗೆ ನಡೆದಿರಲು, ಅದನ್ನು ಆ ಪಂಚಪಾಂಡವರು ಹೇಗೆ ಸಹಿಸಿರಬಹುದು? ಎಂಬ ವಿಚಾರವು ನನ್ನ ಮನಶ್ಚಕ್ಷುಗಳೆದುರಿಗೆ ಬಂದು ನಿಂತಿತು; ಆದರೆ ಆ ವಿಚಾರದ ಯೋಗದಿಂದ ನನ್ನಲ್ಲಿಯ ಸಂತಾಪವೇನೂ ಕಡಿಮೆಯಾಗಲಿಲ್ಲ. ಮಗ ಮತ್ತು ಸೊಸೆಗಾಗಿ ನಾವುಗಳೆಷ್ಟು ಕಷ್ಟ ಸಹಿಸಿದೆವೆಂಬದು ನೆನಪಾಗಿ, ನನ್ನಲ್ಲಿಯ ಸಂತಾಪವು ಹೆಚ್ಚಹತ್ತಿತು. ನಾನು ಸಂತಪ್ತನಾದುದನ್ನು ನನ್ನ ಗೃಹಿಣಿಯು ಕಂಡು ಹಿಡಿದಳು; ಅದರಿಂದ ಪಾಪ! ಆ ಬಡವೆಯು ಗಾಬರಿಗೊಂಡಳು. ಅವಳಲ್ಲಿಯ ದುಃಖವು ಎತ್ತಿಂದ ಎತ್ತೋ ಹೊರಟು ಹೋಯಿತು. ಅವಳು ನನ್ನೆಡೆಗೆ ಬಂದು ನನ್ನನ್ನು ಸಂತೈಸಲಾರಂಭಿಸಿದಳು.

"ಅದರಲ್ಲೇನಿದೆ? ಅವರೆಲ್ಲ ನಮ್ಮ ಹುಡುಗರೇ ಅಲ್ಲವೆ? ಅವರ ಬಗ್ಗೆ ಇಷ್ಟೇಕೆ ಕ್ಷೋಭಗೊಳ್ಳಬೇಕು?" ಹೀಗೆಂದು ಹೇಳಿ ಅವಳು ನನ್ನ ಸಿಟ್ಟನ್ನು ಕಡಿಮೆ ಮಾಡ ಲಿಕ್ಕೆ ಪ್ರಯತ್ನಿಸತೊಡಗಿದಳು. ಅವಳ ಮನಸ್ಸಿನ ಆ ಮಾರ್ದವವನ್ನು ಕಂಡು ನನಗೆ ನಗೆ ಬಂದಿತು. ನಾನು ನಕ್ಕದ್ದನ್ನು ಕಂಡು ಅವಳಿಗೆ ಹಿಡಿಸಲಾರದಷ್ಟು ಆನಂದವಾಯಿತು!

ನನ್ನ ಗೃಹಿಣಿಗೆ ದುಃಖವಾಯಿತೆಂದು ನಾನು ಸಂತಾಪಗೊಂಡೆನು; ಮತ್ತು ನನ್ನ ಸಿಟ್ಟು ಹೋಗಲಾಡಿಸುವದಕ್ಕೆಂದು ಅವಳೇ ನನ್ನ ಸಮಾಧಾನ ಮಾಡತೊಡ ಗಿದಳು! ವಾಚಕರೇ, ನೋಡಿದಿರಾ ಇದೆಂಥ ಚಮತ್ಕಾರವೆಂಬದನ್ನು? ಆಗ ನನಗೆ ಹೆಚ್ಚಾಗಿ ನಗೆ ಬಂದಿತು; ಆದರೆ ಆ ಪ್ರಸಂಗದಿಂದ ಪ್ರಪಂಚದಲ್ಲಿ ಹೆಂಡತಿಯೆಂಬ ದೊಂದು ಅಖಂಡವಾದ ನಿಜಸುಖವಿರುತ್ತದೆಂದು ಖಾತ್ರಿಯಾಯಿತು! ನನ್ನ ಗೃಹಿ ಣಿಯ ಪ್ರತಿಯೊಂದು ಗುಣಗಳೂ ಅಮೂಲ್ಯವಾಗಿದ್ದವು. ಸ್ವಂತದ ಮಾನ-ಅವಮಾನ ಅಥವಾ ತನ್ನ ಜೀವದ ಅತ್ಯಂತ ದುಃಖ ಇಲ್ಲವೆ ತನಗುಂಟಾಗಿರುವ ಯಾವದೊಂದು ಅಡಚಣಿ ಮುಂತಾದವುಗಳ ಪರಿವೆಯನ್ನು ಪತಿಯ ಸುಖದೆದುರಿಗೆ ಕೊಂಚವೂ ಮಾಡಕೂಡದೆಂಬ ತಿಳಿವಳಿಕೆಯು ಹೆಣ್ಣುಮಕ್ಕಳಲ್ಲಿರುತ್ತದೆಂಬದನ್ನು ಪ್ರತ್ಯಕ್ಷ ಉದಾ ಹರಣೆ ಸಹಿತವಾಗಿ ನಾವು ನೋಡಹತ್ತಿದೆವೆಂದರೆ, ಆಗಿನ ಕಾಲದ ಮನಸ್ಸಿನ ಸುಖ-ಸಮಾಧಾನಗಳಿಗೆ ಮೇರೆಯೇ ಉಳಿಯುವದಿಲ್ಲ! ಈ ಸಂಸಾರದೊಳಗಿನ ಹಲವು ಚಿಂತೆ ಮತ್ತು ಯೋಚನೆಗಳು, ಸಂಕಟ ಮತ್ತು ಅಡಚಣಿ ಮುಂತಾದವುಗಳನ್ನು ಚೆನ್ನಾಗಿ ತೊಳೆದು ಬಿಡುವ ನೀರಿನ ಸೆಲೆಗಳನ್ನು ಬ್ರಹ್ಮನು ಸ್ತ್ರೀಯರಲ್ಲಿಟ್ಟುಬಿಟ್ಟಿರುತ್ತಾನೆಂಬ ದರಲ್ಲಿ ಸ್ವಲ್ಪವೂ ಸಂದೇಹವಿಲ್ಲ. ನಾನು ಸುಖ-ಸಮಾಧಾನದಲ್ಲಿ ಕಾಲ ಕ್ರಮಿಸು ತ್ತಿರುವಾಗ ತನ್ನಿಂದ ಅದಕ್ಕೆ ವಿಘ್ನವುಂಟಾಗುವದೆಂಬ ಯೋಚನೆಯು ಅವಳಿಗೆ ಅದೇ ಮೊದಲು ಉಂಟಾಗಿದ್ದಿತು; ಆದರೆ ತನ್ನ ದುಃಖವು ತನ್ನಿಂದ ಸಹನವಾಗದ್ದ ರಿಂದಲೇ ಅವಳು ಅದನ್ನು ನನ್ನೆದುರಿಗೆ ತೋಡಿಕೊಂಡಿದ್ದಳು; ಆದರೂ ಅದರಿಂದ ನನಗೆ ತೊಂದರೆಯಾಯಿತೆಂಬದು ತಿಳಿದ ಕೂಡಲೆ, ತನ್ನ ದುಃಖವನ್ನು ತಾನೇ ನುಂಗಿ ಕೊಳ್ಳುವ ಕ್ರಮವನ್ನು ಅವಳು ಇರಿಸಿದಳು.

ನನ್ನ ಇನ್ನಿಬ್ಬರು ಮಕ್ಕಳಾದ ವಿಷ್ಣು-ವಾಮನರು ಶಾಲೆಗೆ ಹೋಗುತ್ತಿದ್ದರು. ಅವರ ವರ್ತನದ ಪಡಿಕಟ್ಟಾದರೂ ತಮ್ಮ ಅಣ್ಣನನ್ನೇ ಅನುಸರಿಸಲಾರಂಭಿಸಿದ್ದಿತು. ಅವರ ಆ ರೀತಿಯು ಸಹಜವೇ ಆಗಿತ್ತು. ಅದರಿಂದ ಬರಬರುತ್ತ ಆ ನಮ್ಮ ಇಬ್ಬರು ಚಿಕ್ಕ ಹುಡುಗರು ನಮ್ಮಿಬ್ಬರ ಮಾತನ್ನೂ ಕೇಳದಾದರು. ನಿಮ್ಮ ಹೇಳಿಕೆಯಂತೆ ಮಡಿ-ಮೈಲಿಗೆ, ಸ್ನಾನ-ಸಂಧ್ಯೆಗಳ ಜಂಬರದಲ್ಲಿ ತೊಡಗಿಕೊಂಡರೆ ನಮ್ಮ ಅಭ್ಯಾಸವು ಹೇಗಾ ದೀತೆಂದು ಅವರು ನಮ್ಮನ್ನು ಸ್ಪಷ್ಟವಾಗಿ ಕೇಳಹತ್ತಿದರು. ಪಾಟಿ-ಪುಸ್ತಕಗಳನ್ನು ಕೊಂಡು ಕೊಡುವುದು, ಅರಿವೆ-ಅಂಚಡಿ ಹೊಲಿಸುವುದು, ಫೀಜು-ಫಂಡುಗಳನ್ನು ಕೊಡುವುದು ಮುಂತಾದ ಅವರ ಅವಶ್ಯಕತೆಗಳೆಲ್ಲ ಅವರ ಅಣ್ಣನಿಂದಲೇ ಪೂರೈಸು

ತ್ರಿಪ್ತವು. ಆದರಿಂದ ಅವಾವುಗಳ ಬಗ್ಗೆಯೂ ಅವರು ನನಗಾಗಲಿ ನನ್ನ ಗೃಹಿಣಿಗಾಗಲಿ ಯಾವ ಬಗೆಯಿಂದಲೂ ಹೇಳಿ ಕೇಳಿ ತೊಂದರೆ ಕೊಡುತ್ತಿರಲಿಲ್ಲ. ನಮ್ಮ ಸೊಸೆಯಾದರೂ ಆ ಹುಡುಗರನ್ನು ಒಳ್ಳೇ ರೀತಿಯಿಂದ ನಡಿಸಿಕೊಳ್ಳುತ್ತಿದ್ದಳು; ಯಾಕಂದರೆ, ಅವೆರಡೂ ಹುಡುಗರು ನಮ್ಮಿಬ್ಬರೊಡನೆ ಹೆಚ್ಚು ಬಳಿಕೆ ಮಾಡುತ್ತಿರಲಿಲ್ಲವೆಂದು! ಆದರಿಂದ ನಾವಿಬ್ಬರೂ ಇನ್ನು ಈ ಸಂಸಾರಪಾಶದಿಂದ ಮುಕ್ತರಾದೆವೆಂದು ನನಗನಿಸಿತು. ಇನ್ನು ಮೇಲೆ ನಾವು ಇಲ್ಲಿರದೆ, ತೀರ್ಥ-ಯಾತ್ರೆ ಮಾಡುತ್ತ, ದೇವ-ದೇವತೆಗಳನ್ನು ಭಜಿಸುತ್ತ ಕಾಲಹರಣ ಮಾಡುವದೇ ವಿಹಿತವು. ನಾವು ನಮ್ಮ ಮಗನಿಂದ ನಾಲ್ಕು ಹೆಜ್ಜೆ ದೂರ ಸರಿದರೇ ನಮ್ಮ ಮಾನ-ಮರ್ಯಾದೆಗಳುಳಿದು, ಮಗನಿಗೂ ಸೊಸೆಗೂ ಅನಿರ್ಬಂಧವಾದ ಸ್ವಾತಂತ್ರ್ಯವುಂಟಾದೀತು.

ಹೀಗೆ ನಾನು ಮನಸ್ಸಿನಲ್ಲಿ ಯೋಚಿಸುತ್ತಿರಲು, ನಮ್ಮ ಹಿರಿಯ ಮಗಳಾದ ಮಾಲತಿಯನ್ನೊಮ್ಮೆ ಕೆಲವು ತಿಂಗಳವುಟ್ಟಿಗೆ ತವರುಮನೆಗೆ ಕರೆತರಬೇಕು; ಅಂದರೆ ಅವಳೂ ತನ್ನ ಅಣ್ಣನ ವೈಭವವನ್ನು ಕಂಡು ಹರುಷಗೊಂಡಾಳು; ಮತ್ತು ಅಣ್ಣನಿಗೂ ಅತ್ತಿಗೆಗೂ ನಾಲ್ಕು ಹಿತೋಕ್ತಿಗಳನ್ನು ಹೇಳುವಳು. ನನ್ನಿಂದಾಗಲಿ ನನ್ನ ಗೃಹಿಣಿಯಿಂದಾಗಲಿ ಯಾವ ಎಷ್ಟೋ ಸೂಕ್ಷ್ಮ ಸಂಗತಿಗಳ ಬಗ್ಗೆ ಮಾತನಾಡಲಿಕ್ಕೆ ಬರುವಂತಿಲ್ಲವೋ, ಅಂಥವುಗಳ ಬಗ್ಗೆ ಮಾಲತಿಯು ತನ್ನ ಅಣ್ಣ-ಅತ್ತಿಗೆಯರೊಡನೆ ಸಲಿಗೆಯಿಂದ ಹೇಳಿ ಕೇಳುವಳು. ಮಾಲತಿಯು ಬಂದಳೆಂದರೆ, ನನ್ನ ಗೃಹಿಣಿಗೂ ತುಸ ವಿರಾಮವಾದೀತು. ಮುಂದೆ ಒಂದೆರಡು ತಿಂಗಳಿಗೆ ನಾವಿಬ್ಬರೂ ನಮ್ಮ ಸರ್ಪುರಿಗೆ ಹೊರಡಬೇಕು. ಅಲ್ಲಿ ಕೆಲ ದಿನವಿದ್ದು ಅಲ್ಲಿಯ ನಮ್ಮವರನ್ನೆಲ್ಲ ಕಂಡು, ಅಲ್ಲಿಂದ ಕಾಶೀ ಕ್ಷೇತ್ರಕ್ಕೆ ಹೋಗಿ, ಉಭಯತರೂ ಪತಿತ ಪಾವನೆಯಾದ ಗಂಗೆಯಲ್ಲಿ ಸ್ನಾನ ಮಾಡುತ್ತ ಶ್ರೀ ವಿಶ್ವೇಶ್ವರನ ದರ್ಶನ ಪಡೆಯುತ್ತ ಅಲ್ಲಿಯೇ ಶೇಷಾಯುಷ್ಯವನ್ನು ಕಳೆಯಬೇಕೆಂಬ ಆಲೋಚನೆಯನ್ನು ನಾನು ನನ್ನಷ್ಟಕ್ಕೇ ನಿರ್ಧರಿಸಿಕೊಂಡೆನು.

ನಾನು ನಮ್ಮ ಮಾಲತಿಯನ್ನು ಕರೆಸುವೆನೆಂಬದು ನನ್ನ ಗೃಹಿಣಿಗೆ ತಿಳಿದೊಡನೆಯೇ ಅವಳಿಗೆ ಬಹು ಸಮಾಧಾನವೆನಿಸಿತು. ತಮ್ಮ ಮಾಲತಿಯು ಬಂದ ಮೇಲೆ ಅವಳಿಗೆ ತಮ್ಮ ಮನೆಯಲ್ಲಿ ನಡೆದಿರುವ ಅನಾಚಾರ-ಅತ್ಯಾಚಾರಗಳು ತಿಳಿಯಬಾರದೆಂದೂ, ಅವಳಿಗೆ ಆ ಬಗ್ಗೆ ವಿಷಾದವೆನಿಸಕೂಡದೆಂದೂ ಮತ್ತು ದೇವರು ತೋರಿಸಿರುವ ಬಂಗಾರದಂತಹ ಸುದಿನಗಳನ್ನು ಕಂಡು ಮಾಲತಿಗೆ ಸಂತೋಷವೆನಿಸಬೇಕೆಂದೂ ನನ್ನ ಗೃಹಿಣಿಯು ನಮ್ಮ ಸೊಸೆಯೊಡನೆಯೂ ನೆರೆಹೊರೆಯವರೊಡನೆಯೂ ತುಸ ಕೂಡಿ ನಡೆಯಹತ್ತಿದಳೆಂಬದು ನನಗೆ ತಿಳಿಯ ಬಂತು. ಲೋಕದಲ್ಲಿ ಎತ್ತ ನೋಡಿದರೂ ಸ್ವಾರ್ಥಪರಾಯಣತೆಯ ಹೊರತು ಮತ್ತೊಂದಿಲ್ಲೆಂಬದು ಖಂಡಿತವು; ಮತ್ತು ಅದಕ್ಕಾಗಿ ನಿಜಸಂಗತಿಯನ್ನು ಮುಚ್ಚು-ಮರೆ ಮಾಡಿ, ನೋಡುವವರ ಕಣ್ಣಿಗೆ ವಿಹಿತವಾಗಿ ತೋರುವದಷ್ಟನ್ನೇ ಜನರಿಗೆ ತೋರಿಸುವ ಹವ್ಯಾಸ

ವೊಂದೇ ಪ್ರತಿಯೊಬ್ಬರಲ್ಲಿ ತುಂಬಿ ತುಳಕುತ್ತಿರುತ್ತದೆ. ಇದರ ಹೊರತು ಯಾರಲ್ಲಿಯೂ ಯಾವ ಸತ್ಕರ್ಮವೂ ಇರುತ್ತಿರುವದಿಲ್ಲ. ತಮ್ಮ ಸಿರಿವಂತಿಕೆಯನ್ನು ತೋರಿಸಬೇಕು; ತಮ್ಮ ಸದ್ಗುಣಗಳನ್ನು ಪ್ರದರ್ಶಿಸಬೇಕು; ತಮ್ಮ ದೊಡ್ಡಿಸ್ತಿಕೆಯನ್ನು ಮೆರೆಯಬೇಕು; ತಮ್ಮ ಜಾಣತನವನ್ನು ಪ್ರಕಟಿಸಬೇಕು; ತಾವು ದುಃಖಿಗಳಾಗಿದ್ದರೂ ಒಳ್ಳೇ ಸುಖಿಗಳಿರುತ್ತೇವೆಂದು ತೋರಿಸಬೇಕು; ತಾವು ಬಹು ಜೀನ ಹಂಕರಾಗಿದ್ದರೂ ತಮ್ಮ ಪರಮೌದಾರ್ಯದ ಬಗ್ಗೆ ಜನರಲ್ಲಿ ಭ್ರಮೆಯುಂಟಾಗಬೇಕು; ತಾವು ಸಂತೋಷದಿಂದಿರದಿದ್ದರೂ ಸಂತೋಷದಿಂದಿರುತ್ತೇವೆಂದು ಪ್ರದರ್ಶಿಸಬೇಕು; ಹೀಗೆ ಪ್ರತಿಯೊಂದು ಬಗೆಯಿಂದಲೂ ವಸ್ತುಸ್ಥಿತಿಯನ್ನು ಜನರಿಗೆ ವಿಪರೀತವಾಗಿ ತೋರಿಸುವ ಪ್ರಯತ್ನವನ್ನು ಮಾನವನು ಅಷ್ಟು ಮನಮುಟ್ಟಿ ಅದೇಕೆ ಮಾಡುತ್ತಿರುವನೋ ತಿಳಿಯದಾಗಿದೆ. ನನಗಂತೂ ಈ ಸಂಗತಿಯ ಬಗ್ಗೆ ಬಲು ತಿರಸ್ಕಾರವುಂಟಾಗುತ್ತದೆ.

ನಾವು ಒಳ್ಳೇ ಚಿಂತಾಮಗ್ನರಾಗಿರುವಾಗ ಯಾವನೊಬ್ಬ ಮಿತ್ರ-ಸುಹಾನುಬಂಧಿಯು ಭೆಟ್ಟಿಯಾದನೆಂದರೆ, ನಮ್ಮ ಚಿಂತೆಯನ್ನು ನಾವು ಒಳಗಿಂದೊಳಗೆ ನುಂಗಿಕೊಂಡು, ನಗೆ ಮೊಗದಿಂದ-ಅಂದರೆ ನಾವು ನಿಜವಾಗಿಯೂ ಬಹು ಸಂತೋಷಗೊಂಡವರಂತೆ ನಟಿಸುತ್ತ ಆತನೆದುರಿಗೆ ಮೆರೆಯಹತ್ತುತ್ತೇವೆ. ಇಂಥ ವಿಪರೀತ-ಖೊಟ್ಟಿ ವ್ಯವಹಾರದಿಂದ ನಮಗೆ ಲಭಿಸುವದಾದರೂ ಏನೆಂಬದು ನನಗಂತೂ ತಿಳಿಯದಾಗಿದೆ. ಆದರೂ ಲೋಕ ರೂಢಿಯು ಹೀಗೆಯೇ ಇರುತ್ತಿರುವದು ನಿಜವು. ಇರಲಿ. ನನ್ನ ಗೃಹಿಣಿಯು ತನ್ನ ಮಗಳಿಗೆ ತನ್ನ ಮನೆಯ ಸುಖಾವಹಸ್ಥಿತಿಯು ಹೇಗಿರುತ್ತದೆಂಬದನ್ನು ತೋರಿಸುವ ಸಿದ್ಧತೆಗೆ ತೊಡಗಿದಳು; ಅದರಿಂದ ದಿನಾಲು ಅವಳಿಂದ ನನ್ನೆಡೆಗೆ ಬರುತ್ತಿದ್ದ ಮನೆಯೊಳಗಿನ ತಕರಾರುಗಳು ಇತ್ತೀಚೆಗೆ ಕಡಿಮೆಯಾದವೆಂಬದೊಂದು ಲಾಭವೇ ಆಯಿತೆಂದು ನನ್ನ ನಿದರ್ಶನಕ್ಕೆ ಬಂದಿತು; ಆದರೆ ನಿಜಸ್ಥಿತಿಯನ್ನು ಹೆಚ್ಚು ದಿನ ಅಡಗಿಸಲಾಗದೆಂಬದೂ, ಸುಳ್ಳಿನ ಸ್ವರೂಪವು ಕೂಡಲೆ ಹೊರಬೀಳುತ್ತದೆಂಬದೂ ಮನುಷ್ಯಮಾತ್ರರ ಅನುಭವಕ್ಕೆ ಆಗಾಗ್ಗೆ ಬರುತ್ತಿದ್ದರೂ, ಜನರೆದುರಿಗೆ ಸತ್ಯದ ಆಭಾಸವನ್ನುಂಟುಮಾಡುವ ಪ್ರವೃತ್ತಿಯು ಮಾತ್ರ ಕಡಿಮೆಯಾಗುವದಿಲ್ಲೆಂಬದು ನಿಜವು.

ನಮ್ಮ ಮಾಲತಿಯು ನಮ್ಮ ಮನೆಗೆ ಬಂದ ೮-೧೦ ದಿನಗಳಲ್ಲಿಯೇ ನನ್ನ ಗೃಹಿಣಿಯು ತನ್ನ ದೂರುಗಳನ್ನು ಅವಳೆದುರಿಗೆ ಹೇಳುತ್ತ ಕೂಡ್ರುವಳೆಂದು ನನ್ನ ಖಾತ್ರಿಯಿತ್ತು; ಆದರೆ ಮೊದಮೊದಲು ವಿಪರೀತ ಸ್ಥಿತಿಯ ಆಭಾಸವನ್ನುಂಟುಮಾಡುವಲ್ಲಿ ನ್ಯೂನತೆಯುಂಟಾಗಲಿಕ್ಕಿಲ್ಲೆಂಬ ಬಗ್ಗೆ ಸಂದೇಹವಿರಲಿಲ್ಲ. ಮಾಲತಿಯು ಬಂದ ಬಳಿಕ ನನ್ನ ಗೃಹಿಣಿಯು ನನ್ನೆಡೆಯಲ್ಲಿ ತನ್ನ ದೂರು ಹೇಳಲಿಕ್ಕೆ ಬರಲಿಕ್ಕಿಲ್ಲ; ಅವಳ ಬಳಿಯಲ್ಲಿಯೇ ಎಲ್ಲ ಕರ್ಮಕಥೆಯನ್ನು ಹೇಳಹತ್ತುವಳು. ಅದರಿಂದ ಅನಾಯಾಸವಾಗಿ ನನ್ನ ಬಳಿಯು ಅವಳ ಲಿಪಿರಿಪಿಯು ಕಟ್ಟಾಗಿ, ನಾನು ಸ್ವಲ್ಪಾದರೂ

ಸುಖದಿಂದಿದ್ದೇನೆಂದು ನನ್ನ ತಿಳುವಳಿಕೆಯಾಯಿತು. ನನ್ನ ಗೃಹಿಣಿಯ ಕರ್ಮಕಥೆಯನ್ನು ಕೇಳಿಕೊಳ್ಳಲಿಕ್ಕೆ ಬೇರೆ ಯಾರೂ ಸಿದ್ಧರಿರದ್ದರಿಂದ ಇದುವರೆಗೆ ಆ ಭಾರವನ್ನೆಲ್ಲ ನಾನೇ ವಹಿಸಬೇಕಾಗುತ್ತಿತ್ತು. ಮಾಲತಿಯು ಬಂದಬಳಿಕ ಆ ತೊಂದರೆಯು ಬಹುತಾಂಶವು ಕಡಿಮೆಯಾಗುವದೆಂದು ನನಗನಿಸಿತು. ಅತ್ತೆಯ ಮನೆಯೊಳಗಿನ ಅಡಚಣಿಗಳ ಮೂಲಕ ನಮ್ಮ ಚಂಪೆಯ ಲಗ್ನಕ್ಕೆ ಮಾಲತಿಯು ಬಂದಿರಲಿಲ್ಲ; ಅದರಿಂದ ಚಂಪೆಯ ಗಂಡನ ಮನೆಯ ಕೌತುಕಗಳನ್ನು ಮಾಲತಿಯ ಬಳಿಯಲ್ಲಿ ಕೊಚ್ಚಿಕೊಳ್ಳುವಾಗ ನನ್ನ ಗೃಹಿಣಿಯ ಕಾಲಹರಣವಾಗಿ, ಮಗನ ಹಾಗು ಸೊಸೆಯ ವಿಷಯದ ತಕರಾರುಗಳು ಹೆಚ್ಚಾಗಿ ಉದ್ಭವಿಸಲಾರವೆಂಬದಕ್ಕೆ ಸಂಶಯವಿರಲಿಲ್ಲ. ಅದರಿಂದ ಸುಖ-ಸಮಾಧಾನದ ದಿನಗಳಲ್ಲಿ ನಡುವೆ ಈ ಯಾವ ಬಗೆಯ ಆಪತ್ತಿಯುಂಟಾಗುವದೋ, ಅದನ್ನು ನಿವಾರಿಸಲಿಕ್ಕೆ ಆ ಮಾರ್ಗವು ವಿಹಿತವಾಗಿರುವದೆಂದು ನಾನು ಆಲೋಚಿಸಿದೆನು; ಮತ್ತು ಮಾಲತಿಯನ್ನು ಕರೆತರುವ ಬಗ್ಗೆ ನಾನೇ ನಮ್ಮ ಬಾಳನ ಹತ್ತರ ಮಾತು ತೆಗೆದೆನು.

ಬಾಳನು ಬಹು ಸಂತೋಷದಿಂದ ಮಾಲತಿಯನ್ನು ಕರೆಯಿಸುವ ಬಗ್ಗೆ ಒಪ್ಪಿಗೆ ಕೊಟ್ಟನು. ಬಹಳ ದಿನಗಳಿಂದ ಅವಳ ಭೆಟ್ಟಿಯೇ ಆಗಿಲ್ಲ. ಆದ್ದರಿಂದ ಅವಳನ್ನು ಕರೆಯಿಸಲೇ ಬೇಕು ಮುಂತಾಗಿ ಹೇಳಿ, ಅವನು:-'ಆದರೆ ಅವಳ ಅತ್ತೆಯ ಮನೆಯ ಜನರು ಮಹಾ ಮೂರ್ಖರಿರುತ್ತಾರೆ; ಅದರಿಂದ ಅವರು ಕಳಿಸಿಕೊಡಲಿಕ್ಕಿಲ್ಲ' ಎಂದು ಅಂದನು. ನಮ್ಮ ಬಾಳನ ಆ ನುಡಿಗಳು ನನಗೆ ರುಚಿಸಲಿಲ್ಲ. ಆ ನುಡಿಗಳನ್ನು ಕೇಳಿ, ನಾನು ಒಮ್ಮೆಲೆ ಬೆದರಿದೆನು; ಯಾಕಂದರೆ, ಅವರೆಲ್ಲರೂ ಜಾಣರೋ-ಮೂರ್ಖರೋ ಎಂಬದನ್ನು ಇವನಾವಾಗ ತಿಳಕೊಂಡಿದ್ದನು? ಮತ್ತು ಅದನ್ನು ತಿಳಕೊಳ್ಳುವ ಪ್ರಸಂಗವಾದರೂ ಈತನಿಗೆ ಯಾವಾಗ ಪ್ರಾಪ್ತವಾಗಿತ್ತು? ಒಂದು ವೇಳೆ ಅವರು ಮೂರ್ಖರೇ ಆಗಿದ್ದರೂ ಹಾಗೆಂದೆನ್ನಲಿಕ್ಕೆ ಇವನಿಗೇನು ಅಧಿಕಾರವು? ಹೀಗೆಂದು ನನ್ನ ಮನಸ್ಸು ನನ್ನನ್ನು ಕುರಿತು ಪ್ರಶ್ನೆಮಾಡಿತು.

ಜನರೆಲ್ಲ ಮೂರ್ಖರು; ಮುದುಕರೆಲ್ಲ ಕೆಲಸಕ್ಕೆ ಬಾರದ ಗಾರ್ದಭರು; ದೇವರೇ ಇಲ್ಲ; ಧರ್ಮವೆಂಬದು ಕೇವಲ ನಿರುಪಯೋಗ ಮುಂತಾಗಿ ಏನಾದರೊಂದು ವಿಧಾನಗಳನ್ನು ನಮ್ಮ ಬಾಳನು ಇತ್ತೀಚೆಗೆ ಬಾಯಿಗೆ ಬಂದಂತೆ ಬೊಗಳಹತ್ತಿರುವನೆಂದು ನನ್ನ ಗೃಹಿಣಿಯು ಎಂದಿನಿಂದಲೋ ನನ್ನೆದುರಿಗೆ ಹೇಳತೊಡಗಿದ್ದಳು. ಅದರಿಂದ ಆತನು ನಮ್ಮ ಬೀಗರಿಗೆ ಹಾಗೆ ಒಮ್ಮೆಲೆ ಮೂರ್ಖನೆಂದು ಸಂಬೋಧಿಸಿದ ಬಗ್ಗೆ ನನಗೆ ಆಶ್ಚರ್ಯವೆನಿಸಲಿಲ್ಲ. ಆದರೆ ನನ್ನ ಮಗನಲ್ಲಿ ಹೆಚ್ಚಿನ ಉದ್ದಾಮತನವುಂಟಾಗಿದೆ; ಬಹಿರಾಡಂಬರದಿಂದಲೇ ಆತನಲ್ಲಿ ಆ ವೃತ್ತಿಯುಂಟಾಗಿದೆಯೆಂಬ ಬಗ್ಗೆ ನನಗೆ ಬಲು ಕೆಡಕೆನಿಸಿತು. ಮಾನ-ಮರ್ಯಾದೆ ಮತ್ತು ನಮ್ರತೆ ಇವೆರಡು ಸದ್ಗುಣಗಳ ಗಂಧವು ಕೂಡ ಇಂಗ್ಲಿಷ ಕಲಿತವರಲ್ಲಿರುವದಿಲ್ಲವೆಂಬದು ನಮ್ಮ ಬಾಳನನ್ನೂ ಆತನ ಬೇರೆ ಸ್ನೇಹಿತರನ್ನೂ ಕಂಡು ನನಗನಿಸಹತ್ತಿತು. ಹಳೇ ಪದ್ಧತಿಯು

ಬಾಲಬೋಧ ಜನರೆಂದರೆ 'ಶುದ್ಧ ಪಶುಗಳು' ಎಂದು ತನ್ನ ಮಿತ್ರರ ಬಳಿಯಲ್ಲಿ ಒಮ್ಮೆ ಬಾಳನು ಅಂದಿದ್ದನ್ನು ನಾನು ಸ್ವತಃ ಕೇಳಿಕೊಂಡಿದ್ದೆನು. ಆಗ ಆತನ ಸಂಭಾಷಣವು ನನ್ನನ್ನು ದ್ದೇಶಿಸಿರಲಿಲ್ಲೆಂಬದಕ್ಕೆ ಸಂಶಯವಿಲ್ಲ; ಆದರೂ ಆ ಮಾತಿನ ಬಗ್ಗೆ ನನಗೆ ಸಿಟ್ಟು ಬಂದೀತೆಂದಾಗಲಿ ಇಲ್ಲವೆ ನಾನು ಅದನ್ನು ಹಚ್ಚಿಕೊಂಡು ತನಗೆ ಸಿಟ್ಟು ಮಾಡೇನೆಂಬ ಬಗ್ಗೆಯಾಗಲಿ ಆತನಿಗೆ ಎಚ್ಚರವಿರಲಿಲ್ಲ. ಇರಲಿ. ತಿಳಿಸತಕ್ಕ ತಾತ್ಪರ್ಯ ವಿಷ್ಟೇ, ನಮ್ಮ ಬಾಳನ ಆ ಉಪಮರ್ದಕಾರಕ ನುಡಿಗಳನ್ನು ಸಹಿಸಿಕೊಂಡೂ ನಾನು ಮಾಲತಿಯನ್ನು ಕರೆಯಿಸುವದನ್ನು ನಿಶ್ಚಯಿಸಿದೆನು; ಮತ್ತು ಅದಕ್ಕಾಗಿ ನಾನು ಹರಿಹರಕ್ಕೆ ಯಾರನ್ನಾದರೂ ಕರೆಕಳುಹಿಸುವ ಯೋಚನೆಗೆ ಹತ್ತಿದೆನು.

ಅಂದೇ ಅಪರಾಹ್ಣಕಾಲದಲ್ಲಿ ನಾನು ವಾಮಕುಕ್ಷಿ ಮಾಡಿ ಎದ್ದು ಕುಳಿತಿರುವಾಗ ಒಬ್ಬ ಶಾಲೆಯ ಹುಡುಗನು ನನ್ನ ಬಳಿಗೆ ಬಂದು:—"ಗುರುಭಟ್ಟರೇ-ಗುರುಭಟ್ಟರೇ, ನಿಮ್ಮ ಹುಡುಗನು ಇಂದು ಪಾದ್ರಿಸಾಹೇಬರ ಬಳಿಯ ಬಿಸ್ಕೀಟುಗಳನ್ನು ತಿಂದನು" ಎಂದು ಹೇಳಿದನು.

ಅದಕ್ಕೆ ನಾನು:—ಯಾರು?

ಆ ಹುಡುಗ:—ಗುರುಭಟ್ಟರೇ, ನಿಮ್ಮ ಮಗನು.

ನಾನು:—ನನ್ನ ಮಗನೆಂದರೆ ಯಾರು?

ಹುಡುಗ:—ನಿಮ್ಮ ಮಗನು ಫಿಫ್ತ್ ಫಾರ್ಮಿನಲ್ಲಿರುವನಲ್ಲ, ಆತನು.

ನಾನು:—ಅಂದರಾರೋ?

ಹುಡುಗ:—ನಿಮ್ಮ ವಿಷ್ಣುವು. ಶಾಲೆಯ ಪಾದ್ರೀ ಸಾಹೇಬನ ಬಳಿಯಿಂದ ಬಿಸ್ಕೀಟುಗಳನ್ನಿಸಕೊಂಡು ತಿಂದನು, ಎಂದು ಹೇಳಿ ಹೊರಟು ಹೋದನು.

ಆಗ ನಾನು ನನ್ನಲ್ಲಿಯೇ:—ನಮ್ಮ ವಿಷ್ಣುವು ಆ ಬಿಸ್ಕೀಟುಗಳನ್ನು ಆ ಪಾದ್ರೀ ಸಾಹೇಬನಲ್ಲೇಕೆ ತಿಂದನು? ಈ ಹುಡುಗರು ಶಾಲೆಯಲ್ಲೇನಾದರೂ ಕಲಿಯುವರೋ ಅಥವಾ ಇಂಥ ಅಭಕ್ಷ್ಯಭಕ್ಷ್ಯ, ಅಪೇಯ-ಪಾನಗಳನ್ನು ಮಾಡುತ್ತ ಕಾಲಹರಣ ಮಾಡುವರೋ? ಹೀಗೆ ನಾನು ಯೋಚಿಸಲಾರಂಭಿಸಿದೆನು. ಹುಡುಗರ ಮೇಲಿನ ತಮ್ಮ ಸ್ವಾಮಿತ್ವವು ಸಡಿಲಾಗ ಹತ್ತಿದ ನಂತರ ಅವರಿಗೆ ಬುದ್ಧಿವಾದ ಹೇಳಹೋಯಿತೆಂದರೆ, ಸ್ವಂತದ ಅಪಮಾನದ ಹೊರತು ಯಾವದೂ ಸಾಧಿಸುವದಿಲ್ಲ; ಆದರಿಂದ ನಾನೀಗ ಸುಮ್ಮನಿರುವದೇ ವಿಹಿತವು. ಯಾವನು ಸಾಕಷ್ಟು ದುಡ್ಡು ಸಂಪಾದಿಸಿಟ್ಟಿಲ್ಲವೋ ಅಥವಾ ಯಾವನು ಸ್ವತಃ ಪ್ರಪಂಚಕ್ಕೆ ಮುಖ್ಯ ಆಧಾರಸ್ತಂಭವಾಗಿರುವದಿಲ್ಲವೋ ಅಂಥ ತಂದೆಯ ಮಾತುಗಳನ್ನು ಮಕ್ಕಳು ಎಂದೂ ಕೇಳುತ್ತಿರುವದಿಲ್ಲ. ಅಂದರೆ, ಈ ಲೋಕದೊಳಗಿನ ಎಲ್ಲ ವ್ಯವಹಾರವೂ ದುಡ್ಡಿನ ಬಲದಿಂದಲೇ ನಡೆದಿರುತ್ತದೆ. ಹೆಂಡಂದಿರು ಗಂಡನ, ಮಕ್ಕಳು ತಂದೆಯ, ಭಗಿನಿಯರು ಬಂಧುವಿನ ಮಾತನ್ನು ಕೇಳುವದು ಇಲ್ಲವೆ ಅವರ ಮಾತುಗಳನ್ನು ಮನ್ನಿಸುವದು ಯಾವಾಗಲೆಂದರೆ, ಅವರಲ್ಲಿ ಯಾವಾಗ ದುಡ್ಡಿರುವದೋ ಆಗ. ದುಡ್ಡಿರದಿದ್ದರೆ

ಯಾರು ಯಾರನ್ನೂ ಲೆಕ್ಕಿಸುವದಿಲ್ಲ.

ಅನುಭವ, ಶಾಂತತೆ ಹಾಗು ಚಾತುರ್ಯ ಇಲ್ಲವೆ ಸಜ್ಜನತೆ ಇವಾವುಗಳ ಬೆಳಕೂ ದುಡ್ಡಿನ ಮುಂದೆ ಬೀಳುವುದಿಲ್ಲ. ಮನುಷ್ಯನಲ್ಲಿ ದುಡ್ಡಿರದಿದ್ದರೆ ಆತನು ಮನುಷ್ಯನು ಅಹುದೋ-ಅಲ್ಲವೋ? ಎಂಬ ವಿಚಾರವುಂಟಾಗುತ್ತಿರುವದನ್ನು ನಾವು ಯಾವಾಗಲೂ ಅನುಭವಿಸುತ್ತಿರುತ್ತೇವೆ. ಅದರಿಂದ ಯಾರಿಗೂ ಉಪದೇಶ ಇಲ್ಲವೆ ಏನಾದರೂ ಹೇಳು-ಕೇಳುವ ಗೊಂದಲಕ್ಕೆ ಬೀಳಬಾರದು; ಯಾವನ ಕರ್ಮವು ಹೇಗಿದೆಯೋ ಹಾಗೆ ಫಲವಾಗುವದು; ಆ ಬಗ್ಗೆ ನಾವೇಕೆ ಸುಮ್ಮಸುಮ್ಮನೆ ಪೇಚಾಡ ಬೇಕು? ಎಂಬ ಆಲೋಚನೆಯನ್ನು ನಾನು ದೃಢಪಡಿಸಿಕೊಂಡೆನು; ಆದರೆ ಇಂಥ ಆಲೋಚನೆಗಳಿಂದ ಸುಖ, ಸಮಾಧಾನ, ಮನಶ್ಶಾಂತಿಗಳೆಂದಾದರೂ ಲಭಿಸುವವೇ? ನನ್ನ ಜೀವವು ಹೈರಾಣಗೊಂಡಿತು. ಆಗ ನಾನು ನನ್ನ ಮನಸ್ಸಿನಲ್ಲಿಯೇ:—"ಗುರು ಘಟ್ಟಾ, ಇನ್ನು ಈ ಸಂಸಾರವನ್ನು ಸಾಕು ಮಾಡು. ಈ ಮೊದಲು ಇದ್ದ ಕಷ್ಟ ದಾರಿದ್ರ್ಯವೆಲ್ಲ ಹಿಂಗಿ ಹೋಯಿತು. ಮಗನು ಸಂಪಾದಿಸುವವನಾದನು. ಆತನ ಲೌಕಿಕವೂ ಹೆಚ್ಚುತ್ತಲಿದೆ. ಆದ್ದರಿಂದ ಇನ್ನು ಮೇಲೆ ಇಷ್ಟಕ್ಕೇ ನಿನ್ನ ಹಿರಿಯತನ ವನ್ನು ಸಾಕುಮಾಡಿಕೋ." ಎಂದು ಅಂದುಕೊಂಡೆನು. ಆಗ ನಾನು ಮತ್ತೆ ಸಾವಿನ ಆರಾಧನೆ ನಡೆಯಿಸಿದೆನು; ಆದರೆ ಮರಣವೆಂದಾದರೂ ಮನುಷ್ಯನ ಸ್ವಾಧೀನವಾಗಿ ದೆಯೋ? ಮತ್ತು ಅದು ಆರಾಧನೆಯಿಂದೇನಾದರೂ ಪ್ರಾಪ್ತವಾದದ್ದುಂಟೇ?

ಸಂನ್ಯಾಸವನ್ನು ಗ್ರಹಣಮಾಡಿ ಈ ಪ್ರಾಪಂಚಿಕ ಉಪಾಧಿಯನ್ನು ಕಳ ಕೊಳ್ಳಬೇಕೆಂದು ನನ್ನ ಅಭಿಲಾಷೆಯು; ಆದರೆ ಅದು ಕೈಗೂಡುವ ಬಗೆಯು ಮಾತ್ರ ತಿಳಿಯುದಾಯಿತು. ನನ್ನ ಗೃಹಿಣಿಗೂ ಮಗನಿಗೂ ಇಲ್ಲವೆ ಸೊಸೆಗೂ ಆಕೆಗೂ ಕೂಡಿ ನಡೆಯುತ್ತಿದ್ದರೆ ನೆಟ್ಟಗಾಗುತ್ತಿತ್ತು; ಆದರೆ ಹಾಗಾಗುವದು ಕಾಲತ್ರಯ ದಲ್ಲಿಯೂ ಶಕ್ಯವಿರಲಿಲ್ಲ; ಆದರೂ ಈ ಪ್ರಪಂಚದೊಳಗಿನ ಒಣ ತಾಕಲಾಟಕ್ಕಿಂತ ನಿರಾಮಯವಾದ ಅರಣ್ಯವೇ ಲೇಸು; ಈ ಪ್ರಾಪಂಚಿಕ ಮನುಜರ ಸಹವಾಸ ಕ್ಕಿಂತ ಗಿಡ ಗಂಟಿ, ಪಶು-ಪಕ್ಷಿಗಳ ಸಹವಾಸವೇ ವಿಹಿತವೆಂದು ನನ್ನ ಮನಸ್ಸಿನ ಗ್ರಹಿಕೆಯಾಗಹತ್ತಿತು; ಮತ್ತು ನಾನು ಅದೇ ಸಿದ್ಧತೆಗೆ ತೊಡಗಿದೆನೆನ್ನಬಹುದು.

ನಾನು ಆ ನನ್ನ ಬೇತನ್ನು ಅಮಲಿನಲ್ಲಿ ತರಲುಪಕ್ರಮಿಸಿದೆನು; ಆದರೆ ಅದು ಸಿದ್ಧಿಸುವದು ಮಾತ್ರ ನನ್ನ ಕೈಯಲ್ಲಿರಲಿಲ್ಲ. 'ಮನಸಾ ಚಿಂತಯೇತ್ ಕಾರ್ಯಂ ವಿಧಿರನ್ಯದ್ವಿಚಿಂತಯೇತ್' 'Man proposes God disposes' ಎಂಬ ವಾಕ್ಯಗಳು ನನ್ನ ಕಣ್ಣೆದುರಿಗೆ ಬಂದು ನಿಲ್ಲಹತ್ತಿದವು. ಈ ಬಗೆಯ ವಿವಂಚನೆಯಲ್ಲಿ ನಾನಿರಲು, ನನ್ನ ಗೃಹಿಣಿಯು ಮನೆಯೊಳಗಿಂದ ಸಂಚಿತ ಮುದ್ರೆಯಿಂದ ನನ್ನೆ ಡೆಗೆ ಬಂದು:--"ಹರಿಹರದಿಂದ ಪತ್ರ-ಪಾನುಗಳೇನಾದರೂ ಬಂದಿರುವವೇನು? ಅತ್ತ ಕಡೆಗೆ ಕಾಲರಾಬೇನೆಯು ವಿಪರೀತವಾಗಿದೆಯಂತೆ. ಆ ಭೀಮಾಬಾಯಿಯ ಸವ ತಿಯು ಬಂದಿರುತ್ತಾಳೆ. ಅವಳು ಹರಿಹರದಲ್ಲಿ ಕಾಲರಾಬೇನೆಯಿಂದ ದಿನಾಲು

೨೦-೩೦ ಜನರು ಸಾಯುತ್ತಿದುತ್ತಾರೆಂದು ಅನ್ನುತ್ತಾಳೆ. ಅಲ್ಲಿಂದ ಪತ್ರಗಳು ಬಂದಿರದಿದ್ದರೆ ಅವರಿಗೊಂದು ಪತ್ರವನ್ನಾದರೂ ಬರೆಯುಬಾರದೇ?" ಎಂದಳು. ನಾನು ನಿನ್ನೆ ಸಂಜೆಯ ಮುಂದೆ ಯಾರ ಬಾಯಿಂದಲೋ ಇದೇ ಸಂಗತಿಯನ್ನು ಕೇಳಿದ್ದೆನು. ನಮ್ಮ ಮಾಲತಿ, ಆಕೆಯ ಗಂಡ, ಅತ್ತೆ-ಮಾವ ಮೊದಲಾದವರೆಲ್ಲರೂ ಹರಿಹರ ದಲ್ಲಿಯೇ ಇದ್ದ ಮೂಲಕ, ನಮಗೆ ಅವರ ಬಗ್ಗೆ ಚಿಂತೆಯುಂಟಾಗುವದು ಸ್ವಾಭಾವಿಕವೇ; ಆದರೆ ಚಿಂತೆ ಮಾಡಿದರೂ ಆಗುವದೇನು? ಆಗತಕ್ಕದ್ದೆಂದಾದರೂ ತಪ್ಪಿದ್ದುಂಟೇ?

ಮನುಷ್ಯನು ಚಿಂತೆ ಮಾಡಲಿ-ಮಾಡದಿರಲಿ, ಆಗತಕ್ಕದ್ದು ಆಗಿಯೇ ಆಗುವದು; ಮತ್ತು ಆಗದಿದ್ದದ್ದು ಎಂದೂ ಆಗುವದಿಲ್ಲ; ಆದರೆ ಮಾನವನು ಚಿಂತಾಮಗ್ನನಾಗುವದು ಮಾತ್ರ ತಪ್ಪುವದಿಲ್ಲ. ಮುಂದೆ ಹೀಗೆ ಆದೀತು, ಹಾಗೆ ಆದೀತು ಮುಂತಾದ್ದರ ವ್ಯರ್ಥ ಚಿಂತೆ ಮಾಡುವದಕ್ಕಿಂತ ಬೇರೆ ಮೂರ್ಖತನವಿಲ್ಲ. ದೇವರ ಮೇಲೆ ಭಾರ ಹಾಕಿ ಸುಮ್ಮನಿರುವದೇ ಪ್ರಾಪಂಚಿಕರ ನಿಜವಾದ ಜಾಣತನವು. ದೇವರಲ್ಲಿ ನಿಷ್ಠೆಯಿದ್ದಿತೆಂದರೆ, ಚಿಂತೆಯು ಹೆಚ್ಚಾಗಿ ಕಾಡುವದಿಲ್ಲ ಮುಂತಾದ ವಿಚಾರವನ್ನು ನಾನು ನನ್ನ ಮನಸ್ಸಿನಲ್ಲಿಯೇ ಮಾಡುತ್ತಿರಲಿಕ್ಕೆ ನಮ್ಮ ಬಾಳನಿಂದ ಕಳಿಸಲ್ಪಟ್ಟ ಆತನ ಕಚೇರಿಯ ಶಿಪಾಯಿಯು ನನ್ನ ಬಳಿಗೆ ಬಂದು 'ನೀವು ಹರಿಹರಕ್ಕೆ ಹೊರಡುವ ಸಿದ್ಧತೆ ಮಾಡಬೇಕಂತೆ ಮಾಲತಕ್ಕನ ಯಜಮಾನರು ಬೇನೆಯಿಂದ ಪೀಡಿತರಾಗಿರುತ್ತಾರೆಂದು ನಿಮಗೆ ತಿಳಿಸಿ ಬಾ ಎಂದು ನಮ್ಮ ರಾವಸಾಹೇಬರು ನನ್ನನ್ನು ಇಲ್ಲಿಗೆ ಕಳಿಸಿರುತ್ತಾರೆ.' ಎಂದು ನುಡಿದನು.

'ಅಂದರೆ?' ಎಂಬದೊಂದೇ ಶಬ್ದವು ಆಗ ನನ್ನ ಬಾಯಿಂದ ಹೊರಬಿದ್ದಿತು. ಅಷ್ಟರಲ್ಲಿ ಆ ಶಿಪಾಯಿಯು ಹಿಂದಿನಿಂದ ನಮ್ಮ ಬಾಳನೂ ಅಲ್ಲಿಗೆ ಬಂದನು. ಆತನು 'ಮಾಲತಿಯ ಗಂಡನಿಗೆ ಕಾಲರಾ ಬಂದಿದೆ. ಕಾರಣ ನೀವು ಒಮ್ಮೆಲೆ ಹರಿಹರಕ್ಕೆ ಹೊರಡಬೇಕು.' ಎಂದ ಕೂಡಲೆ ನನ್ನ ಹಲ್ಲಣವೇ ಹಾರಿದಂತಾಯಿತು! ಮುಂದೇನು ಮಾಡಬೇಕೆಂಬುದು ನನಗೆ ಸೂಚಿಸದಾಯಿತು. ನನ್ನ ಮನಸ್ಸಿನಲ್ಲಿ ಎಷ್ಟೋ ತರ್ಕಗಳುಂಟಾಗತೊಡಗಿದವು. ಕಡುವೈರಿಯೂ ಬಗೆಯುಹಂತಹ ಭವಿಷ್ಯಗಳನ್ನು ನನ್ನ ಮನಸ್ಸು ಬಗೆಯಹತ್ತಿತು. ಆ ಸಂಗತಿಯನ್ನು ನನಗೆ ತಿಳಿಸಿ ಬಾಳನು ತನ್ನ ಅಟ್ಟಕ್ಕೆ ಹೋದನು. ನಾನು ನನ್ನ ಕೋಣೆಯಲ್ಲೇ ಕುಳಿತಿದ್ದೆನು. ನನ್ನ ಗೃಹಿಣಿಗೂ ಆ ಸುದ್ದಿಯು ಹತ್ತಿತು. ಆದರಿಂದ ಅವಳು ಗಾಬರಿಗೊಂಡು ಅಳಹತ್ತಿದಳು. ಆಗ ನಾನು ಅವಳನ್ನು ಕುರಿತು:-ಹೀಗೆ ಹುಚ್ಚಿಯ ಹಾಗೆ ಅಳುವೆಯೇಕೆ? ತುಸ ತಡೆ. ನಿಜಸಂಗತಿಯೇನೆಂಬದಾದರೂ ತಿಳಿಯಲಿ. ದೇವರ ದಯದಿಂದ ಎಲ್ಲರೂ ಸುಖದಿಂದಿದ್ದ ಬಗ್ಗೆ ಬೇಗನೆ ಸುದ್ದಿ ಬಂದೀತು. ಬಾಳನಿಗೆ ಇದು ಹೇಗೆ ಮತ್ತು ಎಲ್ಲಿ ತಿಳಿಯಿತೆಂಬದನ್ನು ಕೇಳಬೇಕಾಗಿದೆ, ಎಂದು ಹೇಳಿದವನೇ, ನಾನು ಬಾಳನನ್ನು ಕೂಗಿ ಕರೆದು, ಆ ಬಗ್ಗೆ ಕೇಳಿದೆನು.

ತನಗೆ ತನ್ನ ಹರಿಹರದ ಸ್ನೇಹಿತನೊಬ್ಬನಿಂದ ಪತ್ರ ಬಂದಿದೆಯೆಂದು ಬಾಳನು ತಿಳಿಸಿದನು. ಅದರಿಂದ ನಾನು ಮತ್ತಿಷ್ಟು ಗಾಬರಿಗೊಂಡೆನು. ಹರಿಹರಕ್ಕೆ ಹೊರಡಲೇ ಬೇಕಾದ್ದರಿಂದ ನಾನು ಆ ಸಿದ್ಧತೆಗೆ ತೊಡಗಿದೆನು. ಸಿದ್ಧತೆಯೇತರದು ಮಣ್ಣು! ಏನು ತಕ್ಕೊಳ್ಳಬೇಕು? ಏನು ಮಾಡಬೇಕು? ಮುಂತಾದುದೇನೂ ತಿಳಿಯದಾಯಿತು. ಒಮ್ಮೆ ಒಳಗೆ ಹೋಗಬೇಕು, ಒಮ್ಮೆ ಹೊರಗೆ ಹೋಗಬೇಕು; ಅಟ್ಟವನ್ನೇರಿ ಮಗನ ಕಡೆಗೆ ಹೋಗಬೇಕು, ಅಲ್ಲಿಂದ ಮರಳಿ ಕೆಳಗೆ ಬರಬೇಕು ಹೀಗೆ ಕೆಲ ಕಾಲವನ್ನು ಕಳೆದೆನು. ಇಷ್ಟರಲ್ಲಿ ಖಾಕೀ ಬಣ್ಣದ ಉಡುಪಿನ ಒಬ್ಬ ತಾರಮನ್ನನು ಬಂದನು. ಅವನು ತಂದಿದ್ದ ತಂತಿಯ ಕಾಗದವನ್ನು ಬಾಳನ ಕೈಯಲ್ಲೊಯ್ದು ಕೊಟ್ಟನು. ಆ ತಂತಿಯ ಸಂಗತಿಯೇನೆಂಬದನ್ನು ತಿಳಿಯಲಿಕ್ಕೆ ನನ್ನ ಜೀವವು ಹಾತೊರೆಯಹತ್ತಿತು. ನನ್ನ ಎದೆಯು ಧಡಧಡೆಂದು ಹಾರಹತ್ತಿತು. ಆಗ ನನ್ನಿಂದ ಎದ್ದು ನಿಲ್ಲಲಿಕ್ಕೆ ಕೂಡ ಆಗಲಿಲ್ಲ; ಅದರಿಂದ ನಾನು ಒಮ್ಮೆಲೆ ನೆಲಕ್ಕೆ ಕುಸಿ ಕುಳಿತೆನು. 'ಬಾಳಾ, ಆ ತಂತಿಯಲ್ಲೇನಿದೆ?' ಎಂದು ಕುಳಿತಲ್ಲಿಂದಲೇ ಕೇಳಿದೆನು.

ಬಾಳನು ಒಮ್ಮೆಲೆ ಉತ್ತರ ಕೊಡಲಿಲ್ಲ; ಅದರಿಂದ ನಾನು ನನ್ನ ಮನಸ್ಸಿನಲ್ಲಿ ಏನೋ ಗೊಂದಲವಾಗಿದೆಯೆಂದು ತರ್ಕಿಸಿ, ಮತ್ತೆ ಗಟ್ಟಿಯಾಗಿ ಅದೇ ಪ್ರಶ್ನೆಯನ್ನು ಬಾಳನಿಗೆ ಕೇಳಿದೆನು. ಆಗಲೂ, ಆತನಿಂದ 'ಹೂಂ' ಎಂಬದಿಷ್ಟೇ ಉತ್ತರ ದೊರಕಿತು. ಆತನ ಆಗಿನ ದನಿಯ ಮೇಲಿಂದಲೇ ಲಕ್ಷಣವು ಚೆನ್ನಾಗಿಲ್ಲೆಂಬದು ತಿಳಿಯಿತು. ಅಂತೆಯೇ ಸ್ವತಃ ಹೋಗಿ ಆತನನ್ನು ಕೇಳಿ ತಿಳಿಯಲೋಸುಗ ನಾನೇ ಅಟ್ಟವನ್ನೇರ ಹೊರಟೆನು. ನಾನು ಕೆಲ ಮೆಟ್ಟಲುಗಳನ್ನೇರುವಷ್ಟರಲ್ಲಿ ನಮ್ಮ ಬಾಳನು ಅಟ್ಟದ ಮೇಲಿನ ತನ್ನ ಕೋಣೆಯ ಹೊರಬಾಗಿಲಲ್ಲಿ ನಿಂತುಕೊಂಡು ಕಣ್ಣೀರು ಹಾಕುತ್ತ, ತಂತಿಯ ಕಾಗದದ ಕಡೆಗೆ ನೋಡುತ್ತಿದ್ದನು. ಆತನು ನನ್ನನ್ನು ನೋಡುತ್ತಲೆ "ಇನ್ನು ಹರಿಹರಕ್ಕೆ ಹೋಗುವ ಅವಶ್ಯಕತೆಯುಳಿಯಲಿಲ್ಲ! ತೀರಿತು!! ಎಲ್ಲವೂ ಮುಗಿಯಿತು!!!" ಎಂದು ಹೇಳಹೇಳುತ್ತಲೆ ದುಃಖವು ಒತ್ತರಿಸಿದ್ದರಿಂದ ಗಟ್ಟಿಯಾಗಿ ಅಳಹತ್ತಿದನು.

ಆಗ ಯಾವುದೊಂದು ತೀಕ್ಷ್ಣ ವಿಷದ ನೀರು ಕುಡಿಸಿದ ಹದನಾದ ಕಠಾರಿಯನ್ನು ಒಳ್ಳೇ ಕಸುವಿನಿಂದ ಯಾರೋ ನನ್ನ ಹೃದಯದಲ್ಲಿ ಚುಚ್ಚಿದಂತಾಯಿತು! ಆದರೂ ನಾನು ಒಮ್ಮೆಲೆ ಆ ದುಃಖಕ್ಕೆ ಬಲಿಬೀಳದೆ, ನನ್ನ ಮಗನನ್ನು ಕುರಿತು ಒಳ್ಳೇ ಆವೇಶದಿಂದ 'ತಮ್ಮಾ, ಬಾಳಾ, ಆ ತಂತಿಯಲ್ಲಿ ಬರೆದಿರುವುದಾದರೂ ಏನು?' ಎಂದು ಕೇಳಲು, 'ಮಾಲತಿಯ ಗಂಡನು ಇಂದೇ ಬೆಳಿಗ್ಗೆ ತೀರಿಕೊಂಡನು. ಇನ್ನು ಗುರುಭಟ್ಟರನ್ನು ಕಳಿಸಬಾರದು. ಮಿಕ್ಕ ಸಂಗತಿಯನ್ನು ಹಿಂದಿನಿಂದ ಪತ್ರ ಬರೆದು ತಿಳಿಸುವೆನು.' ಎಂದು ತನ್ನ ಗೆಳೆಯನು ತಿಳಿಸಿರುತ್ತಾನೆಂದು ಬಾಳನು ಹೇಳಿದನು. ಆ ಸಂಗತಿಯನ್ನು ಕೇಳಿ ನಾನೊಂದು ನಿಟ್ಟುಸಿರುಗರೆದು, ಕೆಳಗೆ ಬರಬೇಕೆಂದು ಅಟ್ಟವನ್ನಿಳಿಯಹತ್ತಿದೆನು.

ನನ್ನ ಗೃಹಿಣಿಗೆ ಇದೆಲ್ಲವೂ ತಿಳಿಯಿತು. ಅವಳು ಒಳಗೆ ಎದೆಎದೆ ಬಡಕೊಂಡು ಅತ್ತು ಗೊಂದಲವೆಬ್ಬಿಸ ತೊಡಗಿದಳು. ಮುಂದೆ ಕೆಲ ನಿಮಿಷಗಳಲ್ಲಿಯೇ ನಮ್ಮ ಚಂಪೆಯ ಮನೆಯವರಿಗೆ ಈ ಸುದ್ದಿಯು ಹತ್ತಲು, ಅವರೆಲ್ಲರೂ ನಮ್ಮ ಮನೆಗೆ ಬಂದರು. ನಮ್ಮ ಮೋರಪ್ಪನಿಗೆ ಸುದ್ದಿ ಹತ್ತಲು, ಅತನೂ ನನ್ನ ಭೆಟ್ಟಿಗೆಂದು ಬಂದನು. ಮನೆಯೊಳಗೆ ಹೆಂಗಸರ ಮೇಳವು ಒಂದೇಸವನೆ ಹೆಚ್ಚತೊಡಗಿತು. ನೋಡಿದತ್ತೆಲ್ಲ ಆಕ್ರಾಂತವೇ ಆಕ್ರಾಂತವು! ಆ ಕರ್ಮಕಥೆಯನ್ನು ನಾನಿನ್ನು ನಮ್ಮ ವಾಚಕರಿಗೆ ಹೇಳಲಾರೆನು.

ಒಟ್ಟಿನಲ್ಲಿ ಈ ಲೋಕದಲ್ಲಿ ಸುಖವು ರವಷ್ಟಾದರೆ, ದುಃಖವು ಪರ್ವತದಷ್ಟೆಂಬದು ಸುಳ್ಳಲ್ಲ. ನಾವು ನಾನಾ ದುಃಖಗಳನ್ನು ಬಹು ಕಾಲದ ವರೆಗೆ ಅನುಭೋಗಿಸಿ ಈಚೆಗೆ ಎಲ್ಲಿಯೋ ಅಲ್ಪಕಾಲ ಸುಖದ ಆಸ್ವಾದ ಪಡೆಯುತ್ತಿರುವಾಗ ನಮಗೆ ಪುನಃ ಒಮ್ಮೆಲೆ ದುಃಖದ ಝುಳವು ತಾಕಿಬಿಟ್ಟಿತು!

---

## ೧೨ "ಸ್ವಧರ್ಮೇ ನಿಧನಂ ಶ್ರೇಯಃ...."



ಸ್ವಂತದ ಮೇಲೆ ಸಂಕಟಗಳು ಬಂದವೆಂದರೆ, ಮನುಷ್ಯನಿಗೆ ನಾನಾ ವಿಚಾರಗಳೂ ವೇದಾಂತಪರ ವಚನಗಳೂ ಸ್ಮರಿಸುತ್ತವೆ. ಹೆರವರ ದುಃಖವನ್ನು ಕಂಡು ದುಃಖಿತನಾಗಲಿಕ್ಕೆ ಆ ದುಃಖದ ಅನುಭವವನ್ನು ಸ್ವತಃ ಅನುಭವಿಸಿರಬೇಕಾಗುತ್ತದೆ. ಅದಿಲ್ಲದಿದ್ದರೆ, 'ಪರದುಃಖೇನ ದುಃಖಿತಾ ವಿರಲಾಃ' ಎಂಬದೇ ನಿಜವು. ನನ್ನ ಮೇಲೆ ಈ ಬಗೆಯ ಪ್ರಾಪಂಚಿಕ ದುಃಖದ ಪರ್ವತವು ಕಡಕೊಂಡು ಬಿದ್ದಿತು. ನನ್ನ ಮಗಳ ಮೇಲೆ ವೈಧವ್ಯದ ಪ್ರಸಂಗ ಬಂತು. ಈ ದುಃಖದಿಂದ ನಾನು ತೀರ ಕಂಗೆಟ್ಟೆನು. ಈ ದುಃಖದ ನೋವು ಅಸಹ್ಯವಾಗತೊಡಗಿತು. ನಾನು ದೇವರಿಗೆ ದೋಷಕೊಡಲಾರಂಭಿಸಿದೆನು. ಮನಸ್ಸು ನಾನಾ ಪ್ರಕಾರದ ಕಲ್ಪನೆಗಳಿಗೊಳಗಾಗಿ ನನ್ನನ್ನು ಅಂಜಿಸಹತ್ತಿತು. ಜನನಿಂದೆ, ಲೌಕಿಕ, ಮಾನ-ಮರ್ಯಾದೆ ಮೊದಲಾದವುಗಳು ಹೇಗೆ ಉಳಿದಾವೆಂಬದೊಂದೇ ಅಂಜಿಕೆಯ ಪ್ರಾಬಲ್ಯವು ಸದ್ಯಕ್ಕೆ ನನಗುಂಟಾದ ದುಃಖದಲ್ಲಿತ್ತು. ಮನುಷ್ಯಮಾತ್ರರ ದುಃಖದ ನಿಜವಾದ ಕಾರಣವು 'ಸ್ವ'ತ್ವಕ್ಕೆ ಧಕ್ಕೆ ಹತ್ತುವದರಲ್ಲಿಯೇ ಇರುತ್ತದೆ. ಅದನ್ನು ಬಿಟ್ಟರೆ ಬೇರೆ ಯಾವ ಕಾರಣವೂ ಇರುವದಿಲ್ಲೆಂದು ನನ್ನ ಮನವರಿಕೆಯಾಯಿತು. ಸ್ವಂತದ ಹಾನಿಯ ವಿಷಯವೇ ನಿಜವಾದ ದುಃಖವು. ಮರಣವು ಅಸಹ್ಯವಾದ ದುಃಖವೇಕೆಂದರೆ, ಅದರಲ್ಲಿ ಸ್ವಂತದ್ದೇನಾದರೂ ಹಾನಿ ಇರುತ್ತದೆಂದು. ಅಳುವದು ಸತ್ತ ಪ್ರಾಣಿಯ ಶರೀರಕ್ಕೆಂದಲ್ಲ; ಆದರೆ ಆತನ ಮರಣದಿಂದ ಆಗಿರುವ ಅಥವಾ ಆಗಲಿರುವ ಸ್ವಂತದ ಹಾನಿಗಾಗಿ. ಈ ಬಗೆಯ ವಿಚಾರ ಪರಂಪರೆಯು ಮನಸ್ಸಿನಲ್ಲಿ ಬರಹತ್ತಲು, 'ದುಃಖ' ವೆಂಬದು ಕೇವಲ

ಸ್ವಾರ್ಥಮೂಲವಾದದ್ದೆಂಬ ಬಗ್ಗೆ ನನಗೆ ಚೆನ್ನಾಗಿ ಖಾತ್ರಿಯಾಯಿತು.

ಆದರೆ ಅಂಥ ವಿಚಾರಗಳ ವರ್ಚಸ್ಸು ನನ್ನ ಮೇಲೆ ನಡೆಯದಾಯಿತು. ನಾನು ಎಂಥ ಅಂಜಿಕೆಗೂ ಅಂಜುವವನಲ್ಲವಾದರೂ ಆ ದುಃಖದಿಂದ ಹುರುಪಳಿಸಿ ಹೋದೆನು. ನನ್ನ ಅಕ್ಕರೆಯ ಹಾಗು ಗುಣಶೀಲ ಮಗಳ ಮೇಲೆ ಆ ಪ್ರಸಂಗ ಬಂದಿತ್ತು; ಮತ್ತು ಅದನ್ನು ನಿವಾರಿಸುವ ಸಾಮರ್ಥ್ಯವು ನನ್ನಲ್ಲಿ ಕೊಂಚವೂ ಇರಲಿಲ್ಲ. ಅದರಿಂದ ನನ್ನದು ನನಗೇ ಒಳ್ಳೇ ಸಂತಾಪವುಂಟಾಗುತ್ತಿತ್ತು! 'ಅಪತ್ಯವಾತ್ಸಲ್ಯವೆಂಬದು ಬಹು ಸೂಕ್ಷ್ಮವಾದ ಮನೋಧರ್ಮವಾಗಿದೆ.' ಅದರ ಮೇಲೆ ಬಿದ್ದ ಈ ಭಯಂಕರವಾದ ಕೊಡಲಿಯ ಆಘಾತದಿಂದ ನನ್ನ ಮನಸ್ಸು-ಪ್ರಾಣಗಳು ಕಸವಿಸಿಪಡಹತ್ತಿದವು; ಆದರೆ ಕಾಲದ ಕರ್ತೃತ್ವವು ಅನಿರ್ಬಂಧವಾದ್ದರಿಂದ, ಅಂಥ ಕಠಿಣ ದುಃಖದ ವೇದನೆಗಳೂ ಮೆಲ್ಲಮೆಲ್ಲನೆ ಹಾಗು ತಮ್ಮಷ್ಟಕ್ಕೆ ತಾವೇ ಕಡಿಮೆಯಾಗಹತ್ತಿದವು. ಗಳಿಗೆ ಗಳಿಯಿತು, ತಾಸು ಗತಿಸಿತು, ದಿವಸ ಹೋಯಿತು, ವಾರ ಮೀರಿತು, ತಿಂಗಳು ತುಂಬಿತು. ಹೀಗೆ ದಿನದ ಮೇಲೆ ದಿನಗಳು ಕಳೆಯಹತ್ತಿದಂತೆ ನನ್ನ ಶೋಕಾಗ್ನಿಯ ಜ್ವಾಲೆಗಳು ತನ್ನಷ್ಟಕ್ಕೆ ತಾವೇ ನೊಂದಹತ್ತಿದವು. ನಡುನಡುವೆ ನನ್ನ ಶೋಕಾಗ್ನಿಯು ಚೇತನಗೊಳ್ಳುತ್ತಿತ್ತು; ಆದರೂ ಅದು ಕೂಡಲೆ ಶಾಂತವಾಗುತ್ತಿತ್ತು. ಬರಬರುತ್ತ ಆ ದುಃಖದ ನೆನಪು ಕೂಡ ಆಗದಾಯಿತು!

ಹೀಗಾಗ ಹತ್ತಿದ ಬಳಿಕ ನನಗೆ ಅನಿಸಹತ್ತಿತೇನಂದರೆ, ಈ ನಮ್ಮ ದುಃಖಕ್ಕೆ ದೇವರ ದೋಷವೇನು? ನಾವು ನಮ್ಮ ಕೈಯಿಂದ ಮಾಡಿದ ಕರ್ಮಗಳನ್ನು ನಾವೇ ಉಣ್ಣಬೇಕಲ್ಲವೆ? ಒಂದೇ ಸ್ಥಿತಿಯು ಇಲ್ಲವೆ ಒಂದೇ ಸಂಗತಿಯು ನಿರಂತರದಲ್ಲೂ ಉಳಿಯಬೇಕೆಂಬದು ಈ ಲೋಕ ಚಕ್ರದಲ್ಲಿ ಶಕ್ಯವಿರುವದಿಲ್ಲ. ಈಶ್ವರೀಯೋಜನೆಯ ನಿಯಮಕ್ಕೆ ಪ್ರತಿಯೊಬ್ಬರೂ ಒಳಗಾಗಲೇ ಬೇಕು. ನಮ್ಮ ಕಾಲುಗಳಲ್ಲಿ ನಾವೇ ಬೇಡಿಗಳನ್ನು ತೊಡಕಿಸಿಕೊಂಡು, ಅದರ ದೋಷವನ್ನು ದೇವರ ಮೇಲೆ ಹೊರಿಸುವ ರೀತಿ ಎಲ್ಲಿಯದು? ಮತ್ತು ಪ್ರಾಪ್ತಪ್ರಸಂಗವು ಎಲ್ಲಿಯಾದರೂ ಅಳು-ಕರೆಯುವದರಿಂದಲೂ ಉಸಿರ್ಗರೆವದರಿಂದಲೂ ನೀಗಿ ಹೋದೀತೇ? ಇಂಥ ಪರೋಪದೇಶ ಪಾಂಡಿತ್ಯದ ಉಪಾಯಗಳು ನನಗೆ ಇತ್ತೀಚೆಗೆ ಸ್ಮರಿಸದಾದವು. ನನ್ನಲ್ಲಿಯ ಆ ಪರೋಪದೇಶ ಪಾಂಡಿತ್ಯವು ಎತ್ತಿಂದ ಎತ್ತೋ ಹೊರಟು ಹೋಯಿತು.

ಉತ್ಸಾಹವಿರಹಿತವಾದ ಮನಸ್ಸು, ಖತಿಗೊಂಡ ಉಮೇದು ಮತ್ತು ಬೇಜಾರಗೊಂಡ ಪ್ರಪಂಚ-ಬುದ್ಧಿ ಇವುಗಳ ಬಲಿಯಲ್ಲಿ ನಾನು ಎಷ್ಟೋ ದಿನಗಳ ವರೆಗೆ ಸಿಕ್ಕಿದ್ದರೂ ಆಶೆಯ ಕಡಿವಾಣವು ನನ್ನ ಬಾಯಿಗೆ ಹಾಕಿದ್ದು ಹಾಕಿಯೇ ಇತ್ತು; ಎರಡನೇ ಮಗಳು, ಎರಡನೇ ಮಗ, ಹೆಚ್ಚಿನ ಶ್ರೀಮಂತಿಕೆ, ಹೆಚ್ಚಿನ ಲೌಕಿಕ ಇವುಗಳ ವಿಷಯದ ನನ್ನ ಹಪಾಪಿಯು ಏನಾದರೂ ಕಡಿಮೆಯಾಗದಾಯಿತು. ಮೋಹಜಾಲದ ಎಂಥ ಪ್ರಭಾವವಿದು! ಎಂದು ನನಗೆ ಆಗಾಗ್ಗೆ ಅನಿಸುತ್ತಿದ್ದರೂ, ಕೃತಿಯು ಮಾತ್ರ ಅದೇ! ಗುರುಭಟ್ಟಾ, ಇಲ್ಲಿಯ ಕಾರಭಾರವನ್ನೆಲ್ಲ ಇಲ್ಲಿಯೇ ಚೆಲ್ಲಿಕೊಟ್ಟು, ಇಂದಿಲ್ಲ

ನಾಳೆಗೆ ನೀನು ಹೊರಡುವವನೇ ಎಂದು ನನ್ನ ಮನಸ್ಸು ನನಗೆಂದೂ ಉಪದೇಶಿಸುತ್ತಿದ್ದಿಲ್ಲ. ಇಂದು ಈತನು ಸತ್ತನು; ನಾಳೆ ಆತನು ಸಾಯುವನು ಎಂಬದು ನನಗೆ ತಿಳಿಯುತ್ತಿತ್ತು; ಆದರೆ ನಾನೂ ಸಾಯತಕ್ಕವನೇ ಎಂಬ ಸಂಗತಿಯು ಮಾತ್ರ ನನಗೆ ಎಂದೂ ಸ್ಮರಿಸುತ್ತಿರಲಿಲ್ಲ.

ಒಮ್ಮೆ ಯಕ್ಷನು ಧರ್ಮರಾಜನನ್ನು ಕುರಿತು:-"ಈ ಲೋಕದಲ್ಲಿ ಎಲ್ಲಕ್ಕೂ ದೊಡ್ಡದಾದ ಆಶ್ಚರ್ಯವಾವುದು?" ಎಂದು ಪ್ರಶ್ನೆ ಮಾಡಿದನು. ಆ ಪ್ರಶ್ನೆಗೆ ಅಜಾತಶತ್ರುವಾದ ಧರ್ಮರಾಜನು ಹೇಳಿರುವದೇನಂದರೆ "ಜನರು ಸಾಯುತ್ತಿರುವರೆಂಬದನ್ನು ನೋಡುತ್ತಿರಲಿಕ್ಕೆ ತಾನೂ ಸಾಯತಕ್ಕದ್ದಿದೆಯೆಂಬ ಸಂಗತಿಯನ್ನು ಮನುಷ್ಯನು ಮರೆಯುತ್ತಾನೆ. ಇದರಂತಹ ದೊಡ್ಡ ಆಶ್ಚರ್ಯವು ಮತ್ತಾವುದೂ ಇರುವದಿಲ್ಲ." ಧರ್ಮರಾಜನ ಆ ಮಾತು ಎಷ್ಟು ಸತ್ಯಪೂರ್ಣವಾಗಿರುವದಲ್ಲ!

ನನ್ನ ಹಿರಿಯ ಮಗನು ಮಾಡು-ಮಟ್ಟುವವನಾದನು. ಸಂಸಾರವನ್ನು ತನ್ನಷ್ಟಕ್ಕೆ ತಾನೇ ನಡಿಸಹತ್ತಿದನು. ಆದ್ದರಿಂದ ನಾನಿನ್ನು ಹರಿಹರಿಯೆನ್ನುತ್ತ ಶೇಷಾಯುಷ್ಯವನ್ನು ಕಳೆಯಬೇಕೆಂಬ ವಿಚಾರವು ನನಗೆ ಸೂಚಿಸದಾಯಿತು. ಸೂಚಿಸಿದರೂ ಅದರಂತೆ ವರ್ತಿಸುವದಾಗಲಿಲ್ಲ. ನನ್ನ ಮಗನು ಸಂಸಾರ ಸಾಗಿಸಹತ್ತಿದನೆಂದರೆ, ನಾನು ಹಾಗೆ ಮಾಡೇನು- ಹೀಗೆ ಮಾಡೇನು ಎಂದು ನಾನು ಮೊದಲು ಎಣಿಕೆ ಹಾಕುತ್ತಿದ್ದುದರ ನೆನಪು ಕೂಡ ಈಗ ಆಗದಾಯಿತು! ನಮ್ಮ ಬಾಳನು ನಮ್ಮ ಪ್ರಪಂಚದ ಭಾರವನ್ನು ಹೊರಲಿಕ್ಕೆ ಸಮರ್ಥನಾದಕೂಡಲೆ ನಾನು ದೇವರ ಧ್ಯಾನ-ಭಜನಗಳ ಹೊರತು ಬೇರೆ ಯಾವದಕ್ಕೂ ಒಂದು ಕ್ಷಣಕೂಡ ಕಳೆಯಲಿಕ್ಕಿಲ್ಲೆಂದು ನಾನೆಷ್ಟೋಸಾರೆ ನಿರ್ಧರಿಸಿರಬಹುದು; ಆದರೆ ಈಗ ಅದರ ನೆನಪೇಕೆ ಆಗುತ್ತದೆ? ಜಗತ್ತು ಮಿಥ್ಯ; ಮತ್ತು ಪ್ರಪಂಚವೆಂದರೆ ಕೇವಲ ಸ್ವಪ್ನವೆಂದು ನಾನು ಎಷ್ಟೋ ಜನರಿಗೆ ಹಾಗು ಎಷ್ಟೋ ಆವೇಶದಿಂದ ಹೇಳಿರಬಹುದು; ಆದರೆ ನನ್ನ ಸ್ವಂತದ ಕೃತಿಯು ಮಾತ್ರ ತೀರ ಪ್ರಪಂಚಾಸಕ್ತನದು! ಅದರಿಂದ ನಾನು ಮನಸ್ಸಿನಲ್ಲಿ ಮತ್ತೆ ನಿರ್ಧರಿಸಿದುದೇನಂದರೆ, ಇನ್ನು ಮೇಲೆ ನಾನು ನೆಟ್ಟಗೆ ನಮ್ಮ ಸರ್ಪಪುರಿಗೆ ಹೋಗಬೇಕು; ಹಾಗು ಅಲ್ಲಿ ಸದಾ ದೇವರ ಧ್ಯಾನ-ಭಜನಗಳಲ್ಲಿ ಆಸಕ್ತನಾಗಬೇಕು. ನಾನು ಬೇಗನೆ ಆ ಸಿದ್ಧತೆಗೆ ತೊಡಗಿದೆನು. ನನ್ನ ಆ ಬೇತನ್ನು ನಾನು ನನ್ನ ಗೃಹಿಣಿಗೂ ತಿಳಿಸಿದೆನು; ಆದರೆ ಅದಕ್ಕೆ ಆಕೆಯ ಸಮ್ಮತಿಯೇನೂ ದೊರೆಯದಾಯಿತು. ಸೊಸೆ ಹಾಗು ಮಕ್ಕಳ ಬಗ್ಗೆ ಅವಳು ಎಷ್ಟು ತಕರಾರುಗಳನ್ನು ದಿನಾಲು ಹೇಳುತ್ತಿದ್ದರೂ, ಅವಳಿಗೆ ಸರ್ಪಪುರಿಗೆ ಹೊರಡುವ ನನ್ನ ಬೇತು ರುಚಿಸಲಿಲ್ಲ. ಕಾರಣವೇನೆಂದು ಕೇಳಲು, ನಮ್ಮ ವಿಷ್ಣು-ವಾಮನರಿನ್ನೂ ಚಿಕ್ಕವರು; ಸೊಸೆಗೆ ಇನ್ನೂ ಮಕ್ಕಳು-ಮರಿಗಳಾಗಿರುವದಿಲ್ಲ; ಮನೆಯಲ್ಲಿ ಬೇರೆ ಹಿರಿಯರು ಯಾರೂ ಇರುವದಿಲ್ಲ. ನಾವು ಈಗಲೆ ಸರ್ಪಪುರಿಗೆ ಹೊರಟು ಹೋದರೆ, ಜನರು ಹೀಗೆ ಅಂದಾರು-ಹಾಗೆ ಅಂದಾರು ಎಂದು ನನ್ನ ಗೃಹಿಣಿಯು ನೆವಗಳ ಮಾಲಿಕೆಯನ್ನೇ ಮುಂದೆ ಮಾಡಿದಳು!

ಆಗ ನಾನೊಬ್ಬನೇ ನಮ್ಮೂರಿಗೆ ಹೊರಟು ಹೋಗಬೇಕೆಂದು ಆಲೋಚಿಸಿದೆನು; ಆದರೆ ಅದಕ್ಕೆ ಮುಖ್ಯ ಅಡಚಣಿಯು ನನ್ನ ಊಟ-ಉಡಿಗೆಯದು. ನನಗೆ ಸ್ವಂತ ಅಡಿಗೆ ಮಾಡಿಕೊಳ್ಳುವ ಪ್ರಸಂಗವು ಇದುವರೆಗೆಂದೂ ಬಂದಿರಲಿಲ್ಲ. ಇಷ್ಟರಲ್ಲಿ ಒಂದು ದಿನ ನಮ್ಮ ಮನೆಯಲ್ಲಿ ಅತ್ತೆ-ಸೊಸೆಯಂದಿರಲ್ಲಿ ಜಗಳವಾಗಿ ಅದು ತೀರ ವಿಕೋಪಕ್ಕೆ ಹೋಯಿತು. ಅದರಿಂದ ನನ್ನ ಗೃಹಿಣಿಯೇ ನನ್ನನ್ನು ಕುರಿತು:— 'ಇನ್ನು ಇಲ್ಲಿರುವದು ಸಾಕು; ಬೇಗನೆ ಸರ್ಪಪುರಿಗೆ ಹೊರಡೋಣ' ಎಂದು ಅವಸರಪಡಿಸಹತ್ತಿದಳು; ಮತ್ತು ಆ ಕೂಡಲೆ ನಾನು ನಮ್ಮ ಬಾಳನಿಗೆ ಹೇಳಿ, ಆತನಿಂದ ಖರ್ಚಿಗೆ ಇಸಕೊಂಡು ನಾವಿಬ್ಬರೂ ನಮ್ಮ ಸರ್ಪಪುರಿಗೆ ಹೊರಟುಬಿಟ್ಟೆವು.

ಸರ್ಪಪುರಿಗೆ ಬಂದ ಬಳಿಕ ೧೫-೨೦ದಿನಗಳ ವರೆಗೆ ವಿಹಿತವೆನಿಸಿತು; ಯಾಕಂದರೆ, ಅಲ್ಲಿ ಪ್ರಪಂಚದ ಯಾವ ಚಿಂತೆಯೂ ಇರಲಿಲ್ಲ. ದೇವರ ಧ್ಯಾನ-ಭಜನೆಗಳಿಗೆಂದು ನಾನು ಧಡಪಡಿಸುತ್ತಿದ್ದೆನು; ಆದರೆ ನನ್ನ ಮನಸ್ಸು ಮಾತ್ರ ಪ್ರಪಂಚದಲ್ಲಿಯೂ ನಮ್ಮ ಬಾಳನ, ಚಂಪೆಯ ಮನೆಯವರ ಕೌತುಕವನ್ನು ಹಾಡಿ ಹರಸುವದರಲ್ಲಿಯೂ ಆಸಕ್ತವಾಗಿತ್ತು. ನನ್ನ ಗೃಹಿಣಿಯಂತೂ ಕುಳಿತಾಗ, ನಿಂತಾಗ ಹೋದಲ್ಲಿ, ಬಂದಲ್ಲಿ ಮಗ-ಸೊಸೆಯರ ಲೌಕಿಕವನ್ನು ಕೊಚ್ಚಿಕೊಳ್ಳುತ್ತಿದ್ದಳು ಜನರು ನಮ್ಮ ಬಾಳನ ಸ್ತುತಿ ಮಾಡಿದ್ದನ್ನೂ ಪರ್ಯಾಯದಿಂದ ನನ್ನ ಸ್ತುತಿಮಾಡುವದನ್ನೂ ಕೇಳುವ ಹಪಾಪಿಯು ನನಗುಂಟಾಯಿತು. ಯಾರಾದರೂ ನಮ್ಮ ಬಾಳನನ್ನು ದೈವಶಾಲಿಯೆಂದೂ ನನ್ನನ್ನು ಪುಣ್ಯವಂತನೆಂದೂ ಅಂದ ಕೂಡಲೆ ನನ್ನ ಅಂತರಂಗದಲ್ಲಿ ಬಹು ಸಂತೋಷವಾಗುತ್ತಿತ್ತು; ಆದರೆ ನಾನು ಆ ನನ್ನ ಸಂತಸವನ್ನು ಮುಚ್ಚುಮರೆ ಮಾಡುವದಕ್ಕಾಗಿ:—"ಅದರಲ್ಲೇನಿದೆ? ದೇವರ ದಯೆ!" ಮುಂತಾಗಿ ಹಾರಿಕೆಯ ಹಾಗು ಢೋಂಗೀ ನುಡಿಗಳನ್ನು ನನ್ನ ಬಾಯಿಂದ ಹೊರಡಿಸುತ್ತಿದ್ದನು. ಜನರಿಗೆ ನಮ್ಮ ಐಶ್ವರ್ಯದೋರುವ ಬಗ್ಗೆ ಯಾವ ಹವ್ಯಾಸವು ನನ್ನಲ್ಲಿ ಹುಟ್ಟಿತ್ತೋ, ಆದರ ಶತಾಂಶದಷ್ಟು ಲಕ್ಷ್ಯವು ಕೂಡ ಈಶ್ವರೋಪಾಸನೆಯ ಕಡೆಗೆ ವೇಧಿಸಿರಲಿಲ್ಲ! ಆ ಬಗ್ಗೆ ನನಗೆ ಮತ್ತೆ ಮತ್ತೆ ಆಶ್ಚರ್ಯವೆನಿಸುತ್ತಿತ್ತು. ಬಿಡುವಿದ್ದಾಗ ಮನುಷ್ಯನು ಸ್ವಂತದ ಸ್ವಭಾವ-ಆಚರಣೆಗಳ ಬಗ್ಗೆ ತನ್ನಲ್ಲಿ ತಾನೇ ವಿಚಾರ ಮಾಡಹತ್ತಿದನೆಂದರೆ, ಆತನ ನಡವಳಿಕೆಯ ಕ್ರಮದಲ್ಲಿ ಸುಧಾರಣೆಯಾಗುತ್ತದೆಂದು ನಾನು ಅನುಭವಗಂಡಿದ್ದೆನು. ಅದರಿಂದ ನನ್ನ ವರ್ತನ, ರೀತಿ, ನಡವಳಿಕೆ ಮುಂತಾದವುಗಳ ವಿಷಯದಲ್ಲಿ ನಾನು ಎಷ್ಟೋ ಸಾರೆ ಸೂಕ್ಷ್ಮವಾಗಿ ನಿರೀಕ್ಷಿಸುತ್ತಿದ್ದೆನು. ಏನಾದರೂ ನಾನು ಮನುಷ್ಯನೇ. ಆದ್ದರಿಂದ ನನ್ನಿಂದ ಅಪರಾಧಗಳಾಗುವದು ಕಡಿಮೆಯಾಗುತ್ತಿರಲಿಲ್ಲ.

ಒಮ್ಮೆ ಯಾವುದೊಂದು ವಿಷಯಕ್ಕೆ ನನ್ನಿಂದ ಪ್ರಮಾದವಾಯಿತೆಂದರೆ, ಮುಂದೆ ಕೆಲ ಹೊತ್ತಿನ ಮೇಲೆ ಆ ಬಗ್ಗೆ ನನಗೆ ವಿಷಾದವೆನಿಸಿ, ಮತ್ತೆ ಹೀಗೆ ಮಾಡಕೂಡದೆಂದು ನಾನು ನಿರ್ಧರಿಸುತ್ತಿದ್ದೆನು. ನನ್ನ ಸ್ವಂತದ ಅಥವಾ ನನ್ನ ಮನೆಯ

ಈ ಕ್ಷುಲ್ಲಕತರ ಸಂಗತಿಗಳನ್ನು ನಿಮ್ಮೆಲ್ಲರೆದುರಿಗೆ ಬಿಚ್ಚಿ ಹೇಳುವದರಿಂದ ನನಗೇನೂ ಲಾಭವಿಲ್ಲೆಂಬದು ನನಗೆ ತಿಳಿಯುತ್ತಿದೆ; ಆದರೆ ನಾನಾಪ್ರಕಾರದ ಅನುಭವಪಟ್ಟು ಸಾಕಷ್ಟು ನುಗ್ಗುನುಗ್ಗಾದ್ದರಿಂದ ನನಗೆ ಎಷ್ಟೋ ಸಂಗತಿಗಳ ಮರ್ಮವು ತಿಳಿದಿರುತ್ತದೆ. ಅವುಗಳ ಉಪಯೋಗವುಂಟಾಗಲಿಕ್ಕೆ ನನಗೆ ಅವಕಾಶವುಳಿದಿಲ್ಲ; ಇಲ್ಲವೆ ಅಂಥ ಪ್ರಸಂಗಗಳು ಪುನಃ ನನಗೆ ಪ್ರಾಪ್ತವಾಗುವ ಸಂಭವವು ಕಡಿಮೆಯಾಗಿದೆ. ಆದ್ದರಿಂದ ನಾನು ಅನುಭವದಿಂದ ಕಲಿತಿರುವ ಈ ಜಾಣತನವು ನನ್ನೊಡನೆಯೇ ಸುಟ್ಟು ಬೂದಿಯಾಗುವದು ವಿಹಿತವಲ್ಲೆಂತಲೇ ಗತಗೋಷ್ಟಿಗಳನ್ನು ಸ್ಮರಿಸುತ್ತ, ಆಗಿನ ಕಾಲದ ಸಣ್ಣಪುಟ್ಟ ಕಲ್ಪನೆ, ವಿಚಾರ, ತಿಳುವಳಿಕೆ ಇವುಗಳ ಚರ್ವಿತ-ಚರ್ವಣವನ್ನು ನಿಮ್ಮೆದುರಿಗೆ ನಡೆಸಿರುತ್ತೇವೆ. ತನ್ನ ಸ್ವಂತದ ಗುಣಾವಗುಣಗಳ ನಿರೀಕ್ಷಣ ಮಾಡುವದು ಬಹು ಮಹತ್ವದ ಸಂಗತಿಯಾಗಿದೆ ಎಂಬದನ್ನು ಚೆನ್ನಾಗಿ ತಿಳಕೊಳ್ಳಬೇಕೆಂದು ನಾನು ಎಲ್ಲರಿಗೂ ಸಾರಿ ಸಾರಿ ಹೇಳುತ್ತೇನೆ. ಇರಲಿ.

ಈಶ್ವರ ಸೇವೆಯಲ್ಲಿ ಕಾಲಹರಣ ಮಾಡಬೇಕೆಂದು ನಾನು ಬೆಂಗಳೂರಿಂದ ಸರ್ಪಪುರಿಗೆ ಬಂದೆನು; ಆದರೆ ನನ್ನ ಮನಸ್ಸು ಪ್ರಾಪಂಚಿಕ ಹೊಲಸಿನಲ್ಲಿ ಒಂದೇಸವನೆ ಸರಗಾಡುತ್ತಲೇ ಇದ್ದಿತು. ಪ್ರಾಪಂಚಿಕ ತೊಂದರೆಗಳಿಲ್ಲದೆ ನಿರಾಮಯವಾಗಿದ್ದ ನನ್ನ ಮನಸ್ಸು ಬೇರೆಯವರ ಮನೆಯ ಕಾರಭಾರದ ಕಡೆಗೆ ಧಾವಿಸಹತ್ತಿತು. ನನಗೆ ಸುಖವುಂಟಾಗಿದೆ, ನಾನು ದೈವಶಾಲಿಯು, ನಾನು ಕರ್ತೃತ್ವವಂತನು, ನಾನು ದೊಡ್ಡವನು ಎಂದು ಜನರು ನನ್ನನ್ನು ಹೊಗಳುವ ನನ್ನ ಕೀರ್ತಿಯನ್ನಪೇಕ್ಷಿಸಿದರೆ ಅದರಲ್ಲಿ ವಿಪರಿತವೇನೂ ಇರಲಿಲ್ಲ; ಆದರೆ ಆ ಕೀರ್ತಿಲೋಲುಪಿತನಾದ ನಾನು ಅಷ್ಟಕ್ಕೇ ಸಂತುಷ್ಟನಾಗದೆ, ಬೇರೆಯವರ ದೋಷಗಳನ್ನು ಬೈಲಿಗೆಳೆಯುವ ಉದ್ಯೋಗಕ್ಕೆ ಪ್ರಾರಂಭಿಸಿದೆನು. ಅಂಥವನ ಮಗನು ಹಾಗೆ, ಇಂಥವನ ರೀತಿಯು ಹೀಗೆ; ಅವನು ಹಾಗೆ ಮಾಡುತ್ತಾನೆ, ಇವನು ಹೀಗೆ ಮಾಡಿದನು. ಇಂಥ ಒಣ ಉಸಾಬರಿಯು ನನಗೇತಕ್ಕೆ ಬೇಕಾಗಿತ್ತು? ಆದರೆ ಅದಿಲ್ಲ. ಮುಚ್ಚುಮರೆಯೊಳಗೆ ನಡೆದ ಸಂಗತಿಗಳನ್ನು ಕೂಡ ನಾನು ಉದ್ದುದ್ದಾಗಿ ಗೋಣನ್ನೆತ್ತರಿಸಿ ನೋಡತೊಡಗಿದೆನು. ಮಂದಿಯ ಬಾಯಿಯ ಸತ್ಯ-ಸುಳ್ಳು ದೋಷಗಳನ್ನು ಕೇಳಿಕೊಳ್ಳುವ ಇಚ್ಛೆಯು ನನಗುಂಟಾಯಿತು; ಹಾಗು ಅವುಗಳ ಚರ್ಚೆ ಮಾಡಿ ಧಿಃಕಾರ ಪ್ರದರ್ಶನಗೊಳಿಸುವ ಅವಸರವೂ ನನಗುಂಟಾಯಿತು. ಇದೆಲ್ಲ ಏತಕ್ಕೆ? ಅಂದರೆ, ನಾನು ಬೇರೆಯವರೆಲ್ಲರಿಗಿಂತ ಪ್ರತಿಯೊಂದು ರೀತಿಯಿಂದಲೂ ಶ್ರೇಷ್ಠನೆಂದು ಜನರಿಗೆ ತೋರಿಸಬೇಕೆಂದು. ದೇವರೇ, ಧಿಃಕಾರವಿರಲಿ, ಆ ಬಗೆಯ ನನ್ನ ಛಿದ್ರಾನ್ವೇಷಣದ ಬಾಳಿಗೆ!

ನೆರೆಹೊರೆಯವರು, ಆಪ್ತೇಷ್ಟರು ಮತ್ತು ಸ್ವಕೀಯರೆಂದೆನಿಸಿಕೊಳ್ಳುವ ಪ್ರತಿಯೊಬ್ಬರಲ್ಲಿಯ ವೈಗುಣ್ಯದ ಕಡೆಗೇ ನನ್ನ ಮನಸ್ಸಿನ ಓಘವು. ಅವರುಗಳ ದೋಷದ ಹಾಗು ವ್ಯಂಗಗಳ ಚರ್ಚೆಯನ್ನು ಒಳ್ಳೇ ಆಧ್ಯತೆಯಿಂದ ಮಾಡುವದರಲ್ಲಿಯೇ ನನ್ನ ದೊಡ್ಡಿಸ್ತಿಕೆಯು. ಈ ನನ್ನ ಸ್ವಭಾವವು ಎಂಥ ಅಧಮತನದ್ದೋ;

ಹಾಗು ಎಷ್ಟು ನೀಚತರದ್ದೋ ತಿಳಿಯದು. ನನಗೆ ತಿಳಿಯದ ಹಾಗೆ ಮೆಲ್ಲ ಮೆಲ್ಲನೆ ನನ್ನ ಮನಸ್ಸಿನ ಓಘವು ಇಂಥ ಅಧಮತನದ ಕಡೆಗೆ ಹೊರಟಿತು. ನಮ್ಮ ನೆರೆಹೊರೆಯವರ ದೋಷಗಳ ಬಗ್ಗೆ ನನಗೆ ಕೆಡಕೆನಿಸಬೇಕು; ಅವರಲ್ಲಿಯ ವ್ಯಂಗಗಳ ಬಗ್ಗೆ ನನಗೆ ಹೇಯವೆನಿಸಬೇಕು ಇದೊತ್ತಟ್ಟಿಗೇ ಉಳಿದು, ನನ್ನಲ್ಲಿ ಈ ವಿಪರೀತ ವರ್ತನವೇಕೆ ಉಂಟಾಯಿತೆಂಬ ಬಗ್ಗೆ ನನಗೆ ಆಗಾಗ್ಗೆ ಯೋಚನೆಯುಂಟಾಗುತ್ತಿತ್ತು. ಹೆರವರ ವ್ಯಂಗಗಳನ್ನು ನೋಡಿ ನನಗೆ ಹರ್ಷವೇಕಾಗುತ್ತದೆ? ಅಪರಾಧ ಮತ್ತು ಅವಗುಣಗಳ ಮೇಲೆ ಹೊದಿಕೆ ಹಾಕುವದು ನನ್ನ ಧರ್ಮವಾಗಿದ್ದರೂ, ವೈರತ್ವವಿಲ್ಲದಲ್ಲಿ ಕಡುವೈರಿಯ ಹಾಗೆ ನಾನು ಏಕೆ ವರ್ತಿಸಬೇಕು? ಬಿಡುವು ದೊರಕಿತೆಂದರೆ ಇಲ್ಲವೆ ನಾಲ್ಕು ಜನರು ಕಲೆತರೆಂದರೆ ಪ್ರಾರಂಭವಾಯಿತು ನೆರೆಹೊರೆಯವರ ಇಲ್ಲವೆ ಗುರ್ತು-ಪರಿಚಯಸ್ಥರ ಮಾನ-ಮರ್ಯಾದೆಯ ಮೇಲಿನ ಕುಟಾಳತನಕ್ಕೆ. ಈ ಚಾಳಿಯು ಒಮ್ಮೆ ಮನುಷ್ಯನಿಗೆ ಹತ್ತಿತೆಂದರೆ, ಮುಂದೆ ಅದು ಸಹಸಾ ತೊಲಗುವದಿಲ್ಲ ಆ ನನ್ನ ವರ್ತನವು ನನಗೆ ಸದೋಷವಾಗಿ ತೋರುತ್ತಿತ್ತು; ಆದರೆ ಆ ಚಾಳಿಯೇ ನನಗುಂಟಾದ್ದರಿಂದ, ಪರನಿಂದೆ ಮಾಡದ ಹೊರತು ನನಗೆ ಸೊಗಸೇ ಎನಿಸುತ್ತಿರಲಿಲ್ಲ. ಮಂದಿಯ ಅವಗುಣಗಳನ್ನು ಖ್ವೊಖ್ವೊಕ್ಕೆಂದು ನಗುತ್ತ ಒಡನುಡಿಯಲಿಕ್ಕೆ ಸಿಗದಿದ್ದರೆ ನನಗೆ ಧನ್ಯತೆಯೆನಿಸದಾಯಿತು; ಮತ್ತು ಸುಖವೂ ಅನಿಸದಾಯಿತು. ಪುರುಸೊತ್ತಿನ ಸಮಯದಲ್ಲಿ ಹರಟೆ, ನಾಲ್ಕು ಜನರು ಕೂಡಿದಾಗ ಅತ್ತಿತ್ತಣದ ಸಂಗತಿಗಳ ಚರ್ಚೆ ಮತ್ತು ಅವರಿಂದ ಒಳ್ಳೇ ಸಂತೋಷದಿಂದ ತಿಳಿಯತಕ್ಕ ವರ್ತಮಾನವೆಂದರೆ, ನೆರೆಹೊರೆಯವರ ನಿಂದೆ ಇದೇ ಆಗಿಬಿಟ್ಟಿತು. ನನ್ನಲ್ಲಿಯ ಈ ನೀಚ ವೃತ್ತಿಗೆ ಪ್ರತಿಬಂಧವಿಲ್ಲದಾಯಿತು. ಹೀಗಿರಲು, ನನ್ನ ಕಣ್ಣುಗಳು ಒಮ್ಮೆಲೆ ತೆರೆಯಲಿಕ್ಕೆ ಬಂದು ಆಕಸ್ಮಿಕ ಪ್ರಸಂಗವು ಒದಗಿ ಬಂತು.

ಆ ದಿನದ ನೆನಪು ನನಗೆ ಇನ್ನೂ ಚೆನ್ನಾಗಿ ಇದೆ. ಅಂದು ನನಗೆ ಪಶ್ಚಾತ್ತಾಪವುಂಟಾದದ್ದರ ಆನಂದವು ನನಗೆ ಇಂದಿಗೂ ಆಗುತ್ತಿದೆ. ನಮ್ಮ ಸರ್ಪಪುರಿಯಲ್ಲಿ ನಮ್ಮ ಮನೆಯ ಹತ್ತರ ಬಂಡಭಟ್ಟನೆಂಬ ಹೆಸರಿನ ಓರ್ವ ಬಡವನು ಇರುತ್ತಿದ್ದನು. ಆತನೊಳ್ಳೇ ಸಾತ್ವಿಕನು. ದಾರಿದ್ರ್ಯದಿಂದ ತೀರ ಹೈರಾಣಾಗಿದ್ದನು. ಆತನ ಚೇಷ್ಟೆಯು ನಮ್ಮ ಚಂಡಾಲಚೌಕಡಿಯಲ್ಲಿ ಪ್ರತಿದಿನವೂ ನಡೆದದ್ದೇ. ಒಂದು ದಿವಸ ಅವನಿಗೆ ಏನೆನಿಸಿತೋ ಯಾರು ಬಲ್ಲರು? ಆತನು ಒಳ್ಳೇ ನಸಕಿನಲ್ಲಿದ್ದು ನನ್ನೆಡೆಗೆ ಬಂದನು. ಆಗ ನಾನೂ ನಾಮಸ್ಮರಣಗಳನ್ನೆಲ್ಲ ಮುಗಿಸಿಕೊಂಡು ಪ್ರಾತಃಸ್ನಾನದ ಸಿದ್ಧತೆಯಲ್ಲಿದ್ದೆನು. ಎದ್ದಿರ್ರ್ಯಾ-ಎದ್ದಿರ್ರ್ಯಾ, ನಮಸ್ಕಾರ-ಚಮತ್ಕಾರಗಳಾದ ಬಳಿಕ ನಾನು ಒಳ್ಳೇ ಆಪ್ಯತೆಯಿಂದ ಬಂಡಭಟ್ಟನನ್ನು ಕುರಿತು:-"ಏಕೆ ಭಟ್ಟರೇ, ಒಳ್ಳೇ ನಸಕಿನಲ್ಲಿ ಇತ್ತ ಒಡಹಾಯ್ದಿರುತ್ತೀರಿ?" ಎಂದು ಕೇಳಲು,

ಅದಕ್ಕೆ ಆತನು:—ಏನೂ ಇಲ್ಲ, ಸುಮ್ಮನೆ ಬಂದಿದ್ದೆನು.

ನಾನು:—ಹಾಗಾದರೆ, ನಿಮ್ಮ ಹುಡುಗೆಯನ್ನು ಅತ್ತೆಯ ಮನೆಗೆ ಕಳಿಸುವದನ್ನು ನಿರ್ಧರಿಸಿದಿರೇನು?

ಈ ನನ್ನ ಪ್ರಶ್ನೆಯನ್ನು ಕೇಳಿದೊಡನೆಯೇ ಬಂಡಭಟ್ಟನ ಮೋರೆಯು ಕಕ್ಕಾವಿಕ್ಕಿಯಾಯಿತು. ಆತನ ಕುತ್ತಿಗೆಯು ಒತ್ತರಿಸಿತು. ಆತನ ಬಾಯಿಂದ ಶಬ್ದಗಳೇ ಹೊರಡದಾದವು. ಅದನ್ನು ಕಂಡು ನಾನೂ ಚಕಿತನಾದೆನು. ನಾನು ಕೇಳಿದ ಪ್ರಶ್ನೆಯು ಆತನ ಮರ್ಮಕ್ಕೆ ಹತ್ತಿತೋ ಏನೋ ಎಂದೆನಿಸಿತು. ಅದರಿಂದ ಆ ವಿಷಯವನ್ನು ಬದಲಿಸುವ ಸಲುವಾಗಿ ನಾನು ಆಗ:—"ಆ ಹಾದೀಮನೆಯ ಗೋಪಾಳರಾಯರ ಮನೆಯ ಪ್ರಯೋಜನವು ನಾಳೆಯೋ-ನಾಡದ್ದೋ?" ಎಂದು ಕೇಳಲು, 'ನನಗೆ ಗೊತ್ತಿಲ್ಲ' ವೆಂದಿಷ್ಟೇ ಉತ್ತರವನ್ನು ಆ ಬಂಡಭಟ್ಟನು ಕೊಟ್ಟನು. ನಾನು ಆತನಿಗೆ ಮತ್ತೆ ೨-೩ ಅತ್ತಿತ್ತಣದ ಪ್ರಶ್ನೆ ಮಾಡಿದೆನು. ಅವೆಲ್ಲವುಗಳಿಗೂ ಆತನಿಂದ ಅದೊಂದೇ ಉತ್ತರ ಬಂತು ಆಗ ನಾನು ಆತನನ್ನು ಕುರಿತು:-"ಬಂಡಭಟ್ಟರೇ, ನಿಮಗೆ ಕೆಡಕೆನಿಸಿತೇನು? ನನಗೇನು ಗೊತ್ತು, ನಾನು ಸಹಜವಾಗಿ ಕೇಳಿದೆನು" ಎಂದೆನ್ನಲು, ಅದಕ್ಕೆ ಆತನು:-"ಗುರುಭಟ್ಟರೇ, ನನಗೆ ಹಾಗೇನೂ ಅನಿಸಿರುವದಿಲ್ಲ. ನಮ್ಮಂಥವರು ಇನ್ನು ಈ ಲೋಕದಲ್ಲಿ ಜೀವಿಸಿರುವುದೇ ಯೋಗ್ಯವಾಗಿಲ್ಲ. ಇಲ್ಲಿ ಯಾರಿಗೂ ಯಾರಿಲ್ಲ. ನೆರೆಹೊರೆಯುವರೇನು, ಇಷ್ಟರೇನು, ಆಪ್ತರೇನು, ಎಲ್ಲರೂ ನಡೆಯುವವರ ಕಾಲಿಗೆ ನಮಿಸತಕ್ಕವರೇ! ಸಂಕಟವೊದಗಿದರೆ, ಅಡಚಣಿಯುಂಟಾದರೆ, ಪ್ರಸಂಗಬಿದ್ದರೆ ಚೇಷ್ಟೆ ಮಾಡಲಿಕ್ಕೂ, ಫಜೀತಿಗೊಳಿಸಲಿಕ್ಕೂ ಎಲ್ಲರೂ ಸಿದ್ಧರು. ಹರಿಯಹತ್ತಿತೆಂದರೆ ಎಲ್ಲರೂ ಕೂಡಿ ಹೆಚ್ಚು ಹರಿಯತಕ್ಕವರೇ ಹೊರತು, ಒಬ್ಬನ ಮನಸ್ಸಿನಲ್ಲಾದರೂ ಹೊಲಿದು ಗಟ್ಟಿಮಾಡಬೇಕೆಂದೆನಿಸುವದಿಲ್ಲ. ಎಲ್ಲರೂ ಬತ್ತಲೆಗೊಳಿಸಬೇಕೆನ್ನುವವರೇ! ಮೈಮೇಲೆ ಹೊದಿಕೆ ಹಾಕುವವರಾರೂ ಇರುವದಿಲ್ಲ. ಇಂಥ ಜನರಲ್ಲಿರುವದಕ್ಕಿಂತ ಸತ್ತು, ಸುಟ್ಟು ಬೂದಿಯಾಗುವದೇ ವಿಹಿತವಲ್ಲವೇ?"ಎಂದು ನುಡಿದನು.

ಬಂಡಭಟ್ಟನ ಆ ನುಡಿಗಳು ಕೇವಲ ಸತ್ಯವಾಗಿದ್ದವು; ಅದರಿಂದ ಅವುಗಳನ್ನು ಕೇಳಿದೊಡನೆಯೇ ನಾನು ಒಮ್ಮೆಲೆ ಎಚ್ಚರಗೊಂಡೆನು. ಬಳಿಕ ಆತನು ತನ್ನ ಮನೆತನದ ಅಡಚಣಿಗಳನ್ನೆಲ್ಲ ನನ್ನ ಮುಂದೆ ನಿವೇದಿಸಿದನು; ಹಾಗು ನಾನು ಆತನಿಗೆ ಯೋಗ್ಯ ಸಲಹೆಯನ್ನು ಕೊಟ್ಟೆನು. ಆಗ ಆತನು "ಅಪ್ಪಾ, ಗುರುಭಟ್ಟಾ! ಈಗಿನ ಕಾಲದಲ್ಲಿ ತನ್ನವರು, ಋಣಾನುಬಂಧತ್ವ, ಸ್ವಕೀಯತ್ವ ಮುಂತಾದ ಸಂಬಂಧಗಳೆಲ್ಲ ಬೀದಿಯ ಬಸವೆಯ ಪ್ರೇಮದಂತಾಗಿರುತ್ತವೆ." ಎಂದು ಹೇಳಿದ ನುಡಿಗಳು ನನಗೆ ಇದು ವರೆಗೆ ಸದಾ ಸ್ಮರಣದಲ್ಲಿರುತ್ತವೆ. ಅಂದಿನಿಂದ ನಾನು ಕಿವಿಗೆ ಹರಳು ಹಚ್ಚಿಕೊಂಡು, ಇನ್ನು ಮೇಲೆ ಮಂದಿಯ ನಿಂದೆಯನ್ನು ಕೇಳಲಿಕ್ಕಿಲ್ಲ,-ಮಾಡಲಿಕ್ಕಿಲ್ಲ ಎಂದು ನಿರ್ಧರಿಸಿಕೊಂಡೆನು.

ನನ್ನ ಆ ನಿರ್ಧಾರವು ಕೆಲ ದಿನಗಳಲ್ಲೇ ಚಲಿಸಬಹುದಾಗಿತ್ತು; ಆದರೆ ನನಗೆ ಸ್ವಂತಕ್ಕೇ ಇಂಥ ಉಪಹಾಸ ಹಾಗು ನಿಂದೆಗಳಿಂದ ಹೆರವರಿಗೆ ಹೇಗೆ ದುಃಖವಾಗುತ್ತದೆಂಬ ಅನುಭವವು ಬರಹತ್ತಿತು. ನಾನು ಇತ್ತ ನನ್ನ ಬಿಡುವಿನ ವೇಳೆ

ಯಲ್ಲಿ ಮಂದಿಯ ನಿಂದೆ ಹಾಗು ಉಪಹಾಸಗಳನ್ನು ಮಾಡಹತ್ತಲು, ಅತ್ತ ಜನರೂ ನನ್ನ ಉಪಹಾಸ - ನಿಂದೆಗಳನ್ನು ಮಾಡಹತ್ತಿರುತ್ತಾರೆಂಬದು ನನಗೆ ತಿಳಿಯಿತು. ಒಂದು ದಿನ ನನ್ನ ಗೃಹಿಣಿಯು ನನ್ನನ್ನುದ್ದೇಶಿಸಿ:—"ಮಗನಿಗೂ ಇವರಿಗೂ ಕೂಡಲಿಲ್ಲೆಂದು ಇವರು ಇಲ್ಲಿಗೆ ಬಂದಿರುತ್ತಾರೆ" "ಅತ್ತೆಯು ಬೇಳೆಯು ಸೊಸೆಯು ನೀರಲ್ಲಿ ಬೆಯ್ಯದ್ದರಿಂದ ಇವರು ಹೀಗೆ ಸುಮ್ಮನೆ ಹೊರಟು ಬಂದಿರುವರು."ಹೀಗೆಂದು ಓಣಿಯ ಜನರೆನ್ನುತ್ತಾರೆಂದು ಹೇಳಿದಳು. ನನ್ನ ಗೃಹಿಣಿಯ ಆ ನುಡಿಗಳಿಂದ ನನಗೆ ಸಂತಾಪವುಂಟಾಯಿತು. ಎಂಥ ಹೋಲೆಗೇಡಿ ಜನರಿವರು? ಇವರಿಗೆ ನಮ್ಮ ಒಣ ಉಸಾಬರಿಯೇತಕ್ಕೆ ಬೇಕು? ನಾವು ಏನು ಮಾಡಿದರೂ ಇವರದೇನು ಹೋಗುತ್ತದೆ? ಮುಂತಾದ ಪ್ರಶ್ನೆಗಳು ನನಗಾಗ ಸೂಚಿಸಹತ್ತಿದವು. ಆಗ ನಾನು ನನ್ನ ಗೃಹಿಣಿಯ ಮೈ ಮೇಲೆ ಹೋಗಿ ಅನ್ನುತ್ತಿದ್ದೇನೆಂದರೆ:—"ಜನರು ಏನು ಬೇಕಾದ್ದನ್ನು ಅನ್ನಲಿ. ನೀನು ಅದನ್ನೇತಕ್ಕೆ ಕೇಳಿಕೊಳ್ಳುತ್ತೀ?"

ನಾನು ಹೀಗೆ ನನ್ನ ಗೃಹಿಣಿಗೇನೋ ಬುದ್ಧಿವಾದವನ್ನು ಹೇಳುತ್ತಿದ್ದೆನು; ಆದರೆ ಅದರಿಂದ ನನ್ನ ಮನಸ್ಸಿಗೆ ಹತ್ತಿದ ಹುರಹುರಿಯು ಮಾತ್ರ ತಪ್ಪುತ್ತಿರಲಿಲ್ಲ. ಆ ಪ್ರಸಂಗದಿಂದ ನಾನು ಬೇರೆಯವರಿಗೆ ನಿಂದೆ ಮಾಡುವದರಿಂದ ಅವರಿಗೆಷ್ಟು ದುಃಖವಾಗುತ್ತಿದ್ದೀತೆಂಬದರ ಕಲ್ಪನೆಯು ನನಗೆ ಚೆನ್ನಾಗಿ ಬಂದಿತು; ಮತ್ತು ಅಂದಿನಿಂದ ನಾನು ಬೇರೆಯವರ ಉಪಹಾಸ-ನಿಂದೆಗಳನ್ನು ಮಾಡದಾದೆನು. ಮತ್ತೊಂದು ದಿನ ನನ್ನ ಗೃಹಿಣಿಯು ಜನರು ನಮಗೆ ಹೀಗನ್ನುತ್ತಾರೆ, ಹಾಗೆನ್ನುತ್ತಾರೆ ಎಂದು ಏನೇನೋ ಹೇಳಿದಳು. ಅದನ್ನು ಕೇಳಿದ ಬಳಿಕಂತೂ ನನ್ನ ಸಂತಾಪವು ಅತಿರೇಕಗೊಂಡಿತು; ಹಾಗು ಆ ಸಿಟ್ಟಿನ ಭರದಲ್ಲಿ ನಾನು ನನ್ನ ಗೃಹಿಣಿಗೆ ಸಿಟ್ಟುಮಾಡಿದೆನು. ಆಗ ಅವಳು ಮೆಲ್ಲನೆ "ಮಂದಿಯ ನಿಂದೆ-ಉಪಹಾಸಗಳನ್ನು ಮಾಡುವಾಗ ನಿಮಗೆ ರುಚಿಯೆನಿಸುವದಲ್ಲವೆ? ಅಂದಬಳಿಕ ಜನರು ನಮ್ಮ ನಿಂದೆ ಮಾಡಿದರೆ ಇಷ್ಟೇಕೆ ಸಿಟ್ಟಾಗಬೇಕು?" ಎಂದೆನ್ನುತ್ತ ನನ್ನ ಬಳಿಯಿಂದ ಹೊರಟುಹೋದಳು ಆ ದಿನ ಮಾತ್ರ ನನಗೆ ಚೆನ್ನಾಗಿ ಹೊಳೆಯಿತು; ಮತ್ತು "ಕರ್ಮದಂತೆ ಫಲ; ಕೊಟ್ಟದ್ದನ್ನು ಪಡೆಯಲೇಬೇಕು" ಎಂಬದು ಖಾತ್ರಿಯಾಯಿತು ನಮ್ಮೂರ ಜನರು ಇದುವರೆಗೆಂದೂ ನನ್ನ ನಿಂದೆಮಾಡದವರು ಈಗಲೇ ಅದೇಕೆ ಮಾಡಹತ್ತಿದರೆಂಬದರ ಮರ್ಮವು ನನಗೆ ಅಂದಿನಿಂದಲೇ ತಿಳಿಯ ಹತ್ತಿತು. ಜನರಲ್ಲಾಗುವ ಚರ್ಚೆಯು ಎಂದಿಗೂ ತೀರ ಸುಳ್ಳಿರುವದಿಲ್ಲ. ಅದರ ಬುಡಕ್ಕೆ ಅಲ್ಪಸ್ವಲ್ಪಾದರೂ ಸತ್ಯವಿದ್ದೇ ಇರುತ್ತದೆ; ಮತ್ತು ನಾವು ಯಾವದೊಂದು ಸಂಗತಿಯನ್ನು ಎಷ್ಟು ಗುಪ್ತವೆಂದು ಇರಿಸಿದರೂ ಅದು ಜನನಿದರ್ಶನಕ್ಕೆ ಬಾರದಿರುವದಿಲ್ಲ. ಅದು ಹಾಗೇಕಾಗುತ್ತದೆಂಬ ಬಗ್ಗೆ ನನಗೆ ಇಂದಿಗೂ ಆಶ್ಚರ್ಯವೆನಿಸುತ್ತಿರುತ್ತದೆ.

ಇತ್ತೀಚೆಗೆ ಜನನಿಂದೆಯ ಪಾಪವು ನನ್ನಿಂದಾಗದಾಯಿತು. ಜನರು ಬೇರೆ

ಯುವರ ಉಪಹಾಸ-ನಿಂದೆ ಮಾಡುತ್ತಿರುವದನ್ನು ಕಂಡಾಗ ನಾನು ಅವರನ್ನುದ್ದೇಶಿಸಿ:—"ಅಪ್ಪಗಳಿರಾ, ನೀವು ಸುಮ್ಮ ಸುಮ್ಮನೆ ಆ ಸ್ವಕೀಯರ ಮರ್ಯಾದೆಯ ಮೇಲೆ ಹೀಗೆ ಆಘಾತ ಮಾಡಬೇಡಿರಿ. ಇದರಲ್ಲಿ ನಿಮಗೆ ಕಾಸಿನ ಲಾಭವೂ ಇರುವದಿಲ್ಲ; ಆದರೆ ನಿಮ್ಮಿಂದ ಬೇರೆಯವರಿಗೆ ಮಾತ್ರ ನಿಷ್ಕಾರಣವಾಗಿ ಬಹು ತೊಂದರೆಯಾಗುತ್ತದೆ" ಎಂದು ಹೇಳಹೋದರೆ, ಅವರು ಅದೇಕೆ ನನ್ನ ಮಾತು ಕೇಳುವರು? ಮಂದಿಯ ಉಪಹಾಸದಲ್ಲಿ ಮೋಜೆನಿಸುವದಲ್ಲದೆ, ಪುಕ್ಕಟೆಯಾಗಿ ಮನರಂಜನವೂ ಆಗುತ್ತದೆ; ಅಂದ ಬಳಿಕ ಅದನ್ನೇಕೆ ಬಿಡಬೇಕೆಂದು ಅವರ ಯೋಚನೆ. ನನಗೆ ತಮ್ಮ ಈ ವರ್ತನವು ರುಚಿಸುವದಿಲ್ಲೆಂಬದು ಅವರಿಗೆ ತಿಳಿಯಲು, ನನ್ನ ಮನೆಯ ಪಡಸಾಲೆಯ ಮೇಲೆ ಯಾವಾಗಲೂ ಕೂಡುತ್ತಿದ್ದ ಆ ನಿಂದಕರ ಸಭೆಗಳು ಕಟ್ಟಾದವು. ಇತ್ತೀಚೆಗೆ ನನ್ನ ಮನೆಗೆ ಬೇರೆ ಜನರು ಬಾರದಾದರು. ಅದರಿಂದ ನನಗೆ ಬೇಸರವುಂಟಾಗಹತ್ತಿತು. ಇನ್ನು ನಾನು ನನ್ನ ಕಾಲವನ್ನು ಹೇಗೆ ಕಳೆಯಬೇಕೆಂಬ ಆಲೋಚನೆಯು ನನಗುಂಟಾಯಿತು. ಆಗಿನಿಂದ ನಾನು ನನ್ನ ಗೃಹಿಣಿಯೊಡನೆಯೇ ಕೇವಲ ಮಿತ್ರಭಾವದಿಂದ ನನ್ನ ಸಂಸಾರದ ಸಂಗತಿಗಳನ್ನು ಚರ್ಚಿಸುತ್ತಲೂ, ಮಿಕ್ಕ ವೇಳೆಯಲ್ಲಿ ಪುರಾಣ-ಪುಣ್ಯಕಥೆಗಳನ್ನು ಓದುತ್ತಲೂ ಕಾಲಕ್ರಮಿಸಲಾರಂಭಿಸಿದೆನು.

ಹೀಗೆ ನನ್ನ ನಿತ್ಯಕ್ರಮವಾದರೂ ಜನರು ನನ್ನನ್ನು ತಮ್ಮ ಹಿತಗುಜಗಳಲ್ಲಿ ತಕ್ಕೊಳ್ಳಬೇಕು, ನನಗೆ ಮಾನ-ಮರ್ಯಾದೆ ಮಾಡಬೇಕು, ನನ್ನ ಉಪಕಾರ ಸ್ಮರಿಸಬೇಕು, ನನ್ನ ಸಲಹೆ ಪಡೆಯಬೇಕು ಎಂದು ನನಗೆ ಆಗಾಗ್ಗೆ ಅನಿಸುತ್ತಿತ್ತು. ನನಗೆ ಹಾಗೇಕೆ ಅನಿಸುತ್ತಿತ್ತೆಂಬದರ ಕಾರಣವು ಮಾತ್ರ ನನಗೆ ಇದುವರೆಗೂ ತಿಳಿಯಲೊಲ್ಲದು. ಜನರನ್ನು ಒಲಿಸಿಕೊಳ್ಳುವಂತಹ ಇಲ್ಲವೆ ಅವರಿಗೆ ಹೆದರಿಕೆ ತೋರಿಸುವಂತಹ ಯಾವ ಸ್ಥಿತಿಯೂ ನನ್ನಲ್ಲಿರಲಿಲ್ಲ. ಅದರಿಂದ ಜನರಿಗೆ ನನ್ನ ಪರಿವೆಯೆನಿಸನಿರುವದು ಸಹಜವೇ ಇದೆ. ನಾನು ಬಡವನಿರುವವರೆಗೆ ಅವರು ನನ್ನ ವಿದ್ವತ್ತೆಯ ಪ್ರಶಂಸೆ ಮಾಡಿ, ನನ್ನನ್ನು ವಿದ್ವಾಂಸ,ವಿದ್ವಾಂಸನೆಂದು ಸಂಬೋಧಿಸುತ್ತಿದ್ದರು; ಆದರೆ ನನ್ನ ಮಗನಿಗೆ ದೊಡ್ಡ ತಲುಬಿನ ನೌಕರಿ ಹತ್ತಿದಂದಿನಿಂದ ನನ್ನನ್ನು ಹಾಗೆ ಯಾರೂ ಸಂಬೋಧಿಸದಾದರು. ಹಾಗಾದರೆ ನನ್ನಲ್ಲಿಯ ವಿದ್ವತ್ತೆಯುನನ್ನ ಮಗನ ನೌಕರಿಯ ಮೂಲಕ ಲೋಪವಾಯಿತೋ ಅಥವಾ ನನ್ನ ಸುಸಂಪನ್ನತೆಯ ಬಗ್ಗೆ ಜನರಿಗೆ ಅಸೂಯೆಯೆನಿಸಹತ್ತಿತೊ? ಇದಾವುದೂ ನನಗೆ ಚೆನ್ನಾಗಿ ತಿಳಿಯದಾಯಿತು. ಇನ್ನು ಜನರು ನನ್ನನ್ನು ಗೌರವಿಸಬೇಕೆಂಬದಿಷ್ಟೇ ನನ್ನ ಇಚ್ಛೆಯಿತ್ತು; ಆದರೆ ಜನೋಪಕಾರಕ್ಕೆಂದು ಕೈಯಿಂದ ಏನಾದರೂ ವ್ಯಯಮಾಡಬೇಕೆಂದು ನನಗನಿಸುತ್ತಿರಲಿಲ್ಲ. ಕೇವಲ ಶಬ್ದಬ್ರಹ್ಮದಿಂದಲೇ ಜನರ ಮೇಲೆ ಉಪಕಾರ ಮಾಡಬೇಕೆಂಬ ಹವ್ಯಾಸವು. ದೇಹವನ್ನು ದಂಡಿಸಲಾಗದು, ದುಡ್ಡು ಖರ್ಚು ಮಾಡುವ ವಿಷಯದ ಮಾತೇ ಎತ್ತಕೂಡದು; ಅಂದ ಬಳಿಕ ಅದು ಕೈ-

ಗೂಡುವ ಬಗೆ ಹೇಗೆ?

ಬೊಟ್ಟೆಆಶೆ, ಪೊಳ್ಳು ಅಭಿವಚನ, ಒಣ ಡೌಲು ಇವಾದರೂ ತನ್ನ ಕಾರ್ಯಸಾಧನಕ್ಕೆಂದು ಮಾನವನಲ್ಲಿರಬೇಕಾಗುತ್ತವೆ; ಆದರೆ ಅಂಥ ಬಹಿರಾಡಂಬರದ ಗಂಧವೂ ಕೂಡ ನನ್ನಲ್ಲಿರಲಿಲ್ಲ. ಮನುಷ್ಯರು ಹುಟ್ಟಿಬಂದದ್ದರ ಸಾರ್ಥಕ್ಯವೇನಂದರೆ ದ್ರವ್ಯಾರ್ಜನೆ, ಲೌಕಿಕ ಮತ್ತು ದೇವರ ಸೇವೆ; ಮತ್ತು ಮನುಷ್ಯಮಾತ್ರರ ಪ್ರಯತ್ನವಿರುವದೆಲ್ಲವೂ ಈ ಮೂರೇ ಹೇತುವಿಗಾಗಿ. ಮಾನುಷರು ದ್ರವ್ಯ, ಕೀರ್ತಿ ಹಾಗು ಈಶ್ವರ ಪ್ರೀತಿ ಇವುಗಳ ಹೊರತು ಮತ್ತೇನನ್ನೂ ಸಾಧಿಸುವದಿರುವದಿಲ್ಲ. ಇನ್ನು ನನಗೆ ಧನಕನಕವು ಲಭಿಸುವದು ಅಶಕ್ಯವೇ ಆಗಿತ್ತು; ಮತ್ತು ನಾನು ಸ್ವತಃ ಸಂಪಾದಿಸಿಯಾದರೂ ಮಾಡತಕ್ಕದ್ದೇನಿದೆ? ಮಗನು ಸಂಸಾರ ನೀಗಿಸುತ್ತಿರುವನು; ಅವನಿಗೆ ದುಡ್ಡು ದೊರೆಯುತ್ತಿದೆ. ಅಂದಬಳಿಕ ಅದರ ಹವ್ಯಾಸವು ನನಗೇತಕ್ಕೆ? ಇನ್ನು ಜನರಲ್ಲಿ ನನ್ನ ಸ್ತುತಿ-ಗೌರವಗಳಾಗಬೇಕೆಂಬ ಬಗ್ಗೆ ಮಾತ್ರ ನನ್ನ ಪ್ರಬಲವಾದ ಇಚ್ಛೆಯಿದ್ದಿತು. ದೇವರ ಕೃಪೆ ಪಡೆಯುವುದಕ್ಕಿಂತ ಮನುಷ್ಯರು ಮಾಡುವ ಸ್ತುತಿಯ ಬೆಲೆಯೇ ನನಗೆ ಹೆಚ್ಚೆಂದು ತೋರುತ್ತಿತ್ತು. ಎಂಥ ಮೂರ್ಖತನವಿದು?

ಕುದುರೆಯು ಸುಮ್ಮನೆ ದಾರಿ ಹಿಡಿದು ನಡೆದರೆ ಹಿತವು. ಅದು ದಾರಿ ಬಿಟ್ಟು ಅಡ್ಡತಿಡ್ಡಾಗಿ ಹೋಗಹತ್ತಿತೆಂದರೆ, ಅದಕ್ಕೆ ಚಬಕದ ಪೆಟ್ಟು ಹಾಕಲೇಬೇಕೆಂದು ಆ ಕುದುರೆಯ ಒಡೆಯನಿಗನಿಸುತ್ತದೆ; ಮತ್ತು ಆತನಿಗೆ ಹಾಗೆ ಅನಿಸುವದೂ ತಪ್ಪಲ್ಲ. ಅದೇ ಪ್ರಕಾರವು ಮನುಷ್ಯ ಮತ್ತು ದೇವರಲ್ಲಿರುವದು. ಮನುಷ್ಯನಲ್ಲಿ ತುಸ ಮದವುಂಟಾಗುತ್ತಲೇ ತಾನಿನ್ನು ದೇವರ ಚಬಕದ ಪೆಟ್ಟು ತಿನ್ನಬೇಕಾಗುತ್ತದೆಂದು ಆತನು ತಿಳಿಯಬೇಕು. ಆ ಚಬಕದ ಏಟು ಬಿದ್ದಿತೆಂದರೆ ದುಃಖವಾಗುತ್ತದೆ; ಮತ್ತು ಪೆಟ್ಟು ಹಾಕುವವನ ಬಗ್ಗೆ ಸಿಟ್ಟೂ ಬರುತ್ತದೆ; ಆದರೆ ತನ್ನ ಅಪರಾಧವು ತನಗೆಂದಾದರೂ ಕಂಡು ಬರುತ್ತದೇನು? ಇಲ್ಲ. ಈ ಅನುಭವವು ನನಗೆ ಆಗಾಗ್ಗೆ ಉಂಟಾಗಿರುತ್ತದೆ. ನನ್ನ ಮಗಳ ಮೇಲೆ ವೈಧವ್ಯಕೊಡಲಿಯ ಆಘಾತದ ದುಃಸಹ ದುಃಖವು ಆಗಿತ್ತು. ನನ್ನ ಅಳಿಯನು ತೀರಿಕೊಂಡದ್ದರಿಂದ ನನ್ನಲ್ಲಿಯ ಶಕ್ತಿಯ ಪಾತವಾಗಿತ್ತು. ಮಗನು ಹಾಕಿದ ತುಣಕನ್ನು ಆತನ ಮನೆಯಲ್ಲಿ ಬಿದ್ದುಕೊಂಡು ತಿನ್ನುವ ದುಃಸಹವಾದ ದುಃಖವಾಗಿತ್ತು. ಹೀಗೆ ಹಲವು ಪ್ರಸಂಗಗಳಾಗಿದ್ದರೂ ನಮ್ಮ ಸರ್ಪಪುರಿಗೆ ಬಂದ ಕೂಡಲೆ ನಾನು ಅವುಗಳನ್ನೆಲ್ಲ ಒಮ್ಮೆಲೆ ಮರೆತು, ಮದಗರ್ವಿತನಾಗತೊಡಗಿದೆನು. ನನಗೆ ಇತ್ತೀಚಿಗೆ ದೇವರ ಸ್ಮರಣವು ಅಷ್ಟು ಅಂತಃಕರಣಪೂರ್ವಕವಾಗಿ ಆಗದಾಯಿತು; ಯಾಕಂದರೆ ನನಗೆ ನನ್ನ ಮಗನಿಂದ ತಿಂಗತಿಂಗಳುಳಿಗೆ ಖರ್ಚಿನ ಹಣವು ಮನಿಆರ್ಡರ ಮೂಲಕ ತಪ್ಪದೆ ಸಿಗತಲುಪುತ್ತಿತ್ತು. ಹುಡುಗರು ಹುಪ್ಪಡಿಗಳ, ಬೇನೆ-ಬೇಸರಿಕೆಗಳ ತೊಂದರೆಯಿರಲಿಲ್ಲ. ಏನಾದರೂ ಅಂಥ ಪ್ರಸಂಗವೇ ಬಂದರೆ, ಮಗನು ಅದನ್ನು ಸಹಜವಾಗಿ ನೀಗಿಸಬಲ್ಲನೆಂಬ ಭರವಸೆ ಯಿದ್ದುದರ ಮೂಲಕ ನನಗೆ ದೇವ

ರದು ಅಷ್ಟು ಅವಶ್ಯಕತೆಯೆನಿಸದಾಯಿತು! ನಾನು ಜಗ್ಗಿ ಜಗ್ಗಿ ನನ್ನ ಮನಸ್ಸನ್ನು ದೇವರ ಚರಣಗಳ ಕಡೆಗೆ ಒಯ್ಯಬೇಕು; ಆದರೆ ನನ್ನ ಹೃದಯದಲ್ಲಿ ನಿಷ್ಠೆಯಿರದ್ದರಿಂದ ಅದು ಅಲ್ಲಿಂದ ಕೂಡಲೆ ಬೇರೆ ಕಡೆಗೆ ಹೋಗಿ ಬಿಡಬೇಕು.

ಈ ಸ್ಥಿತಿಯಲ್ಲಿ ಕೆಲ ದಿನಗಳು ಗತಿಸುತ್ತಿರಲಿಕ್ಕೆ ನನ್ನ ಮೇಲೆ ಮತ್ತೊಂದು ದುಃಖದ ಪ್ರಸಂಗ ಬಂತು. ಆ ದುಃಖದ ಪೆಟ್ಟಿನಿಂದ ಮಾತ್ರ ನನ್ನ ಉಮೇದೆಲ್ಲ ಶಾಶ್ವತವಾಗಿ ನಷ್ಟವಾಯಿತು. ನನ್ನ ಶರೀರಕ್ಕೆ ವಾರ್ಧಕ್ಯವು ಬಂದು ಬಿಟ್ಟಿತ್ತಾದರೂ, ನನ್ನಲ್ಲಿಯ ಆಶೆಯು ತಾರುಣ್ಯದಂತೆ ಮುಸುಗರೆಯುತ್ತಿತ್ತು; ಆದರೆ ನನಗುಂಟಾದ ಆ ಹೊಸ ದುಃಖದ ಮೂಲಕ ಅದು ನೆಲಕಟ್ಟಿ ಕುಳಿತಿತು. ನನ್ನ ಎರಡನೇ ಮಗನಾದ ವಿಷ್ಣುವು ಬೆಂಗಳೂರಲ್ಲಿ ಇಂಗ್ಲಿಷ ಕಲಿಯುತ್ತಿದ್ದನಷ್ಟೇ? ಆತನು ಒಳ್ಳೇ ಕುಶಾಗ್ರ ಬುದ್ಧಿಯವನಾಗಿದ್ದನು. ಅದರಿಂದ ಬಾಳನಂತೆ ಆತನಿಗೂ ಬೇಗನೆ ದೊಡ್ಡ ಪಗಾರದ ಕೆಲಸವಾಗುವದೆಂದು ನಾನು ತಿಳಿದಿದ್ದೆನು. ನನ್ನಂತೆಯೇ ಅಲ್ಲಿಯ ಬಹುಜನರ ಮತವಾಗಿದ್ದಿತು. ಆತನ ಮದುವೆಯನ್ನು ಕಳೆದ ವರ್ಷದಲ್ಲೇ ಮಾಡಿದ್ದೆನು. ನಮ್ಮ ಬಾಳನು ಆ ಲಗ್ನದ ಕಾಲಕ್ಕೆ ಇಷ್ಟು ಚಿಕ್ಕ ವಯಸ್ಸಿನಲ್ಲಿ ಈತನ ಲಗ್ನ ಮಾಡಬೇಡಿರೆಂದು ಅನ್ನುತ್ತಿದ್ದನು. ಬಾಲವಿವಾಹಗಳಿಂದ ಹಾಗೆ ಹಾನಿಯಾಗುತ್ತದೆ-ಹೀಗೆ ಅನರ್ಥಗಳಾಗುತ್ತವೆ ಎಂದೆನ್ನುತ್ತಿದ್ದ ಆತನ ಬಡಬಡಿಕೆಯ ಕಡೆಗೆ ನಾನು ಲಕ್ಷ್ಯಗೊಡದೆ, ಮದುವೆಯ ಕಾರ್ಯವನ್ನೊಮ್ಮೆ ಪೂರೈಸಿಬಿಟ್ಟೆನು. ಇಂಗ್ಲಿಷ ಕಲಿತರೇನಾಯಿತು? ಮದುವೆಗಳನ್ನು ಚಿಕ್ಕ ವಯಸ್ಸಿನಲ್ಲಿಯೇ ಮಾಡಬೇಕು. ಚಿಕ್ಕಂದಿನಲ್ಲಾಗುವ ಕೆಲಸಗಳು ಚಿಕ್ಕಂದಿನಲ್ಲಿಯೇ ಆಗಬೇಕೆಂದು ನನ್ನ ಹಟ. ನನ್ನ ಗೃಹಿಣಿಯ ಅಭಿಪ್ರಾಯವಾದರೂ ನನ್ನಂತೆಯೇ ಇತ್ತು. ಅದರಿಂದ ಬಾಲವಿವಾಹದ ಬಗ್ಗೆ ನಮ್ಮ ಬಾಳನು ಹೇಳುತ್ತಿದ್ದ ಚರ್ಪಟ ಪಂಜರಿಯ ಕಡೆಗೆ ನಾವು ಲಕ್ಷ್ಯಗೊಡುವದೇತಕ್ಕೆ? ನಮ್ಮ ವಿಷ್ಣುವು ತನ್ನ ಹೆಂಡತಿಯನ್ನು ತಾನೇ ಆರಿಸಿಕೊಳ್ಳಬೇಕೆಂದು ಬಾಳನ ಅಭಿಮತವಿತ್ತು. ಆತನ ಯಾವ ತರ್ಕ-ವಿತರ್ಕಗಳಿಗೂ ನಾವು ಕಿವಿಗೊಡಲಿಲ್ಲ; ಆದರೆ ಬಾಳನ ಮಾತನ್ನು ನಾವು ಆಗ ಕೇಳಿದ್ದರೆ ವಿಹಿತವಾಗುತ್ತಿತ್ತೆಂದು ಈಗ ನನಗನಿಸತೊಡಗಿದೆ. ಮುಂದಿಯ ಮನೆಯ ಹೆಣ್ಣು ಹುಡುಗರನ್ನು ನಾವು ಮೋಸಗೊಳಿಸಿದಂತಾದೀತೆಂದು ಅನ್ನುತ್ತಿದ್ದ ಬಾಳನ ಅಂಬೋಣವು ನಿಜವೆಂದು ಇತ್ತೀಚೆಗೆ ನನಗನಿಸಹತ್ತಿದೆ. ಹುಡುಗನು ಮುಂದೆ ಹೇಗೆ ಆದಾನೆಂಬದು ಚಿಕ್ಕಂದಿನಲ್ಲೇನೂ ತಿಳಿಯುವದಿಲ್ಲ. ದೈವ-ದೈವವೆಂದು ಕಣ್ಣಿದ್ದೂ ಕುರುಡರಂತೆ ನಡೆಯುವದು ಮೂರ್ಖತನವಾಗಿದೆ. ಚಿಕ್ಕ ವಯಸ್ಸಿನಲ್ಲಿ ಸಾವಿನ ಅಂಜಿಕೆಯು ಹೆಚ್ಚಾಗಿರುತ್ತದೆ. ಯಾರು ಇಡೀ ಜನ್ಮದಲ್ಲಿ ಒಬ್ಬರಿಗೊಬ್ಬರು ಹಿತಚಿಂತಕರಾಗಿ ಬಾಳಬೇಕಾಗುವದೋ, ಅಂಥವರು ಪರಸ್ಪರರ ಗುಣಾವಗುಣಗಳನ್ನು ಮೊದಲೇ ತಿಳಿದುಕೊಳ್ಳುವದು ಅತ್ಯವಶ್ಯವಾಗಿರುತ್ತದೆ.

ನಮ್ಮ ವಿಷ್ಣುವಿನ ಲಗ್ನವನ್ನು ಚಿಕ್ಕಂದಿನಲ್ಲಿ ಮಾಡಿದ್ದರಿಂದ ಆತನು ತನ್ನ

ಹೆಂಡತಿಯನ್ನು ಸಂರಕ್ಷಿಸುವನೆಂಬದಕ್ಕೆ ನಾನೂ ನಮ್ಮ ಬಾಳನೂ ಜಾಮಿನುದಾರ ರಾದಂತಾಯಿತೆಂದು ನಮ್ಮ ಬಾಳನು ಲಗ್ನಕ್ಕೆ ಮುಂಚೆ ಎಷ್ಟೋ ಸಾರೆ ಸಾರಿ ಸಾರಿ ಹೇಳಿದ್ದನು. ಆ ಮಾತು ಸುಳ್ಳಲ್ಲೆಂಬದು ಈಗ ನನಗೆ ಖಾತ್ರಿಯಾಗಿದೆ. ಪ್ರಪಂಚದ ಉಪಾಧಿಯು ತೀರ ಚಿಕ್ಕ ವಯಸ್ಸಿನಲ್ಲಿ ಬೆನ್ನಿಗೆ ಹತ್ತಿತೆಂದರೆ ಅದು ಒಟ್ಟಿನಲ್ಲಿ ಅಯೋಗ್ಯವು ಎಂದು ಬಾಳನು ಆಗ ಹೇಳಿದ ಮಾತು ಈಗ ನನಗೆ ಚೆನ್ನಾಗಿ ಮನ ದಟ್ಟಾಯಿತು; ಆದರೆ ಈಗ ಅದರಿಂದ ಪ್ರಯೋಜನವೇನು?

ನಮ್ಮ ವಿಷ್ಣುವು ಪಾದ್ರೀ ಸಾಲೆಯಲ್ಲಿ ಕಲಿಯುತ್ತಿದ್ದನು. ಅದರಿಂದ ಅಲ್ಲಿ ಅವನು ದಿನಾಲು ಬಾಯ್ಬಲ್ ಗ್ರಂಥವನ್ನು ಓದಬೇಕಾಗುತ್ತಿತ್ತು. ಆತನ ಸಾಲೆಯ ಆ ಪಾದ್ರೀ ಮುಖ್ಯಸ್ಥನು ನಮ್ಮ ವಿಷ್ಣುವಿಗೆ ಏನು ಮಬ್ಬು ಹಾಕಿದನೋ ಯಾರು ಬಲ್ಲರು? ನಾನು ಹಿಂದು ಧರ್ಮವನ್ನು ತ್ಯಜಿಸಿ, ಬೇಗನೆ ಕ್ರೈಸ್ತನಾಗುತ್ತೇನೆಂದು ಆತನು ಅನ್ನಹತ್ತಿದನು. ಆತನು ಪಾದ್ರೀ ಸಾಹೇಬನ ಮನೆಯಲ್ಲಿ ಬಿಸ್ಕೀಟು ತಿನ್ನ ಹತ್ತಿದ್ದು, ಭಿಸ್ತಿಯ ಚರ್ಮದ ಪಕಾಲಿಯೊಳಗಿನ ನೀರು ಕುಡಿದದ್ದು ನಮಗೆ ಈ ಮೊದಲೇ ಗೊತ್ತಾಗಿತ್ತು. ಆತನು ದಿನಾಲು ವೈಲಿಗೆಯಿಂದಲೇ ಉಣ್ಣಹತ್ತಿದ್ದನು. ಕೋಳಿಯ ತತ್ತಿಯನ್ನೂ ಮಾಂಸವನ್ನೂ ತಿನ್ನುತ್ತಿರುವನೆಂದೂ, ಮದ್ಯವನ್ನು ಕುಡಿಯುತ್ತಿರುವನೆಂದೂ ಆತನ ಬಗ್ಗೆ ಸರ್ಪಪುರಿಯಲ್ಲಿ ಬೊಬ್ಬಾಟವಾಯಿತು; ಆದರೆ ನನಗದು ನಿಜವೆನಿಸಲಿಲ್ಲ. ಈ ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದ ಹುಡು ಗರು ಹೀಗೇಕೆ ಭ್ರಷ್ಟಾಕಾರಪ್ರವೃತ್ತರಾದರೆಂದು ನನಗೆ ಮನಸ್ಸಿನಲ್ಲಿ ಬಹು ಕೆಡ ಕೆನಿಸಿತು; ಆದರೆ ಜನರಿಗೆ ಆ ಬಗ್ಗೆ ಕೌತುಕವೇ ಅನಿಸಹತ್ತಿತು. ಒಮ್ಮೊಮ್ಮೆ ಆ ಭ್ರಷ್ಟಾಕಾರದ ಸಂಗತಿಗಳನ್ನು ಕೇಳಿ ನನಗೆ ಸಿಟ್ಟು ಬರುತ್ತಿತ್ತು; ಆದರೆ 'ಮಾಡಿ ದವನುಣ್ಣುವನು ಮಣಿಯಂಥ ಕಡಬು' ಎಂದಂದುಕೊಂಡು, ನನ್ನಷ್ಟಕ್ಕೆ ನಾನು ಸಮಾಧಾನ ಹೊಂದುತ್ತಿದ್ದೆನು. ಆ ನನ್ನ ಉದಾಸೀನತೆಯು ನನ್ನನ್ನು ಮುಂದೆ ಬಹು ಅನರ್ಥಕ್ಕೆ ಗುರಿಮಾಡಿತು. ನಾನು ಆಗ ಉಪೇಕ್ಷೆ ಮಾಡದಿದ್ದರೆ ಇಲ್ಲವೆ ಆಶೆಗೆ ಬಲಿಬೀಳದಿದ್ದರೆ ನಾನಿಷ್ಟು ದುಃಖಿಯಾಗುತ್ತಿರಲಿಲ್ಲ. ನಾನು ತಕ್ಕ ಕಾಲಕ್ಕೆ ಎಚ್ಚರದಿಂದಿದ್ದರೆ, ಈ ಪ್ರಸಂಗವೊದಗುತ್ತಿರಲಿಲ್ಲ; ಆದರೆ ಆಗತಕ್ಕದ್ದನ್ನು ಯಾರೂ ಎಂದಿಗೂ ತಪ್ಪಿಸಲಾರರೆಂಬದು ಸುಳ್ಳಲ್ಲ.

ನಾವು ನಮ್ಮ ಸರ್ಪಪುರಿಯೊಳಗಿನ ಮನೆಯಲ್ಲಿ ಊಟ ಮಾಡಿ ಅತ್ತಿತ್ತಣದ ಹರಟೆ ಹೊಡೆಯುತ್ತ ಕುಳಿತಿರಲು, ಅಷ್ಟರಲ್ಲಿ ಪೋಷ್ಟಮನ್ನನು ಬಂದನು. ಆತನು ತನ್ನ ತೊಗಲ ತೋಬರಿಯೊಳಗಿಂದ ನನ್ನ ಹೆಸರಿನ ಪತ್ರವನ್ನು ತೆಗೆದು ನನ್ನೆದುರಿಗೆ ಚೆಲ್ಲಿ ಕೊಟ್ಟನು. ಈ ಪತ್ರಗಳು ಎಲ್ಲಿಂದ ಹಾಗು ಹೇಗೆ ಬರುತ್ತವೆ? ಇಷ್ಟು ಅಲ್ಪಾವಧಿ ಯಲ್ಲಿ ಹಾಗು ಇಷ್ಟು ಅಲ್ಪ ಖರ್ಚಿನಲ್ಲಿ ಇವುಗಳನ್ನಾರು ತರುವರು? ಇತ್ಯಾದಿಗಳ ಬಗ್ಗೆ ನಾನು ಆ ಪೋಷ್ಟಮನ್ನನೊಡನೆ ಮಾತನಾಡುತ್ತಿರಲಿಕ್ಕೆ 'ಆ ಪತ್ರವು ಬೆಂಗಳೂರ ದೇನು?' ಎಂದು ನನ್ನ ಗೃಹಿಣಿಯು ಪ್ರಶ್ನೆ ಮಾಡಿದಳು. 'ಒಡೆದು ನೋಡು

ತ್ತೇನೆಂದು ನಾನು ಅವಳಿಗೆ ಹೇಳಿ, ಚೀಲವನ್ನು ಹರಿದು ಒಳಗಿನ ಕಾಗದವನ್ನು ಓದತೊಡಗಿದೆನು. ಓದುವದಾದ ಬಳಿಕ ಹಣೆಯ ಮೇಲೆ ಹೊಡಕೊಂಡು, ನನ್ನ ಗೃಹಿಣಿಯನ್ನುದ್ದೇಶಿಸಿ:—"ಕೇಳಿದಿಯಾ, ನಮ್ಮ ವಿಷ್ಣುವು ಕುಲಗೆಟ್ಟನಂತೆ! ಕ್ರೈಸ್ತನಾದನಂತೆ! ಆತನ ಧರ್ಮಾಂತರದ ವಿಧಿಯು (ಬಾಪ್ತಿಸ್ಮಾ) ಕೂಡ ಆಗಿ ಹೋಯಿತಂತೆ!" ಎಂದು ಒಳ್ಳೇ ದುಃಖದಿಂದ ಹೇಳಲು, ಅವಳು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು; ಮತ್ತು ಬಾಯಿಗೆ ಬಂದಂತೆ ಆ ಪಾದ್ರಿಯನ್ನು ಕುರಿತು ಬೈಯಹತ್ತಿದಳು. ಆಗ ನಾನು ಆಕೆಯನ್ನು ಕುರಿತು:—ಎಲೆ, ನಮ್ಮ ಹುಡುಗನೇ ನೀಚನಾಗಿರಲು, ನಾವು ಮುಂದಿಗೆ ದೋಷ ಕೊಡುವದರಲ್ಲೇನರ್ಥವಿದೆ? ನೀನು ಆ ಪಾದ್ರಿಗೆ ಬಯ್ಯುವದನ್ನು ಬಿಟ್ಟು, ನಮ್ಮಗಳ ದೈವಕ್ಕೇ ದೋಷ ಕೊಡು. ನಮ್ಮ ಬಾಳನು ಬರೆದಿರುವದೇನಂದರೆ:—"ನೀವು ಈ ಪತ್ರ ತಲುಪಿದೊಡನೆಯೇ ಹೊರಟು ಬರ್ರಿ; ಅಂದರೆ ಇನ್ನೂ ಏನಾದರೂ ಉಪಾಯ ಮಾಡಿ, ಆತನನ್ನು ಆ ಕೆಲಸದಿಂದ ಪರಾವೃತ್ತ ಮಾಡಲಿಕ್ಕೆ ಬರುತ್ತದೇನೆಂಬದನ್ನು ನೋಡೋಣ" ಅಂದಬಳಿಕ ನೀನೂ ಬೆಂಗಳೂರಿಗೆ ಬರುತ್ತೀಯೇನು? ಎಂದು ನಾನು ಅವಳನ್ನು ಕೇಳಲು, "ನಾನೂ ಬರುತ್ತೇನೆ; ಹಾಗು ಆ ನಮ್ಮ ವಿಷ್ಣುವನ್ನು ಆ ಪಾದರಿಯ ಜಾಲದೊಳಗಿಂದ ಬಿಡಿಸಿಕೊಂಡು ಮನೆಗೆ ಕರೆತರುತ್ತೇನೆ; ಆತನು ನನ್ನ ಮಾತು ಹೇಗೆ ಕೇಳುವದಿಲ್ಲವೋ ನೋಡಿಯೇ ಬಿಡುತ್ತೇನೆ" ಎಂದು ಅವಳು ತನ್ನಷ್ಟಕ್ಕೆ ತಾನೇ ಗುಣಗುಟ್ಟಹತ್ತಿದಳು.

ನಾವು ನಮ್ಮ ಮನೆಯಲ್ಲೇ ಹೀಗೆ ಮಾತನಾಡುತ್ತಿರಲಿಕ್ಕೆ ನಮ್ಮ ಊರೊಳಗಿನ ಹತ್ತಿಪ್ಪತ್ತು ಪ್ರತಿಷ್ಠಿತ ಜನರು ನಮ್ಮಲ್ಲಿಗೆ ಬಂದು:—ಏನಿರೀ ಗುರುಭಟ್ಟರೇ, ನಾವು ಕೇಳಿರುವ ಸಂಗತಿಯು ನಿಜವೇನು? ಅದು ಹೀಗೇಕಾಯಿತು? ಎಂದು ಪರಿಪರಿಯಿಂದ ಕೇಳಿ, ನಮ್ಮನ್ನು ಬೇಜಾರಗೊಳಿಸತೊಡಗಿದರು. ನಾನೊಬ್ಬನು ಅವರಿಗೆ ಎಷ್ಟೆಂದು ಉತ್ತರ ಕೊಡಲಿ? ಆಗ ನಮ್ಮಲ್ಲಿ ನೆರೆದವರೊಳಗಿನ ಎಷ್ಟೋ ಜನರು ಒಳ್ಳೇ ಹರುಷದಿಂದ ನನ್ನ ಚೇಷ್ಟೆ ಮಾಡಲಾರಂಭಿಸಿದರು. ನನ್ನೆದುರಿಗೆ ಮರ್ಮಭೇದಕ ಮಾತುಗಳನ್ನಾಡಲಿಕ್ಕೆ ಅವರಿಗೊಳ್ಳೇ ಪುರುಷಾರ್ಥವೆನಿಸಿತು. "ನಿಮ್ಮ ವಿಷ್ಣುವು ಹೀಗೆ ಹೇಗೆ ಕುಲಗೆಟ್ಟನರೀ? ಆತನನ್ನು ನೀವು ಆ ಪಾದರಿಗಳ ಸಾಲಿಗೇತಕ್ಕೆ ಹಾಕಿದಿರಿ?" ಎಂಬೀ ಪ್ರಶ್ನೆಯ ಎಷ್ಟೋ ಆವೃತ್ತಿಗಳು ಅದೇ ಕಾಲಕ್ಕೆ ಆಗಿ ಹೋದವು.

ಇಷ್ಟರಲ್ಲಿ ನಮ್ಮ ಬೀಗನು ಅಂದರೆ, ವಿಷ್ಣುವಿನ ಮಾವನಾದ ಗೋಪಾಳರಾಯನು ಒಳ್ಳೇ ಆವೇಶದಿಂದ ನಮ್ಮಲ್ಲಿಗೆ ಬಂದು, ಸಂತಾಪಭರದಿಂದ ನನ್ನೆದುರಿಗೆ ಬಂದು ನಿಂತುಕೊಂಡು:—"ಗುರುಭಟ್ಟರೇ, ನನ್ನ ಮಗಳ ಕುತ್ತಿಗೆಯನ್ನು ಒಳ್ಳೇ ಚೆನ್ನಾಗಿ ಕೊಯ್ದಿರಿ ಬಿಡಿರಿ. ಛೇ! ಛೇ! ಇಂಥ ಕುಲಗೇಡಿ ಮನೆತನವು ನಮಗೆಲ್ಲಿಂದ ಗಂಟುಬಿದ್ದಿತೋ ಅದಾರಿಗೆ ಗೊತ್ತು?" ಎಂಬದಾಗಿ ನನ್ನ ಮೇಲೆ

ಬಿರಿನುಡಿಗಳ ಬಾಂಬುಗಳನ್ನೇ ಸುರಿಯತೊಡಗಿದನು. ಆ ಆಘಾತಗಳನ್ನು ನಾನು ಸುಮ್ಮನೆ ಸಹಿಸಿಕೊಳ್ಳದಿದ್ದರೆ ಗತ್ಯಂತರವಿರಲಿಲ್ಲ. ಮದುವೆಯಲ್ಲಿ ಮೆರೆಯುವ ಹವ್ಯಾಸವು ನನಗಿತ್ತು. ನನ್ನ ಕಣ್ಣೆದುರಿಗೆ ನಮ್ಮ ವಿಷ್ಣುವು ಚತುರ್ಭುಜನಾದದ್ದನ್ನು ಕಂಡರೆ ನನಗೆ ಪುರುಷಾರ್ಥವೆನಿಸುತ್ತಿತ್ತು. ಲಗ್ನವನ್ನು ಈಗಲೇ ಮಾಡಬೇಡಿರೆಂದು ನಮ್ಮ ಬಾಳನು ಒಂದೇಸವನೆ ಅನ್ನುತ್ತಿದ್ದದ್ದರ ಕಡೆಗೆ ನಾನು ಕೊಂಚವೂ ಲಕ್ಷ್ಯಗೊಟ್ಟಿರಲಿಲ್ಲ. ಆದ್ದರಿಂದ ಗುರುಭಟ್ಟಾ, ಅದರ ಫಲವನ್ನುಣ್ಣು ಈಗ! ಎಂದು ನಾನು ಒಳ್ಳೇ ಸಂತಾಪದಿಂದ ನನ್ನನ್ನುದ್ದೇಶಿಸಿ ನುಡಿದೆನು.

ನಾನು ಪಿಟ್ಟೆಂದುಸುರದ್ದನ್ನು ಕಂಡು ನಮ್ಮ ಬೀಗರು ಹೆಚ್ಚು ಸಂತಪ್ತರಾಗಿ:-"ಇನ್ನು ಇಲ್ಲಿ ಹೀಗೆ ಅಳುತ್ತೇಕೆ ಕುಳಿತಿರಿ? ಹೋಗಿರಿ ಒಮ್ಮೆಲೆ ಬೆಂಗಳೂರಿಗೆ; ಹಾಗು ನಾಲ್ಕು ಹಿತೋಕ್ತಿಗಳನ್ನು ನಿಮ್ಮ ಮಗನಿಗೆ ಹೇಳಿ ಆತನನ್ನು ಹಾದಿಗೆ ತರ್ರಿ" ಎಂದರು. ಅವರ ಮಾತನ್ನು ಕೇಳಿ ಅಲ್ಲಿ ಕೂಡಿದ್ದ ಜನರೊಳಗಿನ ಮತ್ತೊಬ್ಬ ಗೃಹಸ್ಥನು:—"ಇನ್ನು ಇವರು ಅಲ್ಲಿಗೆ ಹೋಗಿ ಮಾಡುವದಾದರೂ ಏನಿದೆ? ಆತನ ತಲೆಯನ್ನು ಬೋಳಿಸಿರಬಹುದು; ಜುಟ್ಟು-ಜನಿವಾರಗಳನ್ನು ಕಿತ್ತೊಗೆದಿರಬಹುದು; ಮದ್ಯಮಾಂಸಗಳನ್ನು ತಿನ್ನಿಸಿರಬಹುದು; ಎಲ್ಲ ವಿಧಿಯೂ ಆಗಿ ಹೋಗಿರಬಹುದು. ವಿಷ್ಣುವಿನ ಬಾಪ್ತಿಸ್ಮಾ ಆಗಿ ಇಂದಿಗೆ ಮೂರನೇ ದಿನವಂತೆ" ಎಂದು ಹೇಳುತ್ತಿರಲು, ಮೂರನೆಯವನೊಬ್ಬನು 'ಹುಡುಗನು ಕುಶಾಗ್ರ ಬುದ್ಧಿಯವನು, ಒಳ್ಳೇ ಜಾಣನು, ಓದು ಬರಹದಲ್ಲಿ ಗಟ್ಟಿಗನು. ಆತನಿಂದ ಈ ಬ್ರಾಹ್ಮಣನ ದಾರಿದ್ರ್ಯವು ಹಿಂಗುವದೆನ್ನಬಹುದಾಗಿತ್ತು; ಆದರೆ ಅಷ್ಟರಲ್ಲಿ ಆತನು ನಮ್ಮ ಗುರುಭಟ್ಟರ ಕುಲವನ್ನೇ ಉದ್ಧಾರ ಮಾಡಿಬಿಟ್ಟನು!" ಹೀಗೆಂದನು. ಆಗ ಅಲ್ಲಿ ಕಲೆತವರು ಬಾಯಿಗೆ ಬಂದ ಹಾಗೆ ಅನ್ನುತ್ತಿದ್ದರು. ಅವರ ಆ ನುಡಿಗಳನ್ನು ಕೇಳಿಕೊಳ್ಳುವದು ಅಸಹ್ಯವಾಯಿತು. ಅದರಿಂದ ನಾನು ಕಂಗೆಟ್ಟು ಹೋದೆನು. ಹತಾಶನಾದೆನು. ನನ್ನಲ್ಲಿಯ ವಿವೇಕವು ಎತ್ತಿಂದ ಎತ್ತೋ ಮಾಯವಾಯಿತು. ಮುಂದೇನು ಮಾಡಬೇಕೆಂಬದು ನನಗೆ ಸೂಚಿಸದಾಯಿತು. ಆಗ ನಾನು ದೊಡ್ಡ ದನಿಯಿಂದ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದೆನು!

ನಾನು ಒಳ್ಳೇ ಎದೆಗಾರನಾದ ಗಂಡಸಾಗಿದ್ದರೂ ಇಡೀ ಜನ್ಮದಲ್ಲಿ ಅಂದೇ ಕೂಡಿದ ಜನರೆದುರಿಗೆ ಹಾಗೆ ಗಟ್ಟಿಯಾಗಿ ಅತ್ತದ್ದು. ಇಷ್ಟರಲ್ಲಿ ನಮ್ಮ ಬಾಳನ ಮಾವನು ಒಳ್ಳೇ ಅವಸರದಿಂದ ಗಾಬರಿಗೊಂಡು ಅಲ್ಲಿಗೆ ಬಂದನು; ಹಾಗು ಆತನು ಅಲ್ಲಿ ನೆರೆದ ಜನರನ್ನೆಲ್ಲ ಬೆದರಿಸಿ:—"ಎಂಥ ನಾಚಿಗೆಗೇಡಿ ಜನರಿವರು? ಮರ್ಮಕ್ಕೆ ಹತ್ತುವಂತಹ ಮಾತುಗಳನ್ನಾಡುವ ಕಾಲವೇ ಇದು? ನೀಚರಿವರು!" ಎಂದೆನ್ನುತ್ತ ನನ್ನ ಹತ್ತರ ಬಂದು:—"ಗುರುಭಟ್ಟರೇ, ನೀವು ಇದೇನನ್ನು ನಡಿಸಿರುತ್ತೀರಿ? ಇಂಥ ಪ್ರಸಂಗದಲ್ಲಿ ಹೀಗೆ ಅಂಜಿಕೊಂಡರೆ ನಡೆಯುವದೇ? ಎಲ್ಲಿ ನೋಡೋಣ, ಆ ಪತ್ರವನ್ನು? ಅದರಲ್ಲೇನಿದೆಯೆಂಬದನ್ನು ಮತ್ತೊಮ್ಮೆ ಓದೋಣ." ಹೀಗೆಂದು, ನನ್ನ

ಬಳಿಯ ಆ ಪತ್ರವನ್ನು ಇಸಕೊಂಡು ಓದಹತ್ತಿದನು. ಪತ್ರವನ್ನೋದುವದಾದ ಬಳಿಕ ಆತನು:—"ನೀವು ಇಷ್ಟು ಅಂಜುವ ಕಾರಣವಿಲ್ಲ. ಆತನಿನ್ನೂ ಸಂಪೂರ್ಣವಾಗಿ ಕುಲಗೆಟ್ಟಿರುವದಿಲ್ಲ. ಆ ಪಾದರಿಸಾಹೇಬನ ಮನೆಯಲ್ಲಿರುತ್ತಾನಂತೆ. ಕುಲಗೆಡಿಸತಕ್ಕ ವಿಧಿಯು ಇನ್ನೂ ಆಗತಕ್ಕದ್ದಿದೆ. ಇಂದು ಸಂಜೆಯ ಮುಂದೆ ಆದೀತೆಂದು ಜನರು ಅನ್ನುತ್ತಿರುವರು; ಆದರೆ ನಮ್ಮ ಅಳಿಯನು ಆ ಬಗ್ಗೆ ಏನಾದರೂ ವ್ಯವಸ್ಥೆಮಾಡಿರಬಹುದು. ನೀವು ಮಾತ್ರ ಇನ್ನು ಇಲ್ಲಿ ಒಂದು ಗಳಿಗೆಯನ್ನು ಕೂಡ ಕಳೆಯದೆ, ನೆಟ್ಟಗೆ ಬೆಂಗಳೂರಿಗೆ ಹೊರಡಿರಿ. ನೀವು ತಂದೆ-ತಾಯಿಗಳಿಬ್ಬರೂ ಹೋಗಿ ನಾಲ್ಕು ಹಿತೋಕ್ತಿಗಳನ್ನು ಹೇಳಿದಿರೆಂದರೆ, ನಿಮ್ಮ ವಿಷ್ಣುವು ಎಚ್ಚತ್ತಾನು." ಈ ಬಗೆಯಾಗಿ ಸಮಾಧಾನ ಹೇಳಿದ್ದರಿಂದ ನನಗೂ ತುಸ ಧೈರ್ಯ ಬಂತು. ಅದರಿಂದ ನಾವು ಅಂದೇ ರಾತ್ರಿಯ ರೈಲಿನಿಂದ ಹೊರಡಬೇಕೆಂದು ಆಗಲೆ ನಮ್ಮೂರಿಂದ ಹೊರಡಲಿದ್ದ ಮೋಟಾರನ್ನು ಹಿಡಿದೆವು ಇತ್ತೀಚೆಗೆ ನಮ್ಮೂರಿಂದ ರೈಲ್ವೆಸ್ಟೇಶನ್ನಿನ ವರೆಗೆ ಮೋಟಾರ ಸರ್ವಿಸ್ಸು ಪ್ರಾರಂಭವಾಗಿತ್ತು; ಮೊದಲಿನಂತೆ ಎತ್ತಿನ ಬಂಡಿಯ ಪ್ರವಾಸವಿರಲಿಲ್ಲ

ನಾವು ಹೊರಡುವಾಗ ನಮ್ಮ ಜೊತೆಗೆ ನಮ್ಮ ಬಾಳನ ಮಾವನನ್ನೂ ಹೊರಡಿಸಿಕೊಂಡು ಹೋದೆವು. ಬೆಂಗಳೂರಿಗೆ ತಲಪುತ್ತಲೆ ಇದುವರೆಗೂ ವಿಷ್ಣುವಿನ ಬಾಪ್ತಿಸ್ಮಾ ವಿಧಿಯು ಆಗಿಲ್ಲೆಂದು ತಿಳಿಯಿತು. ಅದರಿಂದ ನನಗೆ ಒಂದಿಷ್ಟು ಹುರುಪುಂಟಾಯಿತು. ಬಳಿಕ ನಾನು, ಬಾಳನು, ಬಾಳನ ಮಾವನು ಹಾಗು ಬಾಳನ ಒಬ್ಬ ಸ್ನೇಹಿತನು ಇಷ್ಟು ಜನರು ಕೂಡಿ ಆ ಪಾದರಿಸಾಹೇಬನ ಬಂಗ್ಲೆಗೆ ನಡೆದೆವು. ನಮ್ಮನ್ನು ಕಂಡ ಕೂಡಲೆ ಆ ಪಾದರಿಸಾಹೇಬನು ಬಂಗ್ಲೆಯ ಹೆಬ್ಬಾಗಿಲಿಗೆ ಬಂದನು. ಅಲ್ಲಿ ನಮ್ಮ ಕೆಲಸವೇನೆಂದು ಆತನು ಕೇಳಿದನು. ಆಗ ಆ ಪ್ರಶ್ನೆಯಿಂದ ನಾನು ಒಮ್ಮೆಲೆ ಸಂತಪ್ತನಾಗಿ:—"ನೀಚಾ, ನಾಚಿಕೆಗೇಡಿ, ನೀನು ನಮ್ಮ ಮಗನನ್ನು ಕುಲಗೆಡಿಸಿರುತ್ತೀ........" ಹೀಗೆ ನಾನು ಬಾಯಿಗೆ ಬಂದ ಹಾಗೆ ಬೊಗಳಹತ್ತಿದೆನು. "ಅಪ್ಪಾ, ಹೀಗೆ ಅನ್ನಬಾರದು. ತುಸ ತಾಳಿರಿ. ಹೀಗೆ ಒಮ್ಮೆಲೆ ಅವಸಾನಗೆಡಬೇಡಿರಿ." ಎಂದು ನಮ್ಮ ಬಾಳನು ನನಗೆ ಹೇಳುತ್ತಿರುವಷ್ಟರಲ್ಲಿ ನಾನು ಒಮ್ಮೆಲೆ ನಮ್ಮ ಬಾಳನ ಮೈಮೇಲೆಯೇ ಏರಿ ಹೋಗಿ—"ಹೋಗು ಮೂರ್ಖಾ, ಹೋಗು. ಉತಾವಳಿಯಾಗಬೇಡವೆಂದರೇನು? ನನ್ನ ಮಗನನ್ನು ಕುಲಗೆಡಿಸಲಿಕ್ಕೆ ಈ ಟೊಣಪನಿಗೆ ನಾಚಿಯುಂಟಾಗಲಿಲ್ಲವೆ? ಇವನು ಸಾಮಾನ್ಯ ಪಾಪಿಯಲ್ಲ; ಬ್ರಹ್ಮಘಾತುಕಿಯು! ಸಾಹೇಬಾ, ನೀನು ಈತನ ಹೆಂಡತಿಯ ಕುತ್ತಿಗೆ ಕೊಯ್ಯುತ್ತೀಯೇನು? ಹಾಯ! ಹಾಯ! ಎನ್ನಿಸುತ್ತ ನನ್ನನ್ನು ಕೊಲ್ಲಬಯಸುತ್ತೀಯೇನು? ಸಾಹೇಬಾ, ನಿನ್ನ ಸತ್ಯಾನಾಶವಾದೀತು. ನೀನು ರೌರವ ನರಕಕ್ಕೆ ಹೋದೀ! ಈ ದಶಗ್ರಂಥೀ ಬ್ರಾಹ್ಮಣನ ಶಾಪವು ನಿನ್ನನ್ನು ಹುರುಪಳಿಸಿಬಿಟ್ಟೀತು-" ಹೀಗೆ ಸಂತಾಪದಿಂದ ನಾನು ಮತ್ತೆ ಮತ್ತೆ ನುಡಿಯಹತ್ತಿದೆನು.

ಆ ನನ್ನ ಬೈಗಳುಗಳನ್ನು ಕೇಳಿ ಆ ಪಾದರಿಯು ಒಂದಿಷ್ಟೂ ಸಿಟ್ಟಾಗಲಿಲ್ಲ; ತೀರ ನಾಚಿಕೆಗೇಡಿಯಂತೆ ನಗಹತ್ತಿದನು; ಹಾಗು ತನ್ನ ಬಾಯಿಂದ:— "ಆಕಾಶದೊಳಗಿನ ತಂದೆಯು ನಿಮ್ಮ ಮೇಲೆ ಪ್ರಕಾಶವನ್ನು ಕೆಡವಲಿ; ನೀವು ಸೈತಾನನ ಬಲೆಯೊಳಗೆ ಬೀಳುತ್ತಿರುವದನ್ನು ಕಂಡು ನಮಗೆ ಅತ್ಯಂತ ದುಃಖವೆನಿಸುತ್ತದೆ" ಎಂದನು

ನಮ್ಮ ಬಾಳನೂ ಆತನ ಸ್ನೇಹಿತನೂ ನನ್ನನ್ನು ಸುಮ್ಮನಿರಿಸಿ, ಆ ಸಾಹೇಬನೊಡನೆ ಇಂಗ್ಲಿಷಭಾಷೆಯಿಂದ ಏನೇನೋ ಮಾತನಾಡಹತ್ತಿದರು. ಬಾಳನ ಸಂಗಡಿಗನು ಪ್ರಸಿದ್ಧ ವಕೀಲನಿದ್ದನು. ಆಗ ಬಾಳನ ಮಾವನು ನನ್ನನ್ನುದ್ದೇಶಿಸಿ—"ಗುರುಭಟ್ಟರೇ, ನೀವಿನ್ನು ಹೆಚ್ಚು ಮಾತಾಡಬೇಡಿರಿ. ನಮ್ಮ ಬಾಳಾಸಾಹೇಬರು ಇಂಗ್ಲಿಷಭಾಷೆಯಿಂದ ಆ ಸಾಹೇಬನ ಮಾನಖಂಡನೆ ಮಾಡುತ್ತಿರುವನು. ಆದರಿಂದ ನಿಮ್ಮ ವಿಷ್ಣುವು ಇನ್ನು ನಿಮ್ಮೊಡನೆ ಹೊರಟೇ ಬರುವನು" ಎಂದು ಹೇಳಲು, ನನಗೆ ತುಸ ಧೈರ್ಯ ಬಂತು. ಎಷ್ಟೋ ಹೊತ್ತಾದರೂ ಅವರುಗಳ ಸಂಭಾಷಣವು ಮುಗಿಯಲಿಲ್ಲ. ಕಟ್ಟಕಡೆಗೆ "ನೀವು ಕಿಟಕಿಯ ಹೊರಗಡೆಗೆ ನಿಂತುಕೊಂಡು ಆತನೊಡನೆ ಮಾತನಾಡಬಹುದು" ಎಂದು ಆ ಸಾಹೇಬನು ನಮಗೆ ಹೇಳಿದನು. ಬಳಿಕ ನಾವೆಲ್ಲರೂ ವಿಷ್ಣುವಿನನ್ನಿರಿಸಿದ್ದ ಕೋಣೆಯ ಕಿಟಕಿಯ ಬಳಿಗೆ ಹೋದೆವು. ಇಷ್ಟರೊಳಗೆ ಆ ಪಾದ್ರಿಯು ಬೇರೆ ಬಾಗಿಲದಿಂದ ಅಲ್ಲಿಗೆ ಹೋಗಿ, ಆತನಿಗೆ ಏನೇನೋ ಹೇಳಿಕೊಡುತ್ತಿದ್ದನು.

ಅಲ್ಲಿಗೆ ಹೋದ ಕೂಡಲೆ "ವಿಷ್ಣು" ಎಂದು ಕೂಗಿ 'ತಮ್ಮಾ, ನೀನಿದೇನನ್ನು ಮಾಡಿದೆ?" ಎಂದು ನಾನು ಕೇಳಲು, ಆತನು:—ಅಪ್ಪಾ, ನಾನೀಗ ೨೦ ವರ್ಷದ ವಯಸ್ಸಿಗೆ ಬಂದಿರುತ್ತೇನೆ. ಈಗ ನಾನು ಅಜ್ಞಾನಿಯಾಗಿರುವದಿಲ್ಲ; ಆದರಿಂದ ನನ್ನ ಮೇಲೆ ನಿಮ್ಮದಾರದೂ ಕಾಯಿದೆ ಪ್ರಕಾರ ಹಕ್ಕು ಉಳಿದಿರುವದಿಲ್ಲ........ ಹೀಗೆಂದು ಏನೇನೋ ಹೇಳಹತ್ತಲು, ನಾನು ಆತನನ್ನು ಮುಂದೆ ಮಾತನಾಡಗೊಡದೆ, "ವಿಷ್ಣ್ಯಾ, ಎಲಾ ಚಂಡಾಲಾ, ನನ್ನ ಕುಲಕ್ಕೆ ಕಲಂಕ ಹಚ್ಚುವೆಯಾ? ನಿನಗೆ ಆ ಬಗ್ಗೆ ಏನಾದರೂ ಪರಿವೆಯಿರುವದೇ? ಎಲಾ, ನಾಚಿಕೆಯನ್ನು ಎಲ್ಲಿ ಬಿಟ್ಟು ಬಂದಿರುತ್ತೀ?" ಎಂದೆನು. ಅದಕ್ಕೆ ವಿಷ್ಣುವು:—"ಅಪ್ಪಾ, ನಿಮ್ಮೀ ಅಜ್ಞಾನಾವಸ್ಥೆಯನ್ನು ಕಂಡು ನನಗೆ ಪರಮ ದುಃಖವೆನಿಸುತ್ತದೆ. ನಮ್ಮ ಏಸೂ ಕ್ರಿಸ್ತನು ಮಹಾತ್ಮನಿರುತ್ತಾನೆ. ಆತನು ನಿಮ್ಮ ಮೇಲೆ ಜ್ಞಾನಪ್ರಕಾಶವನ್ನು ಕೆಡಹಿ, ನಿಮ್ಮ ಅಂತರಂಗದೊಳಗಿನ ಅಜ್ಞಾನವನ್ನು ಒಮ್ಮೆಲೆ ಹೋಗಲಾಡಿಸಲಿ!" ಆತನ ಈ ನುಡಿಗಳನ್ನು ಕೇಳಿ ನನ್ನ ಸಿಟ್ಟು ನೆತ್ತಿಗೇರಿತು. ಆಗ ನಾನು ಉರಿಮುಖದಿಂದ "ಎಲೈ ಅಧಮಾ, ನೀನು ನನಗೆ ಮೂರ್ಖನೆನ್ನುತ್ತೀಯಾ? ನಿನ್ನಲ್ಲಿಯ ಬುದ್ಧಿವಂತಿಕೆಯು ಎತ್ತ ಮಾಯವಾಯಿತು? ಈಗ ನೀನು ಯಾವ ನರಕದ ಸಾಧನಕ್ಕೆ ತೊಡಗಿರುತ್ತೀ?" ಎಂದು ಆ ಹುಡುಗನ ಮೇಲೆ ಕಠಿಣ ಶಬ್ದಗಳ ಮಳೆಗರೆಯಹತ್ತಿ

ದೆನು. ನನ್ನಲ್ಲಿಯ ಅನಿವಾರ್ಯ ಸಂತಾಪವನ್ನು ಕಂಡು, ನಮ್ಮ ಬಾಳನೂ ಆತನ ಸ್ನೇಹಿತ-ಮೂವರಿದಿರೂ ನನ್ನನ್ನೊತ್ತಟ್ಟಿಗೆ ಕರೆದೊಯ್ದರು. ಅವರು ನನ್ನನ್ನು ಹಾಗೆ ಅಲ್ಲಿಂದ ಎಳೆದೊಯ್ಯುತ್ತಿರುವದನ್ನು ಕಂಡು ಆ ನತದ್ರಷ್ಟ ವಿಷ್ಣುವು:-"ಎಲೈ ಆಕಾಶಸ್ಥ ತಂದೆಯೇ, ಇವರಿಗೆ ನಿನ್ನಲ್ಲಿ ವಿಶ್ವಾಸವನ್ನು ಹುಟ್ಟಿಸು; ಮತ್ತು ನಿನ್ನ ಜ್ಞಾನಪ್ರಕಾಶದಿಂದ ಈ ಪಾಪಾತ್ಮರ ಆತ್ಮವನ್ನು ಉದ್ಧರಿಸು" ಎಂದಂದ ಕೂಡಲೆ, ನನ್ನ ಸಿಟ್ಟು ಅನಿವಾರವಾಯಿತು. ಬಳಿಕ ನಾನು:—ಎಲೈ ಚಂಡಾಲಾ, ಮಹಾ ಪಾತಕಿಯೇ, ನಾನು ನಿನ್ನ ಜೀವಂತ ತಂದೆಯಿದ್ದು, ನನ್ನನ್ನು ಈ ಬಗೆಯಾಗಿ ಅವ ಹೇಲನಗೊಳಿಸುವೆಯಾ? ಮತ್ತು ಆಕಾಶದೊಗಿನ ಆ ನಿನ್ನ ತಂದೆಯು ಯಾರು? ಮತ್ತು ಆತನು ಏನು ಮಾಡುವನು? ಮೂರ್ಖಾ, ನೀನು ಹುಟ್ಟಿದಾಗಲೇ ಅದೇಕೆ ಸಾಯಲಿಲ್ಲಪ್ಪಾ? ನಿನ್ನನ್ನಿಷ್ಟು ದೊಡ್ಡವನಾಗಿ ಬೆಳೆಸಿದ್ದು ಹಾವಿಗೆ ಹಾಲೆರೆದಂತಾಯಿ ತಲ್ಲ!" ಎಂದು ಅನ್ನುತ್ತಿರುವಾಗಲೇ ಬಾಳಾದಿಗಳು ನನ್ನನ್ನು ಬೇರೆ ಕಡೆಗೆ ಎಳೆ ದೊಯ್ದರು.

ಆ ಮೇಲೆ ಬಾಳನು ನಮ್ಮ ವಿಷ್ಣುವಿಗೆ ಪರಿಪರಿಯಿಂದ ಹೇಳಿದನು. ಆತನ ಮಾತಿಗೂ ಬೆಲೆ ಬರಲಿಲ್ಲ. ಬಳಿಕ ಬಾಳನು ನನ್ನ ಗೃಹಿಣಿಯನ್ನು ಕರೆಕಳುಹಿ ದನು. ಅವಳು ವಿಷ್ಣುವಿನ ಎದುರಿಗೆ ಹೋಗಿ ಅತ್ತಳು, ಕರೆದಳು, ಪರಿಪರಿಯಿಂದ ಪ್ರಾರ್ಥಿಸಿದಳು, ಬೋಧಿಸಿದಳು; ಆದರೆ ಅದೆಲ್ಲವೂ ಡಬ್ಬ ಕೊಡದ ಮೇಲೆ ನೀರು ಸುರಿದಂತೆಯೇ ಆಯಿತು. ಕಡೆಗೆ ನನ್ನ ಗೃಹಿಣಿಯು ಆ ನಮ್ಮ ನತದ್ರಷ್ಟ ಮಗ ನಾದ ವಿಷ್ಣುವಿನ ಕಾಲಿಗೆ ಕೂಡ ಎರಗಿದಳು! ಆದರೂ ಕೂಡ ಆ ಪಾಷಾಣ ಹೃದಯಿಗೆ ದಯೆಯುಂಟಾಗಲಿಲ್ಲ. ಅಧಮಾಧಮನಾದ ಚಂಡಾಲನೇ ಅವನು! ನಮ್ಮ ಪೂರ್ವಜನ್ಮದ ಶತ್ರುವೇ ನಮ್ಮ ಹೊಟ್ಟೆಯಲ್ಲಿ ಮಗನಾಗಿ ಜನಿಸಿ ದ್ದನು. ನನ್ನ ಗೃಹಿಣಿಯು ಆಗಿನ ಕನಿಕರದ ಸ್ಥಿತಿಯನ್ನು ಕಂಡು, ನನ್ನ ಸಿಟ್ಟು ಮಿತಿಮೀರಿತು. ಮುಂದೇನು ಮಾಡಬೇಕೆಂಬುದು ನನಗೆ ತಿಳಿಯದಾಯಿತು. ಅಷ್ಟರೊಳಗೆ ಮಧ್ಯಾಹ್ನದ ಎರಡು ಗಂಟೆಯಾಯಿತು. ಇನ್ನು ಇಲ್ಲಿ ವೇಳೆಗಳೆ ಯದೆ, ಎಲ್ಲರೂ ಮನೆಗೆ ಹಿಂತಿರುಗಬೇಕೆಂದು ನಿರ್ಧರಿಸಿದರು. ವಿಷ್ಣುವಿನನ್ನು ಅಲ್ಲಿಯೇ ಬಿಟ್ಟು ಹಿಂದಿರುಗಿ ಹೋಗುವದು ನನ್ನ ಮನಸ್ಸಿನಲ್ಲಿರಲಿಲ್ಲ. ಇನ್ನು ಆ ವಿಷ್ಣ್ವಾಖ್ಯನ ಎದುರಿಗೆ ನಾಲಿಗೆ ಹಿರಿದುಕೊಂಡು ಸತ್ತು, ಪಿತೃಘಾತದ ಪಾಪವನ್ನು ಆ ನೀಚ ಪೋರನ ಮೇಲೆಯೂ, ಬ್ರಹ್ಮಹತ್ಯೆಯ ಪಾತಕವನ್ನು ಆ ಅಧಮ ಪಾದ್ರೀ ಸಾಹೇಬನ ಮೇಲೆಯೂ ಹೊರಿಸಬೇಕೆಂದು ನಾನು ಯೋಚಿಸಿದೆನು; ಆದರೆ ನಾನು ಆಗ ಹಾಗೆ ಅಲ್ಲಿ ನನ್ನ ಪ್ರಾಣ ಕಳಕೊಳ್ಳುವುದು ಈ ಇಂಗ್ಲಿಷ ರಾಜ್ಯದಲ್ಲಿ ಗುನ್ಹೆ ಯಾಗುತ್ತದಂತೆ! ಮತ್ತು ಆ ಪಾದ್ರಿಯು ಆ ಪಾತಕಕ್ಕೂ ಅಂಜಲಾರನೆಂದು ನಮ್ಮವ ರೆಲ್ಲರೂ ಹೇಳಿದರು.

"ಇದರಲ್ಲಿ ಸರಕಾರದ್ದೇನು ಕಡಿಮೆಯಾಗುವದು? ನನ್ನ ಜೀವಕ್ಕೆ ನಾನೇ

ಒಡೆಯನು. ನನ್ನನ್ನು ಕೇಳಲಿಕ್ಕೆ ಸರಕಾರಕ್ಕೇನು ಅಧಿಕಾರ? ಅದಿಲ್ಲದಿದ್ದರೆ ಸರಕಾರವು ನನ್ನ ಮಗನನ್ನು ನನ್ನ ವಶಕ್ಕೊಪ್ಪಿಸಲಿ" ಎಂದು ಆಗ ನಾನು ನುಡಿದ ನುಡಿಗಳು ಎಲ್ಲರಿಗೂ ಚಮತ್ಕಾರದವೆನಿಸಿದವು! ಆ ಮೇಲೆ ನಾನು, ನನ್ನ ಗೃಹಿಣಿ ಹಾಗು ನಮ್ಮ ಬಾಳ ಈ ಮೂವರೂ ಕೂಡಿ ನಮ್ಮ ಆ ವಿಷ್ಣುವನ್ನು ಮತ್ತೊಮ್ಮೆ ಕೇಳಹೋದೆವು. ಹೋಗುವಾಗ ಬಾಳನು ನನ್ನನ್ನು ಕುರಿತು:—ಅಪ್ಪಾ, ನೀವು ಸುಮ್ಮನೆ ಸಂತಾಪಗೊಳ್ಳಬೇಡಿರಿ. ಆ ಸಾಹೇಬನಿಗೆ ಹೆಚ್ಚು-ಕಡಿಮೆ ಮಾತನಾಡುವುದರಿಂದ ಏನೂ ಪ್ರಯೋಜನವಿರುವದಿಲ್ಲ, ಎಂದು ಬಜಾಯಿಸಿ ಹೇಳಿದನು. ನಾವು ಕಿಟಕಿಯ ಬಳಿಗೆ ಬಂದೆವೆಂಬದನ್ನು ತಿಳಿದು ವಿಷ್ಣುವೂ ಕಿಟಕಿಯ ಹತ್ತಿರ ಬಂದು ನಿಂತುಕೊಂಡನು. ಈಗ ಆತನ ಮನಸ್ಸು ತುಸ ಚಂಚಲವಾದಂತೆ ನಮಗೆ ಗೋಚರವಾಯಿತು. ಅದರಿಂದ ಈತನು ಇನ್ನು ನಮ್ಮ ಮಾತನ್ನು ಕೇಳಿದರೂ ಕೇಳಬಹುದೆಂದು ನನಗನಿಸಿತು. ಆಗ ನನ್ನ ಗೃಹಿಣಿಯು ಆತನನ್ನು ಕುರಿತು:—"ನಿನಗೆ ನಮ್ಮ ಮುದುಕರ ಬಗ್ಗೆ ಕನಿಕರವುಂಟಾಗುವದಿಲ್ಲವೇ? ನಿನ್ನನ್ನು ಒಂಬತ್ತು ತಿಂಗಳು ಹೊತ್ತು ಹೆತ್ತದ್ದು, ನಮ್ಮ ಎದುರಿಗೆ ನೀನು ಹೀಗೆ ಕುಲಗೇಡಿಯಾಗಲಿಕ್ಕೇನು? ನಾವು ಜೀವದಿಂದಿರುವವರೆಗೆ ನೀನು ನಮ್ಮ ಮನೆಯಲ್ಲಿ ಸ್ವಸ್ಥವಾಗಿರು. ನಮ್ಮ ಕಣ್ಣುಗಳು ಮುಚ್ಚಿದವೆಂದರೆ, ನಿನಗೆ ಸರಿದೋರಿದಂತೆ ಮಾಡು. ತಮ್ಮಾ, ವಿಷ್ಣು, ಎಂಥಾ ಬುದ್ಧಿವಂತನು ನೀನು! ನಿನಗೇನು ಉಣಲಿಕ್ಕೆ ಅರೆಯೇ? ತಿನಲಿಕ್ಕೆ ಅರೆಯೇ? ಅರಿವೆ-ಅಂಚಡಿಗಳ ಕೊರತೆಯೇ? ಬಾಳನು ನಿನಗೆ ಯಾವ ಬಗೆಯಿಂದಲೂ ಕೊರತೆಯುನ್ನುಂಟು ಮಾಡಿರುವದಿಲ್ಲ. ಪಾಪ! ಆ ನಿನ್ನ ಹೆಂಡತಿಯು! ನೀನು ಹೀಗೆ ಕುಲಗೆಟ್ಟೆಯೆಂದರೆ, ಅವಳೇನು ಮಾಡಬೇಕು? ನಿನ್ನ ಅತ್ತೆ-ಮಾವಂದಿರು ಜೀವಂತರಿರುತ್ತಾರೆ; ಸಿರಿವಂತರಿರುತ್ತಾರೆ. ಅವರು ನಿನಗೆ ಬೇಕು ಬೇಕಾದ್ದನ್ನು ಕೊಡಬಲ್ಲರು. ನೀನು ಮನೆಗೆ ಬಂದು ಬೇಕಾದ್ದನ್ನು ಇಸಕೊಂಡು ಸುಖದಿಂದಿರು; ಆದರೆ ನಮ್ಮನ್ನು ಹೀಗೆ ನಡುನೀರಲ್ಲಿ ಬಿಡಬೇಡ," ಎಂದು ಸೆರಗೊಡ್ಡಿ ಬೇಡಿಕೊಳ್ಳುತ್ತಿದ್ದಳು ಆದರೂ ಆ ಟೊಣಪನು ಹೂ-ಚೂ ಎನ್ನಲಿಲ್ಲ.

ಕಡೆಗೆ ನಾನು ಆವೇಶದಿಂದ ಮುಂವರಿದು ಹೋಗಿ:—ವಿಷ್ಣ್ಯಾ, ಇಗೋ, ನಾನು ನಿನ್ನ ಕಾಲಿಗೆ ಬೀಳುತ್ತೇನೆ. ನೀನು ದಯುವಿಟ್ಟು ನಮ್ಮ ಮನೆಗೆ ಹೊರಟು ಬಾ. ನನ್ನ ಕುಲಕ್ಕೆ ಹೀಗೆ ಕಲಂಕವನ್ನು ಹಚ್ಚಬೇಡ;............ಮುಂದೆ ನನ್ನ ಬಾಯಿಂದ ಶಬ್ದಗಳೇ ಹೊರಡದಾದವು. ನನ್ನ ಆ ಅವಸ್ಥೆಯನ್ನು ಕಂಡು ನಮ್ಮ ಬಾಳನಿಗೆ ಬಹು ಕೆಡಕೆನಿಸಿತು. ಆದರೂ ಆತನು ನನ್ನನ್ನು ಹಿಂದೆ ದೂಡುತ್ತ:—ವಿಷ್ಣೂ, ಅವ್ವ-ಅಪ್ಪನಂತಹ ಸ್ವಕೀಯ ಜನರು ಇನ್ನು ನಿನಗೆ ಸಿಗಲಾರರು. ಅವರ ಅನಂತ ಉಪಕಾರಗಳು ನಿನ್ನ ಮೇಲಿದ್ದು, ನೀನು ಅವರಿಗೆ ಹೀಗೆ ದುಃಖ ಕೊಡುವುದು ತರವಲ್ಲ, ಎಂದನು. ಬಾಳನ ಮಾವನೂ ಬಾಳನ ಸ್ನೇಹಿತ ವಕೀಲನೂ ವಿಷ್ಣುವಿಗೆ ನಾನಾ ಬಗೆಯಿಂದ ಬೋಧಿಸಿದರು; ಏನಾದರೂ ಬೋರ್ಗಲ್ಲ ಮೇಲೆ ಮಳೆ

ಗರೆದಂತೆಯೇ ಆಯಿತು.

ಇಷ್ಟರಲ್ಲಿ ಮತ್ತೊಬ್ಬ ಯಾವನೋ ಕುಲಗೇಡಿಯು ಅಲ್ಲಿಗೆ ಬಂದು ಒಳ್ಳೇ ಆಥ್ಯತೆಯಿಂದ ನನ್ನನ್ನು ಕುರಿತು:—“ಭಟ್ಟರೇ, ಇನ್ನು ನೀವು ಈ ಹುಡುಗನ ಆಶೆಯನ್ನೇಕೆ ಹಿಡಿಯುವಿರಿ? ಈತನು ಕುಲಗೆಟ್ಟು ಹೋಗಿರುತ್ತಾನೆ. ನಿನ್ನೆಯೇ ಪ್ರಭು ಭೋಜನವಾಗಿ ಹೋಗಿದೆ. ಗೋಮಾಂಸ, ಹಂದಿಯ ಮಾಂಸ, ಕೋಳೀತತ್ತಿ ಮುಂತಾದವುಗಳ ಭಕ್ಷಣವಾಗಿ ಬಿಟ್ಟಿದೆ. ಸಮ್ಮಗಳ ನೀರು ಕುಡಿದಿರುತ್ತಾನೆ. ಜನಿವಾರ ಹರಿದೊಗೆದಿರುತ್ತಾನೆ ಜುಟ್ಟವನ್ನು ಬೋಳಿಸಿಕೊಂಡಿರುತ್ತಾನೆ. ಇನ್ನು ನೀವು ಇವನನ್ನು ಮನೆಗೆ ಕರೆದೊಯ್ದು ಮಾಡುವದೇನು?” ಎಂದು ಹೇಳಿದ್ದನ್ನು ಕೇಳಿ, ನನ್ನ ಗೃಹಿಣಿಯು ದೊಡ್ಡ ದನಿ ತೆಗೆದು ಅಳಹತ್ತಿದಳು. ಅವಳ ಆ ಸ್ಥಿತಿಯನ್ನು ಕಂಡು ಆಗ ನನಗೆ ಏನೆನಿಸಿತೆಂಬದನ್ನು ಈಗ ಹೇಳಲಿಕ್ಕೆ ಬರುವಂತಿಲ್ಲ. ನನ್ನ ಸಂತಾಪವು ಹೆಚ್ಚಿ, ನಾನು ಲಟಪಟನೆ ನಡುಗಹತ್ತಿದೆನು! ಎದ್ದು ನಿಲ್ಲಲಿಕ್ಕೆ ಕೂಡ ನನಗೆ ಬಾರದಾಯಿತು. ಇನ್ನು ನಾವು ಅಲ್ಲಿ ನಿಲ್ಲಕೂಡದೆಂದು ಎಲ್ಲರೂ ಹೊರಟೆವು; ಆದರೆ ನನ್ನ ಗೃಹಿಣಿಯು ಮಾತ್ರ ವಿಷ್ಣುವನ್ನು ಬಿಟ್ಟು ಬರದಾದಳು ಆಗ ಅವಳು “ವಿಷ್ಣು, ತಮ್ಮಾ ವಿಷ್ಣಾ, ಇದಿಷ್ಟು ನನ್ನ ಮಾತು ನಡೆಸು” ಎಂದು ಅಂಗಲಾಚಿ ಬೇಡಿಕೊಳ್ಳಹತ್ತಿದಳು. ಅವಳ ಆ ಪ್ರಾರ್ಥನೆಯನ್ನು ಕೇಳಿ, ನನ್ನ ಸಂತಾಪಕ್ಕೆ ಬೇರೆ ಕಡೆಗೆ ದಾರಿ ಸಿಕ್ಕಿತು ನಾನು ನನ್ನ ಗೃಹಿಣಿಗೆ ಉಪರೋಧಕ ವಾಣಿಯಿಂದ:—“ಸಾಕು, ಸಾಕು. ನಿನ್ನ ಈ ಪ್ರಾರ್ಥನೆಯನ್ನು ಒಮ್ಮೆಲೆ ನಿಲ್ಲಿಸಿ, ಸುಮ್ಮನೆ ನಡೆ. ನೀನು ಇಂಥ ಪಿಶಾಚಿಯನ್ನು ಹಡೆದು, ಈಗ ಆತನೆದುರಿಗೆ ಅಂಗಲಾಚಿ ಬೇಡಿಕೊಳ್ಳಹೊರಟಿದ್ದೀಯೇನು? ನಡೆ ಬೇಗನೆ; ಆತನು ಇಂದಿಗೆ ಸತ್ತು ಹೋದನೆಂದು ತಿಳಿದು, ಮನೆಯ ದಾರೀ ಹಿಡಿ.”

ಈ ನನ್ನ ಭಾಷಣವು ನನ್ನ ಗೃಹಿಣಿಯ ದುಃಖದ ಮೇಲೆ ಬರೆಕೊಟ್ಟಂತಾಯಿತು! ನನ್ನ ಮಾತು ಕೇಳಿ ಅವಳು ಅಂಜಿದಳು; ಹಾಗು ವಿಷ್ಣುವಿನ ಕಡೆಗೆ ತಿರುತಿರುಗಿ ನೋಡುತ್ತಾ ದಾರೀ ಹಿಡಿದಳು ನನ್ನ ಗೃಹಿಣಿಯ ಆಗಿನ ಮುಖಮುದ್ರೆ ಹಾಗು ಸ್ಥಿತಿ-ಗತಿಗಳನ್ನು ವರ್ಣಿಸಲಳವಲ್ಲ. ನಾವು ಅಲ್ಲಿಂದ ಹಿಂತಿರುಗಿ ಹೊರಟ ಕೂಡಲೆ ವಿಷ್ಣುವಿನ ಮನಸ್ಸು ಚದರಿದಂತೆಯೂ ಅವನು ಅಳುಮೋರೆಯಿಂದ ‘ಅವ್ವಾ, ಅವ್ವಾ,’ ಎಂದು ಕೂಗಹತ್ತಿರುವಂತೆಯೂ ನನಗೆ ಅನಿಸಿತು; ಆದರೆ ಅದೆಲ್ಲ ನನ್ನ ಕಲ್ಪನೆಯೇ ಆಗಿತ್ತು. ‘ಇನ್ನು ಆತನನ್ನು ಮನೆಗೆ ಕರೆತರುವದು ವ್ಯರ್ಥವು!’ ಎಂದಂದುಕೊಂಡು ನಾವೆಲ್ಲರೂ ಅಂದು ಮನೆಗೆ ಹಿಂತಿರುಗಿದೆವು.

ಅಂದು ಮಧ್ಯಾಹ್ನದ ಮೂರು ಗಂಟೆಯಾಗಿದ್ದರೂ ಯಾರ ಸ್ನಾನ-ಊಟಗಳೂ ಆಗಿರಲಿಲ್ಲ. ಅಂದು ನನಗೆ ಅದಾವುದೂ ಬೇಡೆನಿಸಿತು. ನಾವು ಮನೆಯನ್ನು ಸೇರಿದೆವೋ ಇಲ್ಲವೋ, ಅಷ್ಟರಲ್ಲಿ ವಿಷ್ಣುವಿನ ಅತ್ತೆ, ಮಾವ, ಹೆಂಡತಿ, ಬೀಗ ಮುಂತಾದ ಜನರೆಲ್ಲರೂ ಬಂದೇ ಬಿಟ್ಟರು! ಸರ್ಪಪುರಿಯಿಂದ ಹೊರಡು

ವಾಗ ನಾನು ಅವರಾರನ್ನೂ ಕರೆಯದೆ ಹಾಗೆಯೇ ಬಂದದ್ದರ ಬಗ್ಗೆ ಅವರಿಗೆ ಸಿಟ್ಟು ಬಂದಿತ್ತು. ವಿಷ್ಣುವಿನ ಮಾವನು ನನ್ನ ಕಡೆಗೆ ಕಿಡಿಗಣ್ಣಿನಿಂದ ನೋಡಿದನು. ನಮಸ್ಕಾರ ಕೂಡ ಮಾಡಲಿಲ್ಲ; ಒಂದಕ್ಕರವನ್ನೂ ನುಡಿಯಲಿಲ್ಲ. ಆತನ ಉಳಿದ ಜನರೆಲ್ಲರೂ ಬಾಗಿಲಲ್ಲೇ ನಿಂತುಕೊಂಡರು. ನಮ್ಮ ಸೊಸೆಯು ಮಾತ್ರ ಮುಂಪೆ ಬಂದು ನನಗೆ ನಮಸ್ಕರಿಸಿದಳು. ಆ ಕೂಡಲೆ ನನ್ನ ಹೊಟ್ಟೆಯಲ್ಲಿ ಕಸವಿಸಿಯಾ ಯಿತು! ಆಗ ನಾನು ಅವಳನ್ನು ಹತ್ತರ ಕೂಡ್ರಿಸಿಕೊಂಡು:—"ತಂಗೀ, ಆ ಚಂಡಾಲನು ನಿನ್ನ ಕು ತ್ತಿ ಗೆ ಕೊಯ್ದನವ್ವಾ!" ಎಂದಂದೆನು. ನನ್ನ ಕಣ್ಣು ಗಳಿಂದ ಒಂದೇಸವನೆ ಅಶ್ರುಗಳು ಬರಹತ್ತಿದವು. ಆ ಹುಡುಗಿಯು ತೀರ ಚಿಕ್ಕ ವಳು; ಅವಳಿಗೆ ನನ್ನ ಮಾತಿನ ಅರ್ಥವೇ ತಿಳಿಯಲಿಲ್ಲ. ವಿಷ್ಣುವಿನ ಅತ್ತೆಗೆ 'ಬನ್ನಿರಿ, ಕುಳ್ಳಿರಿ', ಎಂದು ಯಾವ ಮೋರೆಯಿಂದ ಹೇಳಲೆಂದು ನನ್ನ ಗೃಹಿಣಿಗನಿ ಸಿತು. 'ಒಳಗೆ ಬನ್ನಿರಿ, ಕುಳ್ಳಿರಿ' ಎಂದು ತನ್ನ ಬೀಗಿತ್ತಿಯು ಅನಲೊಲ್ಲಳಲ್ಲ ಎಂದು ಆ ಬೀಗಿತ್ತಿಯು ಅಂದುಕೊಂಡಳು. ಹೀಗೆ ಆ ಕಾಲದ ನಮ್ಮ ಮನೆಯೊಳಗಿನ ಅದ್ಭುತದೃಶ್ಯವನ್ನು ವರ್ಣಿಸುವದೇ ಅಸಾಧ್ಯವು.

ವಿಷ್ಣುವಿನ ಮಾವನು ನಮ್ಮ ಬಾಳನನ್ನು ಒಂದು ಸಾರೆ ಹೆಸರುಗೊಂಡು ಕರೆದ ಮೇಲೆ ಬಾಳನು ಅಟ್ಟದ ಮೇಲಿನ ತನ್ನ ಕೋಣೆಯಿಂದ ಕೆಳಗೆ ಬಂದನು. ಉಭಯತರಲ್ಲಿ ನಮಸ್ಕಾರ-ಚಮತ್ಕಾರಗಳಾದವು. ಆಗ ಯಾರೂ ಏನನ್ನೂ ಮಾತನಾಡಲಿಲ್ಲ. ನಮ್ಮ ಬಾಳನು ಮೊದಲೇ ಹುಚ್ಚು-ಮಂಕನಾಗಿದ್ದನು. ಅವ ನಿಗೆ ಆಗ ಏನೊಂದೂ ಸೂಚಿಸದಾಯಿತು. ಅವನಿಗೆ ಇಂಥ ಪ್ರಸಂಗವು ಈ ಮೊದ ಲೆಂದೂ ಬಂದಿರಲಿಲ್ಲ. ಇಷ್ಟರಲ್ಲಿ ನನ್ನ ಹಳೇ ಸ್ನೇಹಿತನಾದ ಮೋರಪ್ಪನೂ ಅಲ್ಲಿಗೆ ಬಂದನು. ಅವನು "ಬಾಳಾಸಾಹೇಬ, ವಿಷ್ಣುವಿನ ಮೇಲೆ ಕಳವಿನ ಫಿರ್ಯಾದಿಯನ್ನೂ, ಆ ಸಾಹೇಬನ ಮೇಲೆ ಕಳವಿನ ಮಾಲು ಬಚ್ಚಿಟ್ಟ ಬಗ್ಗೆ ಫಿರ್ಯಾದಿಯನ್ನೂ ಮಾಡಿ ದರೆ ನಡೆಯಲಿಕ್ಕಿಲ್ಲವೇನು?" ಎಂದಂದು, ತಾನು 'ಈ ಯುಕ್ತಿಯನ್ನು ಹೇಗೆ ಹೊರಡಿಸಿದೆನು ನೋಡಿರಿ' ಎಂದೆನ್ನುವ ಆವಿರ್ಭಾವದ ಮುಖಮುದ್ರೆಯಿಂದ ನನ್ನ ಕಡೆಗೆ ನೋಡತೊಡಗಿದನು. ನಾನು ಏನೂ ಉತ್ತರಕೊಡಲಿಲ್ಲ. ನಮ್ಮ ಬೀಗರು ಮಾತ್ರ:-"ಹೀಗೆ ಏನಾದರೂ ಮಾಡಿ ಬೆದರಿಸಿದ ಹೊಗತು, ಕಾರ್ಯವಾಗಲಿ ಕ್ಕಿಲ್ಲ" ಎಂದಂದರು; ಆದರೆ ಬಾಳನು ಮಾತ್ರ ಏನೂ ಹೇಳದೆ ಸುಮ್ಮನಿದ್ದನು. 'ಮೇಲೆ ಬನ್ನಿರಿ' ಎಂದಂದು, ನಮ್ಮ ಬೀಗರು ಹಾಗೂ ಮೋರಪ್ಪನೊಡನೆ ಆತನು ಅಟ್ಟಕ್ಕೆ ಹೋದನು.

ಬೀಗಿತ್ತಿಗೆ 'ಒಳಗೆ ನಡೆಯಿರಿ' ಎಂದು ನಾನು ಹೇಳಿದೆನು. ಬೀಗಿತ್ತಿಯನ್ನು ಕಂಡಕೂಡಲೆ ನನ್ನ ಗೃಹಿಣಿಯು ಅಳಹತ್ತಿದಳು. ಸೊಸೆಯೂ ಒಳಗೆ ಹೋಗಿ ತನ್ನ ತಾಯಿಯ ಬಳಿಯಲ್ಲಿ ಕುಳಿತಳು. ಒಳಗೆ ಹೆಂಗಸರ ರೋದನವು ಭರದಿಂದ ನಡೆಯಿತು. ಇಷ್ಟರಲ್ಲಿ ನಮ್ಮ ಚಂಪೆಯ ಗಂಡನು ಬಂದವನೇ ಲಗುಬಗೆಯಿಂದ

ಅಟ್ಟವನ್ನೇರಹತ್ತಿದನು. ನಾನು ಅವನನ್ನು ತಡೆದು 'ಮತ್ತೇನು ವಿಶೇಷ?' ಎಂದು ಕೇಳಲು, 'ವಿಶೇಷವೇನೂ ಇಲ್ಲ. ನಾಳಿಗೆ ಕಾಮ್ಯಟೋನ್ಮೆಂಟಿನಲ್ಲಿ ವಿಷ್ಣುವಿನ ಬ್ಯಾಪ್ಟಿಸ್ಮಾ ಆಗತಕ್ಕದ್ದಿದೆಯೆಂದೆನ್ನುವರು; ಆದರೆ ವಿಷ್ಣುವಿನ ಮನಸ್ಸು ಪರಿವರ್ತನಗೊಂಡಿದೆಯಂತೆ ಈಗ ಮೇಲಕ್ಕೆ ಹೋಗಿ ಬಾಳಾಸಾಹೇಬರನ್ನು ಕಂಡು ಬರುತ್ತೇನೆ" ಎಂದವನೇ ನಡೆದನು. ಉಪ್ಪರಿಗೆಯ ಮೇಲೆ ಏನು ಮಾತು-ಕತೆಗಳಾದವೋ ನನಗೆ ಗೊತ್ತಾಗಲಿಲ್ಲ.

ಬಳಿಕ ಮೋರಪ್ಪನು ಕೆಳಗೆ ಬಂದು ನಮ್ಮನ್ನುದ್ದೇಶಿಸಿ:-ಗುರುಭಟ್ಟರೇ, ನಿಮ್ಮ ವಿಷ್ಣುವಿನ ವಯಸ್ಸೇನು? ಆತನ ಜನ್ಮಪತ್ರಿಕೆಯಿರಬಹುದಲ್ಲವೆ? ಎಂದು ಕೇಳಲು, ನಾನು 'ಆತನಿಗೀಗ ಹದಿನೆಂಟು ತುಂಬಿ ಹತ್ತೊಂಬತ್ತರಲ್ಲಿ ಬಿದ್ದಿದ್ದೆ,' ಎಂದು ಅಂದದ್ದನ್ನು ಕೇಳಿ, ಮೋರಪ್ಪನು ಮೂಗು ತಿರುವುತ್ತ:—'ಹದಿನೈದು-ಹದಿನಾರು ಇದ್ದೀತೆಂದು ತಿಳಿದಿದ್ದೆನು.' ಎಂದಂದು, ವಯಸ್ಸು ಚಿಕ್ಕದಿದ್ದರೆ ಆ ಸಾಹೇಬನನ್ನು ಪೇಚಿನಲ್ಲಿ ಕೆಡಹಿ, ವಿಷ್ಣುವನ್ನು ಬಿಡಿಸಿಕೊಂಡು ಬರಲಿಕ್ಕೆ ಸುಲಭವಾಗುತ್ತಿತ್ತು. ಇತ್ಯಾದಿ ಹೇಳಿದನು.

ಆ ರಾತ್ರಿಯನ್ನು ನಾವೆಲ್ಲರೂ ಒಳ್ಳೇ ಚಿಂತೆಯಲ್ಲಿ ಕಳೆದೆವು. ಮರುದಿನ ಬಾಳಾಸಾಹೇಬನೂ ನಮ್ಮ ಚಂಪೆಯ ಗಂಡನೂ ಕೂಡಿ ಏನೇನೋ ಬೇತು ಮಾಡಿದರು; ಹಾಗು ನಾವೆಲ್ಲರೂ ಇನ್ನೊಮ್ಮೆ ವಿಷ್ಣುವಿನ ಬಳಿಗೆ ಹೋಗಿ ಬರಬೇಕೆಂದು ನಿರ್ಧರಿಸಿದೆವು. ಕೂಡಲೆ ಒಂದು ಬಾಡಿಗೆಯ ಮೋಟಾರು ಗಾಡಿಯು ತರಿಸಲ್ಪಟ್ಟಿತು. ನಾವೆಲ್ಲರೂ ಅಲ್ಲಿಗೆ ಹೊರಟೆವು. ನಡು ದಾರಿಯಲ್ಲೇ ಎದುರಿನಿಂದ ಬರುತ್ತಿದ್ದ ಒಂದು ಮೋಟಾರ ಕಾರಿನ ಡ್ರೈವರನು ನಮ್ಮ ಮೋಟಾರಿಗೆ ಸಂಜ್ಞೆ ಮಾಡಲು, ಎರಡೂ ಗಾಡಿಗಳು ಅಕ್ಕಪಕ್ಕದಲ್ಲಿ ನಿಂತುಕೊಂಡವು ಆ ಕಾರಿನಲ್ಲಿ ನಮ್ಮ ವಿಷ್ಣುವೂ ಆ ಪಾದ್ರೀಸಾಹೇಬನೂ ಕುಳಿತಿದ್ದರು. ಆಗ ಆ ಸಾಹೇಬನು ನನ್ನನ್ನುದ್ದೇಶಿಸಿ:— "ಭಟ್ಟರೇ, ಈ ಹುಡುಗನ ಬ್ಯಾಪ್ಟಿಸ್ಮಾ ವಿಧಿಯು ಇಂದೇ ಬೆಳಗ್ಗೆ ಪೂರೈಸಿತು. ಇನ್ನು ನೀವು ಯಾವ ಗೊಂದಲಕ್ಕೂ ಹೋಗಬೇಡಿರಿ. ನಿಮ್ಮ ಪ್ರಯತ್ನಗಳೆಲ್ಲವೂ ವ್ಯರ್ಥವೇ ಆಗುವವು" ಎಂದು ಹೇಳಿದವನೇ ತನ್ನ ಕಾರನ್ನು ಭರದಿಂದ ಬಿಡಿಸಿದನು. ನಾವೆಲ್ಲರೂ ಬಂದ ದಾರಿಗೆ ಸುಂಕವಿಲ್ಲೆಂದು ಉಸಿರ್ಗರೆಯುತ್ತ ಮನೆಗೆ ಹಿಂದಿರುಗಿದೆವು. ಮನೆಗೆ ಬಂದ ಮೇಲೆ ಶೋಕದ ಪರಮಾವಧಿಯಾಯಿತು! ನಮ್ಮ ವಿಷ್ಣುವು ಯಾವದೊಂದು ಬೇನೆಯಿಂದ ಬಳಲಿ ಸತ್ತಿದ್ದರೆ ನಮಗೆ ಅಷ್ಟು ದುಃಖವಾಗುತ್ತಿರಲಿಲ್ಲ ಆತನ ಆ ಮರಣದಿಂದ ನಾವು ಮಂದಿಗೆ ಮೋರೆ ತೋರಿಸದಂತಹ ತಪ್ಪಿತಸ್ಥರಾಗುತ್ತಿರಲಿಲ್ಲ. ಆತನು ಹಾಗೆ ಹಾಸಿಗೆ ಹಿಡಿದು ಬಿದ್ದು ಸತ್ತಿದ್ದರೆ, ಅದರಿಂದ ನಮ್ಮ ಮನೆತನಕ್ಕೆ, ನಮ್ಮ ಕುಲಕ್ಕೆ ಕಲಂಕವುಂಟಾಗುತ್ತಿರಲಿಲ್ಲ. ಆತನ ಆ ಅಲ್ಪವಯಸ್ಕ ಹೆಂಡತಿಯನ್ನು ನೋಡಿ ನಮಗೆಲ್ಲರಿಗೂ ಅತ್ಯಂತ ದುಃಖವಾಗುತ್ತಿತ್ತು. ಆ ಚಿಕ್ಕ ಬಾಲಿಕೆಯು ತನ್ನ ಇಡೀ ಜನ್ಮವನ್ನು ವಿಧವೆಯಂತೆ ಕಳೆಯು

ಬೇಕು; ಇಲ್ಲವೆ ತಾನೂ ಕುಲಗೆಟ್ಟು ಗಂಡನೊಡನೆ ಸೇರಬೇಕು ಇವುಗಳ ಹೊರತು ಬೇರೆ ಮಾರ್ಗವಿರಲಿಲ್ಲ. 'ನೀನು ಕುಲಗೆಟ್ಟು ಹೋಗು' ಎಂದು ಅವಳಿಗೆ ಆಕೆಯ ತಂದೆ ತಾಯಿಗಳೂ ಅತ್ತೆ-ಮಾವಂದಿರಾದ ನಾವುಗಳೂ ಹೇಳುವಂತಿರಲಿಲ್ಲ. ಮಗಳು ಇಲ್ಲವೆ ಸೊಸೆಯು ವಿಧವೆಯಾದಳೆಂದರೆ, ಆ ದುಃಖವು ಘನವಾದದ್ದೇನೋ ನಿಜ; ಆದರೆ ಆಗ ಅವಳು ನಮ್ಮ ಹತ್ತರವೇ ಇದ್ದು, ಉಂಡು-ತಿಂದಿರುವಳು; ಅವಳು ಕುಲಗೆಟ್ಟಳೆಂದರೆ, ಆ ಸಹಚರ್ಯದ ಯೋಗವು ಕೂಡ ಇಲ್ಲದಂತಾಗುವುದು. ನನಗೆ ಆ ಹುಡುಗಿಯ ಸಲುವಾಗಿ ಇನ್ನು ಜನರಲ್ಲಿ ಮೋರೆ ತೋರಿಸಲಿಕ್ಕೆ ಕೂಡ ನಾಚಿಕೆಯುಂಟಾಗುವ ಪ್ರಸಂಗವೊದಗಿತು.

ಒಳ್ಳೇ ಧೈರ್ಯದ ಗಂಡಸಾದ ನನ್ನ ಅವಸ್ಥೆಯೇ ಹೀಗಾದ ಬಳಿಕ ಪಾಪ! ಕೋಮಲ ಸ್ವಭಾವದ ನನ್ನ ಗೃಹಿಣಿಯ ದೆಸೆಯು ಯಾವ ಮಟ್ಟಿಗೆ ಮುಟ್ಟಿತೆಂಬದನ್ನು ಹೇಳುವದು ಕಠಿಣವೇ ಸರಿ. ಈ ಮೊದಲು ನನ್ನ ಹಿರಿಯ ಮಗಳು ಮನೆಗೆ ಬಂದದ್ದರಿಂದ ಅವಳು ದುಃಖಿ-ಕಷ್ಟಿಯಾಗಿದ್ದಳು; ಆದರೆ ಈಗಿನ ನಮ್ಮ ವಿಷ್ಣುವಿನ ಧರ್ಮಾಂತರದಿಂದ ಅವಳಿಗಾದ ದುಃಖಕ್ಕೆ ಮಿತಿಯೇ ಇಲ್ಲದಾಯಿತು. ಅದರಿಂದ ಅವಳಿಗೆ ಒಂದು ಬಗೆಯ ಹೃದ್ರೋಗವೇ ಉಂಟಾಯಿತು. ಆಕೆಗೆ ದಿನಾಲು ಸಣ್ಣ ಜ್ವರ ಬರಹತ್ತಿದವು. ಅನ್ನವು ರುಚಿಸದಾಯಿತು. ಏತರಿಂದಲೂ ಸೊಗಸೆನಿಸದಾಯಿತು. 'ಹಾಯ್! ಹಾಯ್!!' ಎಂದು ಒಂದೇಸವನೆ ಉಸಿರ್ಗರೆಯಹತ್ತಿದಳು. ಯಾರ ಕೂಡವೂ ಅವಳು ಮನಬಿಚ್ಚಿ ಮಾತಾಡದಾದಳು. ನಾನು, ನಮ್ಮ ಬಾಳ, ನಮ್ಮ ಹಿರಿಯ ಸೊಸೆ, ಚಿಕ್ಕ ಸೊಸೆ, ಮಾಲತಿ, ಚಂಪೆ ಹಾಗು ನಮ್ಮ ಮೂರನೇ ಮಗ ಇವರಾರೊಡನೆಯೂ ಅವಳು ಹೆಚ್ಚು ಮಾತಾಡುತ್ತಿರಲಿಲ್ಲ. ಯಾವುದೋ ಒಂದು ಗಹನವಾದ ಆಲೋಚನೆಯಲ್ಲಿ ತೊಡಗಿರುವವಳಂತೆ ಅವಳ ಮುಖಚರ್ಯೆಯಿಂದ ತೋರಹತ್ತಿತು. ಬರಬರುತ್ತ ಆಕೆಗೆ ಪರಿಣಾಮಶೂಲೆಯು ಏಳಹತ್ತಿತು. ಅದರಿಂದ ಅವಳು ತೀರ ಹೈರಾಣಾದಳು.

ಒಂದು ದಿನ ಬೆಳಗು ಮುಂಜಾನೆ ಅವಳು ನನ್ನನ್ನು ಕರೆದು ತನ್ನ ಹತ್ತಿರ ಕುಳ್ಳಿರಿಸಿಕೊಂಡು, ನನಗೆ ಏನನ್ನೋ ಹೇಳಬೇಕೆಂದಳು; ಆದರೆ ಅವಳಿಗಾದ ದುಃಖದ ಅತಿರೇಕದಿಂದ ಆಕೆಯ ಬಾಯಿಂದ ಶಬ್ದಗಳೇ ಹೊರಡಲಿಲ್ಲ. ಆಗ ಅವಳ ಕಣ್ಣುಗಳಿಂದ ದುಃಖಾಶ್ರುಗಳು ಒಂದೇಸವನೆ ಪ್ರವಹಿಸಹತ್ತಿದವು. ಕೆಲ ನಿಮಿಷಗಳ ಮೇಲೆ ಅವಳು:—"ನಮ್ಮ ವಿಷ್ಣುವು ಸ್ವಧರ್ಮದಲ್ಲಿದ್ದು ಬೇಕಾದ್ದನ್ನು ಮಾಡಿದ್ದರೂ ನನಗೀಪರಿ ದುಃಖವಾಗುತ್ತಿರಲಿಲ್ಲ....." ಎಂದಂದು ಮೋರೆ ಮುಚ್ಚಿಕೊಂಡಳು. ನಾನೂ ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ" ಎಂದಂದೆನು.

———

## ೧೩ ನನ್ನ ಗೃಹಿಣಿ.



ಹೀಗೆ ನನ್ನ ಗೃಹಿಣಿಯು ಕೆಲ ಕಾಲ ಹಾಸಿಗೆ ಹಿಡಿದು ಬಿದ್ದಿರಲು, ಮಾನಸಿಕ ವೇದನೆಗಳ ಮೂಲಕ ಅವಳಿಗೆ ಕ್ಷಯರೋಗವಾಯಿತು. ಅದರಿಂದ ದಿನದಿನಕ್ಕೆ ಅವಳ ಶಕ್ತಿಪಾತವಾಗಹತ್ತಿತು. ನಮ್ಮ ಬಾಳನು ಎಷ್ಟೋ ಜನ ಪ್ರಸಿದ್ಧ ಡಾಕ್ಟರರಿಂದ ಔಷದೋಪಚಾರ ಮಾಡಿಸಿದನು. ಏನಾದರೂ ಆಕೆಗೆ ಗುಣವಾಗುವ ಲಕ್ಷಣವು ತೋರಲಿಲ್ಲ. ಮುಂದೆ ಸ್ವಲ್ಪೇ ದಿನಗಳಲ್ಲಿ ಅವಳು ತೀರ ನಿರ್ವಿಣ್ಣಳಾದಳು.

ನನ್ನ ಗೃಹಿಣಿಯು ಬೇನೆ ಬಿದ್ದಂದಿನಿಂದ ನನ್ನ ಸ್ಥಿತಿಯೇ ಬದಲಾಯಿತು. ನಾನು ಇದುವರೆಗೆ ನಾನಾ ಬಗೆಯ ಸಾಂಸಾರಿಕ ಚಿಂತೆಗಳಿಂದ ಬಳಲಿದವನಾಗಿದ್ದರೂ ಈಗ ಪ್ರಾಪ್ತವಾಗಿರುವ ನನ್ನ ಚಿಂತೆಯು ವಿಶೇಷ ಪ್ರಕಾರದ್ದಾಯಿತು. ನನ್ನ ವಯಸ್ಸಿನ ಹದಿನಾರನೇ ವರ್ಷದಿಂದ ನಾನು ನನ್ನ ಗೃಹಿಣಿಯೊಡನೆ ಸಂಸಾರ ಚಕ್ರದಲ್ಲಿ ಸಿಲುಕಿದ್ದೆನು. ನನ್ನ ತಂದೆ-ತಾಯಿಗಳು ನನ್ನ ಚಿಕ್ಕ ವಯಸ್ಸಿನಲ್ಲೇ ತೀರಿ ಹೋದ್ದರಿಂದ, ನನ್ನ ಲಗ್ನವಾದ ಕೆಲ ದಿನಗಳಲ್ಲಿಯೇ ನನ್ನ ಮೇಲೆ ಸಂಸಾರದ ಭಾರವು ಬಿದ್ದಿತು. ಆಗಿನಿಂದಲೂ ನಾನು ಸಂಸಾರದ ಪ್ರತಿಯೊಂದು ಕೆಲಸದಲ್ಲಿ ನನ್ನ ಗೃಹಿಣಿಯ ಅಭಿಪ್ರಾಯವನ್ನು ತಕ್ಕೊಂಡು ನಡೆಯಹತ್ತಿದೆನು. ನನ್ನ ಗೃಹಿಣಿಯೇನೂ ಈಗಿನ ಹೆಣ್ಣುಮಕ್ಕಳಂತೆ ಸುಶಿಕ್ಷಿತಳಾಗಿರಲಿಲ್ಲ; ಪ್ರೌಢಳಾಗಿರಲಿಲ್ಲ. ಆದರೂ ಹುಟ್ಟು ಸುಜನತ್ವದ ಮೂಲಕ ಅವಳು ಪ್ರತಿಯೊಂದು ಕೆಲಸದಲ್ಲಿಯ ನನಗೆ ಒಳ್ಳೇ ಸಲಹೆಯನ್ನೇ ಕೊಡುತ್ತಿದ್ದಳು. ಪ್ರಸಂಗ ವಿಶೇಷದಲ್ಲಿ ನಾನೇ ಸಾಮಾಜಿಕ ಸೂಕ್ಷ್ಮ ಕಾರ್ಯಗಳಲ್ಲಿ ತಪ್ಪಿ ನಡೆಯುತ್ತಿದ್ದೆನೇ ಹೊರತು, ಅವಳು ಸಮಾಜ ಕಟ್ಟಳೆಯನ್ನೆಂದೂ ಮೀರಿ ನಡೆಯುತ್ತಿರಲಿಲ್ಲ.

ನನ್ನ ಗೃಹಿಣಿಯ ನಿಕಟ ಸಹವಾಸದ ಮೂಲಕವೇ ನನ್ನಲ್ಲಿಯ ಪ್ರತಿಯೊಂದು ಬಗೆಯ ಉಚ್ಛೃಂಖಲ ಸ್ವಭಾವಕ್ಕೆ ತಡೆಯುಂಟಾಗುತ್ತಿತ್ತು. ನಾನು ಈಗ ಅರವತ್ತು ವಯಸ್ಸಿನವನಾಗಿದ್ದರೂ ನನ್ನಲ್ಲಿಯ ಶೀಘ್ರ ಕೋಪೀವೃತ್ತಿಯೂ, ಪ್ರಸಂಗ ವಿಶೇಷದಲ್ಲಿ ಸಾರಾಸಾರ ವಿಚಾರ ವಿಸ್ಮರಣವೂ ಪ್ರಜ್ವಲಿತವಾಗುತ್ತಿರುತ್ತವೆ. ಈ ನನ್ನ ದುರ್ಗುಣಗಳ ಬಗ್ಗೆ ನನ್ನ ಗೃಹಿಣಿಯು ಸಮಯವರಿತು ನನಗೆ ಹೇಳಿ, ನನ್ನನ್ನು ದಾರಿಗೆ ಹಚ್ಚುವ ಪ್ರಯತ್ನ ಮಾಡುತ್ತಿದ್ದಳು. ಅಂಥ ಪ್ರಸಂಗದಲ್ಲಿ ಒಮ್ಮೊಮ್ಮೆ ನಾನು ಸಿಟ್ಟಿನಿಂದ ಅವಳ ಮೈಮೇಲೆಯೇ ಏರಿ ಹೋಗುತ್ತಿದ್ದೆನು. ಆದರೂ ಅವಳು ಆ ಬಗ್ಗೆ ವಿಷಾದಗೊಳ್ಳದೆ, ಆಗಿನ ಮಟ್ಟಿಗೆ ಸುಮ್ಮನಾಗಿ, ಮತ್ತೆ ಪ್ರಸಂಗ ಸಾಧಿಸಿ ನನಗೆ ತಿಳಿ ಹೇಳದೆ ಬಿಡುತ್ತಿರಲಿಲ್ಲ.

ಈಗ ನಮ್ಮ ಬಾಳನು ಗಳಿಸುವವನಾದನು. ತಿಂಗತಿಂಗಳಿಗೆ ಐನೂರುಗಟ್ಟಿ ಸಂಬಳ ಬರಹತ್ತಿತು. ಮನೆಯಲ್ಲಿ ಸೊಸೆಯೂ ಮಾಲತಿಯೂ ನೋಡಿಕೊಳ್ಳು ವವರಾದರು. ಸಣ್ಣ-ಪುಟ್ಟ ಕೆಲಸಗಳಿಗೂ ಆಳು-ಹೋಳುಗಳಾದವು. ಅದರಿಂದ ಈಗ ಮನೆಯ ಗಂಡಸರಿಗಾಗಲಿ- ಹೆಂಗಸರಿಗಾಗಲಿ ಯಾವ ಬಗೆಯ ಕಷ್ಟದ ಹೋರೆ ಯನ್ನೂ ಮಾಡಬೇಕಾಗುವದಿಲ್ಲ; ಆದರೆ ಯಾವ ಕಾಲಕ್ಕೆ ನನ್ನ ಸಂಪಾದನೆಯು ನಮ್ಮ ನಿತ್ಯದ ಸಂಸಾರೋಪಯೋಗೀ ಸಾಮಾನುಗಳ ಪೂರೈಕೆಗೆ ಕೂಡ ಸಾಲು ತ್ತಿರಲಿಲ್ಲವೋ, ಆಗ ಮನೆಯಲ್ಲಿ ಒಬ್ಬೊಂಟಿಗಳಾಗಿದ್ದ ನನ್ನ ಗೃಹಿಣಿಯು ಮನೆ ಯೊಳಗಿನ ಪ್ರತಿಯೊಂದು ಸಣ್ಣ-ಪುಟ್ಟ ಕೆಲಸವನ್ನು ಮಾಡಿಕೊಂಡು, ಹುಡುಗರ- ಹುಪ್ಪಡಿಗಳ ಜೋಪಾಸನೆಯನ್ನು ನೋಡಿಕೊಂಡು ನನಗೆ ಯಾವ ಬಗೆಯ ತೊಂದ ರೆಯೂ ಆಗದಂತೆ ನಿರ್ವಹಿಸಿಕೊಳ್ಳುತ್ತಿರುವದೇನು ಸಾಮಾನ್ಯ ಅನುಕೂಲತೆಯೇ? ಇಂಥ ಸುಗೃಹಿಣಿಯರು ನಮ್ಮ ದೇಶದಲ್ಲಿ ಮನೆಮನೆಗೂ ಲಭಿಸಿರುತ್ತಾರೆಂಪೇ ನಮ್ಮಲ್ಲಿಯ ಬಹು ಜನರ ಸಂಸಾರಗಳು ಸುಖಮಯವಾಗಿ, ಲೋಕದವರ ನಿದರ್ಶನಕ್ಕೆ ಉಹಾಹರಣಪ್ರದವಾಗಿರುತ್ತವೆ.

ನಮ್ಮ ಹುಡುಗರು ದೊಡ್ಡವರಾಗಹತ್ತಿದಾಗ ಹಾಗು ನಾವು ನಮ್ಮ ಸರ್ಪ ಪುರಿಯನ್ನು ಬಿಟ್ಟು ಬೆಂಗಳೂರಿಗೆ ಬಂದ ಮೇಲೆ ನನ್ನ ಗೃಹಿಣಿಯು ಸಂತಾನವಾತ್ಸ ಲ್ಯದ ಮೂಲಕ ನನ್ನಲ್ಲಿ ತುಸ ಅನಾದರ ತಾಳಿದಳೆಂದು ನನಗೆ ಆಗಾಗ್ಗೆ ಅನಿಸ ಹತ್ತಿತ್ತು; ಆದರೆ ಕಾಲಾಂತರದಿಂದ ಆ ನನ್ನ ತಿಳುವಳಿಕೆಯು ಬದಲಿಸಿತು ಮೊದ ಮೊದಲು ನನ್ನ ಗೃಹಿಣಿಗೆ ಎಲ್ಲವೂ ತನ್ನ ಅಧಿಕಾರದಿಂದಲೇ ನಡೆಯುತ್ತಿರುವದೆಂದು ಭಾಸವಾದ್ದರಿಂದ, ಅವಳಲ್ಲಿ ಆ ಸ್ಥಿತ್ಯಂತರವು ಕಾಣಹತ್ತಿತ್ತು; ಆದರೆ ಬರಬರುತ್ತ ನವನಾಗರಿಕತೆಯ ಅಭಿಮಾನಿಗಳಾದ ನಮ್ಮ ಸೊಸೆ-ಮಕ್ಕಳು ಅವಳ ಮಾತು ಕೇಳ ದಾದರು. ಇಷ್ಟೇ ಅಲ್ಲ, ಪ್ರಸಂಗಾನುಸಾರವಾಗಿ ಅವರಿಂದ ಅವಳ ಅವಮಾನ ವಾದ ಹಾಗೆಯೂ ಆಯಿತು. ಅದರಿಂದ ಅವಳು ದುಃಖಿತಳಾದಳು; ಅಲ್ಲದೆ ತಾನು ಅದುವರೆಗೆ ನನ್ನನ್ನು ತುಸ ಅನಾದರದಿಂದ ನೋಡಿಕೊಂಡ ಬಗ್ಗೆ ಪಶ್ಚಾತ್ತಾಪ ಗೊಂಡು, ನನ್ನಲ್ಲಿ ಆ ವಿಷಯಕ್ಕೆ ಕ್ಷಮೆ ಯಾಚಿಸಿ, ಮೊದಲಿನಂತೆ ನನ್ನ ಅನುವರ್ತಿನಿ ಯಾಗಿ ನಡೆಯಹತ್ತಿದಳು.

ಈ ಸಂಸಾರದೊಳಗಿನ ಸುಖದ ಪ್ರಸಂಗಕ್ಕಿಂತಲೂ ದುಃಖದ ಪ್ರತಿಯೊಂದು ಕ್ಷಣದಲ್ಲಿ ನನ್ನ ಗೃಹಿಣಿಯು ನನಗೆ ತನು ಮನ ಧನಗಳಿಂದ ಸಹಾನುಭೂತಿ ತೋರು ತ್ತಿದ್ದಳು. ಸುಖದ ಪಾಲುಗಾರರು ಬೇಕಾದಷ್ಟು ಜನರು ದೊರೆಯಬಹುದು; ಆದರೆ ದುಃಖದ ಭಾಗಿದಾರರಾಗುವವರು ಮಾತ್ರ ತೀರ ವಿರಳರು. ನನ್ನ ಗೃಹಿಣಿಯು ಸೌಜ ನ್ಯ, ಶಾಂತಸ್ವಭಾವ, ಕಷ್ಟಸಹಿಷ್ಣುತೆ, ಹವ್ಯಾಸಾಭಾವ, ಶೀಲ, ಮರ್ಯಾದೆ, ಏವಂ ಗುಣ ವಿಶಿಷ್ಟತೆಯಲ್ಲಿ ಬಹು ಯೋಗ್ಯಳಾಗಿದ್ದಳು. ಅದರಿಂದಲೇ ನನಗೆ ಸಂಸಾರದೊಳ

ಗಿನ ತರಬರುವ ಹರತಗಳ ವಿನಃ ಬೇರೆ ಯಾವ ಕಿರುಕುಳ ಚಿಂತೆಗಳೂ ಇರಲಿಲ್ಲ. ಎಷ್ಟೋ ಜನ ಗೃಹಸ್ಥರಿಗೆ ತರ-ಬರುವ ಚಿಂತೆಯೇನೂ ಇರದಿದ್ದರೂ, ಮನೆಯ ಹೆಣ್ಣುಮಕ್ಕಳಲ್ಲಿಯ ವಿವೇಕಹೀನತೆಯ ಮೂಲಕ ಅಂಥ ಅವಾಂತರಗಳ ಚಿಂತೆಯೇ ಮಿತಿಮೀರುವದು.

ಇಂಥ ನನ್ನ ಸದ್ಗುಣಪೂರ್ಣಳಾದ ಗೃಹಿಣಿಯು ನಮ್ಮ ವಿಷ್ಣುವಿನ ಧರ್ಮಾಂತರದ ಮೂಲಕ ತೀರ ಹತಾಶಗೊಂಡಳು. ದಿನವೊಂದಕ್ಕೆ ಅವಳ ಶಕ್ತಿಪಾತವು ಹೆಚ್ಚತೊಡಗಿತು. ಹೀಗೆ ಮನೆಯಲ್ಲಿ ನನ್ನ ಗೃಹಿಣಿಯು ಅತ್ಯವಸ್ಥಳಾಗಿರಲು, ನಮ್ಮ ಹಿರಿಯ ಸೊಸೆಯು-ಬಾಳನ ಹೆಂಡತಿಯು-ಹೆಣ್ಣು ಮಗುವನ್ನು ಹೆತ್ತಳು. ಮನೆಯಲ್ಲಿ ಮಾಡು--ಮುಟ್ಟುವವರ ಅಡಚಣಿಯು ಹೆಚ್ಚಿತು. ಅದರಿಂದ ನನ್ನ ಗೃಹಿಣಿಯ ಶುಶ್ರೂಷೆಯ ಕಡೆಗೆ ಸ್ವಾಭಾವಿಕವಾಗಿಯೇ ತುಸ ಅನಾದರವುಂಟಾಯಿತು. ಇಂಥ ಸ್ಥಿತಿಯಲ್ಲಿ ಒಂದು ದಿನ ನನ್ನ ಗೃಹಿಣಿಯು ಬಾಣಂತಿಯ ಕೋಣೆಯ ವರೆಗೂ ತೆಳಲುತ್ತ ಹೋಗಿ, ಕೂಸು-ಬಾಣಂತಿಯರ ಯೋಗಕ್ಷೇಮವನ್ನು ವಿಚಾರಿಸಿಕೊಂಡು ಬಂದಳು. ಅದರಿಂದ ಮೊದಲೇ ತೀರ ನಿರ್ವಿಣ್ಣಳಾಗಿದ್ದ ಅವಳ ಶಕ್ತಿಯು ಲೋಪವಾಯಿತು. ಊರ್ಧ್ವಶ್ವಾಸ ಹತ್ತಿತು. ಎಷ್ಟು ಉಪಚಾರ ಮಾಡಿದರೂ ಏನೂ ಗುಣವಾಗಲಿಲ್ಲ. ತನ್ನ ಮರಣದ ಚಿಹ್ನವನ್ನು ತಿಳಿದು, ಅವಳು ನಮ್ಮ ಮನೆಯವರೆಲ್ಲರನ್ನು ತನ್ನ ಬಳಿಗೆ ಕರೆಯಿಸಿಕೊಂಡು, ನಮ್ಮೆಲ್ಲರನ್ನು ಒಮ್ಮೆ ಕಣ್ತುಂಬ ನೋಡಿದಳು. ಆಗ ಆಕೆಗೆ ಪರಮ ದುಃಖವಾಗುತ್ತಿತ್ತು. ಅದನ್ನು ಒಡನುಡಿಯುವ ಶಕ್ತಿಯಿರಲಿಲ್ಲ. ಅದರಿಂದ ಆಗಾಗ್ಗೆ ಗ್ಲಾನಿಯುಂಟಾಗುತ್ತಿದ್ದಿತಲ್ಲದೆ, ಕಣ್ಣುಗಳಿಂದ ಒಂದೇಸವನೆ ನೀರಿನ ಧಾರೆಯು ಸುರಿಯುತ್ತಿತ್ತು.

ಕೆಲ ಕ್ಷಣಗಳ ಮೇಲೆ ಅವಳು ನಮ್ಮ ಬಾಳಾಸಾಹೇಬನ ಕೈಯನ್ನು ತನ್ನ ಕೈಯಲ್ಲಿ ತಕ್ಕೊಂಡು, ಆತನಿಗೆ ಸಂಜ್ಞೆಯ ಮೂಲಕ ನಾನು, ಮಾಲತಿ, ನಮ್ಮ ಚಿಕ್ಕ ಸೊಸೆ ಹಾಗು ನಮ್ಮ ಚಿಕ್ಕ ಹುಡುಗ ಇವರುಗಳನ್ನು ತೋರಿಸಿ, ಬಾಯಿಂದ ಏನೋ ಹೇಳ ಹೋದಳು; ಆದರೆ ನಿಶ್ಶಕ್ತಿಯಿಂದಲೂ ದುಃಖಾತಿರೇಕದಿಂದಲೂ ಅವಳ ಬಾಯಿಂದ ಶಬ್ದಗಳೇ ಹೊರಡಲಿಲ್ಲ. ಆಗಿನ ಅವಳ ಆಶಯವು ನಮ್ಮೆಲ್ಲರಿಗೂ ಗೊತ್ತಾಯಿತು. ಆಗ ಬಾಳಾಸಾಹೇಬನು ಅವಳ ಕೈ ಮೇಲೆ ಕೈ ಹಾಕಿ ನಮ್ಮೆಲ್ಲರ ಪಾಲನ-ಪೋಷಣಗಳನ್ನು ಚೆನ್ನಾಗಿ ಮಾಡುತ್ತೇನೆಂದು ಗಟ್ಟಿಯಾಗಿ ಹೇಳಿ, ವಚನ ಕೊಟ್ಟನು. ತದನಂತರ ನನ್ನ ಗೃಹಿಣಿಯ ಮುಖಮುದ್ರೆಯು ಸುಪ್ರಸನ್ನವಾಯಿತು; ಹಾಗು ಮುಂದೆ ಕೆಲ ಹೊತ್ತಿನಲ್ಲಿಯೇ ಆಕೆಯ ದೇಹದೊಳಗಿನ ಪ್ರಾಣವಾಯುವು ಹೊರಟು ಹೋಯಿತು!

೦೦೦ ೦೦೦ ೦೦೦ ೦೦೦

ನನ್ನ ಗೃಹಿಣಿಯು ವಯೋಮಾನಕ್ಕನುಗುಣವಾಗಿ ಗತಿಸಿದ್ದರಿಂದ ಆಕೆಯ ಮರಣದ ಬಗ್ಗೆ ಯಾರೂ ಹೆಚ್ಚು ಕಳವಳಗೊಳ್ಳುವಂತಿರಲಿಲ್ಲ. ನಮ್ಮ ಮಾಲತಿ, ಚಿಕ್ಕ ಸೊಸೆ ಹಾಗು ನಮ್ಮ ಚಿಕ್ಕ ಮಗ ಇವರು ಕೆಲ ಕಾಲ ಶೋಕಗ್ರಸ್ತರಾಗಿದ್ದರು. ಮುತ್ತೈದೆಸಾವಿತ್ರಿಯು ಗಂಡನೆದುರಿಗೂ ಪ್ರೌಢರಾದ ಮಕ್ಕಳೆದುರಿಗೂ ಪಾರಾದದ್ದೇ ಪುಣ್ಯದಾಯಕವೆಂದು ಜನರು ಅನ್ನಹತ್ತಿದರು. ಜನರಾಡುವಂತೆ ಅವಳು ಹೊರಟು ಹೋದದ್ದು ವಿಹಿತವೇ; ಸರಿಯದರೆ ನನ್ನ ಮುದುಕನ ಆಜೀವ ಸನ್ಮಿತ್ರಳಾಗಿದ್ದ ಅವಳು ನನ್ನನ್ನು ಬಿಟ್ಟು ಹೊರಟು ಹೋದದ್ದರಿಂದ ನನಗೆ ಬಹು ದುಃಖವಾಯಿತು. ನಮ್ಮ ಮನೆಯೊಳಗಿನ ಹುಡುಗರನ್ನು ನೋಡಿಯೂ ಜನರೇನಂದಾರೆಂಬ ಭೀತಿಯಿಂದಲೂ ನಾನು ಅದನ್ನು ವ್ಯಕ್ತಪಡಿಸುವಂತಿರದ್ದೊಂದು ದುಃಖವು. ಹೆಚ್ಚಿನ ಯಾವುದೊಂದು ದುಃಖ-ಕಷ್ಟವಾದಾಗ ಅದನ್ನು ಮಂದಿಯ ಎದುರಿಗೆ ತೋಡಿಕೊಂಡು ಕಣ್ಣೀರು ಸುರಿಸಿದರೆ, ಆದರಿಂದ ಅಂತರಂಗದೊಳಗಿನ ದುಃಖಪ್ರವಾಹಕ್ಕೆ ಹೊರಬೀಳಲು ದಾರಿ ಸಿಕ್ಕು, ಅದು ಕ್ರಮೇಣ ಕಡಿಮೆಯಾಗುವದು; ಆದರೆ ಯಾವನಿಗೆ ತನ್ನ ದುಃಖವನ್ನು ಮಂದಿಯ ಎದುರಿಗೆ ತೋಡಿಕೊಳ್ಳ ಬರುವದಿಲ್ಲವೋ ಆತನಂತಹ ಕಡು ದುಃಖಿಯು ಇನ್ನೊಬ್ಬನಿಲ್ಲ.

ನನ್ನ ಗೃಹಿಣಿಯು ನನಗೆ ಪ್ರತಿಯೊಂದು ಕೆಲಸದಲ್ಲಿಯೂ ಪರಿಪರಿಯಿಂದ ನೆರವಾಗುತ್ತಿದ್ದಳು. ಮನುಷ್ಯನಿಗೆ ಸನ್ಮಿತ್ರನಂತಹ ಸಖನಿನ್ನೊಬ್ಬನಿಲ್ಲೆಂದೆನ್ನುವ ರೂಢಿಯುಂಟು; ಆದರೆ ಸನ್ಮಿತ್ರನಿಗೂ ತಿಳಿಸದಂತಹ, ಆತನ ಸಲಹೆ ಪಡೆಯದಂತಹ ಎಷ್ಟೋ ಅತಿ ಸೂಕ್ಷ್ಮ ಸಂಗತಿಗಳು ಈ ಸಂಸಾರದಲ್ಲಿ ಪ್ರತಿನಿತ್ಯವೂ ಉಂಟಾಗುತ್ತಿರುತ್ತವೆ. ಅಂಥ ಸಂಗತಿಗಳಲ್ಲಿ ಮನೆಯ ಯಜಮಾನನಿಗೆ ಆಪ್ತಭಾವದಿಂದ ನೆರವಾಗುವ ಸನ್ಮಿತ್ರಳೆಂದರೆ, ಸುಗೃಹಿಣಿಯೇ ಸರಿ. ಅದರಿಂದ ನಾನು ನನ್ನ ಗೃಹಿಣಿಯನ್ನು ಸುಭಾಷಿತಕಾರರು ವರ್ಣಿಸಿರುವಂತೆ,—

> "ಕಾರ್ಯೇಷು ಮಂತ್ರೀ, ಕರಣೇಷು ದಾಸೀ,
> ಭೋಜ್ಯೇಷು ಮಾತಾ, ಶಯನೇಷು ರಂಭಾ,
> ಧರ್ಮಾನುಕೂಲಾ, ಕ್ಷಮಯಾ ಧರಿತ್ರೀ,
> ಭಾರ್ಯಾಚ ಷಾಡ್ಗುಣ್ಯವತೀಹ ದುರ್ಲಭಾ"

ಷಡ್ಗುಣಯುತವಾದ ದುರ್ಲಭವಸ್ತುವೆಂದೇ ಭಾವಿಸಿದ್ದೆನು.

ನನ್ನ ಗೃಹಿಣಿಯು ತೀರಿಕೊಂಡ ಬಳಿಕ ನನಗೆ ಎಲ್ಲ ಕಡೆಗೂ ಉದಾಸವಾಗಿ ತೋರತೊಡಗಿತು. ಪ್ರತಿಯೊಂದರಲ್ಲಿಯೂ ನಿರಿಚ್ಛೆಯುಂಟಾಯಿತು. ಮನೆತನದ ಖರ್ಚು ಕಂದಾಯ ಹಾಗು ತರಬರುವದರ ವ್ಯವಸ್ಥೆ ಮಾಡುವದನ್ನು ನಾನು ಈ ಮೊದಲೇ ಬಿಟ್ಟಂತಾಗಿತ್ತು; ಆದರೂ ಮನೆಯೊಳಗಿನವರೆಲ್ಲರೂ ಪ್ರತಿಯೊಂದು ಬಾಬಿನಲ್ಲಿ ನನ್ನ ಸಲಹೆಯನ್ನು ಕೇಳಿಕೊಂಡೇ ಕೆಲಸ ಮಾಡುತ್ತಿದ್ದರು. ನನ್ನ ಗೃಹಿಣಿಯು

ನಿಧನದನಂತರ ಅವರು ನನ್ನ ಸಲಹೆ ಕೇಳಬಾರದೆಂದೇ ನನಗನಿಸಹತ್ತಿತು; ಯಾಕಂದರೆ, ಯಾವುದೊಂದು ಸಂಗತಿಯ ವಿಚಾರ ಮಾಡಹತ್ತಿದಾಗೆಲ್ಲ ನನಗೆ ಎಲ್ಲಕ್ಕೂ ಮೊದಲು ನನ್ನ ಗೃಹಿಣಿಯ ನೆನಪೇ ಆಗುತ್ತಿತ್ತು. ಹಾಗಾಯಿತೆಂದರೆ, ಮುಂದೆ ನನ್ನ ಯಾವ ವಿಚಾರಗಳಿಗೂ ಚಾಲನೆ ದೊರೆಯುತ್ತಿರಲಿಲ್ಲ.

ನಾನು ಹೀಗೆ ಕೇವಲ ಉದಾಸವೃತ್ತಿಯಿಂದಿರ ಹತ್ತಿದ ಕೂಡಲೆ ಸ್ವಜನರು ನನ್ನನ್ನು ದೂಷಿಸಹತ್ತಿದರು. ಅಠವತ್ತರ ಮನೆಗೆ ಬಂದಿದ್ದ ಈ ಗುರುಭಟ್ಟನು ಮುತ್ತೈದೆ ಸಾವಿತ್ರಿಯಾಗಿ ಗತಿಸಿರುವ ಆ ಕಾವಕ್ಕನನ್ನು ನೆನೆನೆನಿಸಿ, ಕೇವಲ ವಿಷಯಲೋಲುಪ ತರುಣರು ಪ್ರಿಯ ಕಾಂತಾ ವಿರಹದಿಂದ ಬಳಲುವಂತೆ ಉದಾಸನಾಗುವದೇನು ಶೋಭಿಸುವದೇ? ಮನೆಯಲ್ಲಿ ಎದೆಯುದ್ದ ಗಂಡುಮಕ್ಕಳು ಹೆಣ್ಣುಮಕ್ಕಳು ಸೊಸೆಯಂದಿರು ಇರುವರು; ಮಾಡು-ಮುಟ್ಟಲಿಕ್ಕೆ ಅಡಚಣಿಯೇ? ತಿನ್ನುಣ್ಣಲಿಕ್ಕೆ ಕೊರತೆಯೇ? ಚಿಕ್ಕ ಮಕ್ಕಳ ಜಂಜಾಟವೇ? ಎಂದು ನಿಂದಿಸಹತ್ತಿದರು.

**ಭಾರ್ಯಾ ವಿಯೋಗಃ ಸ್ವಜನಾಪವಾದೋ**
**ಋಣಸ್ಯ ಶೇಷಂ ಕೃಪಣಸ್ಯ ಸೇವಾ।**
**ದಾರಿದ್ರ್ಯ ಕಾಲೇ ಪ್ರಿಯದರ್ಶನಂ ಚ**
**ವಿನಾಗ್ನಿನಾ ಪಂಚ ದಹಂತಿ ಕಾಯಮ್॥**

ಮೇಲಿನ ಸುಭಾಷಿತದಲ್ಲಿ ಹೇಳಿರುವಂತೆ ಭಾರ್ಯೆಯ ವಿಯೋಗ, ಸ್ವಜನಾಪವಾದ, ಸಾಲದ ಶೂಲ, ಜೀನನ ಸೇವೆ ಹಾಗು ಬಡತನದಲ್ಲಿ ಸ್ವಕೀಯರ ಭೆಟ್ಟಿ ಇವು ಐದು ಅಗ್ನಿವಿರಹಿತ ದಾಹಕಗಳು ನಮ್ಮ ದೇಹವನ್ನು ಭಸ್ಮ ಮಾಡಿಬಿಡುತ್ತವೆ.

ವಾಚಕರೇ, ನಾನು ನನ್ನ ಗೃಹಿಣಿಯ ವಿರಹದಿಂದ ಬಳಲಿ ಕಂಗೆಟ್ಟು ಉದಾಸನಾದೆನೆಂದು ನಮ್ಮ ಆಪ್ತ ಸ್ವಜನರಂತೆ ನೀವಾದರೂ ತಿಳಿದಿರಬಹುದು; ಆದರೆ ನನ್ನ ಉದಾಸದ ಕಾರಣವೇ ಬೇರೆಯಾಗಿದೆ. ಚಿಕ್ಕಂದಿನಿಂದಲೂ ಒಟ್ಟಾಗಿ ಕಲೆತು ಹಲವು ಸಂಕಟಪರಂಪರೆಗಳ ಘರ್ಷಣವನ್ನು ಒಟ್ಟಾಗಿಯೇ ಅನುಭೋಗಿಸಿದ ನಾನು, ನನ್ನ ಬಹಿರಂಗ ಜೀವವಾಗಿದ್ದ ನನ್ನ ಗೃಹಿಣಿಯನ್ನು ತೊರೆದು ಈ ಜಗತ್ತಿನಲ್ಲಿ ಹಿಂದುಳಿದ ಬಗ್ಗೆ ನನಗೆ ಬಹು ಕೆಡಕೂ ಲಾಂಛನವೂ ಎನಿಸುತ್ತದೆ ನನ್ನ ಗೃಹಿಣಿಯು ನನ್ನ ಸುಖ-ದುಃಖದ ಪ್ರತಿಯೊಂದು ಪ್ರಸಂಗಗಳಲ್ಲಿ ನನಗೆ ಕೇವಲ ನೆಳಲಿನಂತೆ ಅನುವರ್ತಿಸುತ್ತಿರಲು, ನಾನು ಮಾತ್ರ ಆಕೆಯ ಕೊನೆಯ ಪ್ರಸಂಗದಲ್ಲಿ ಆಕೆಯನ್ನು ಬಿಟ್ಟು ಹಿಂದುಳಿದ ಬಗ್ಗೆ ನನಗೇಕೆ ಕೆಡಕೆನಿಸಬಾರದು?

**ಗೃಹಿಣೀ ಸಚಿವಃ ಸಖಿಮಿಥಃ**
**ಪ್ರಿಯಶಿಷ್ಯಾ ಲಲಿತೇ ಕಲಾವಿಧೌ**
**ಕರುಣಾ ವಿಮುಖೇನ ಮೃತ್ಯುನಾ**
**ಹರತಾ ತ್ವಾಂ ವದ ಕಿಂ ನ ಮೇ ಹೃತಮ್।**

ಎಲ್ಲೈ ಮೃತ್ಯುವೇ, ಎಲ್ಲ ಬಗೆಯಿಂದಲೂ ನನ್ನನ್ನನುಸರಿಸಿದವಳಾದ ನನ್ನ ಗ
ಣಿಯನ್ನು ಎಳೆದೊಯ್ಯುವಾಗ ನನ್ನನ್ನೇಕೆ ಬಿಟ್ಟು ಹೋದೆ? ಎಂಬೀ ಧ್ಯಾಸವು ನ
ನೆಲೆಗೊಂಡು ಬಿಟ್ಟಿದೆ.

ವಾಚಕರೇ, ನನ್ನೀ ವೃತ್ತಾಂತವನ್ನು ಕೇಳಿ ನೀವೂ ನನ್ನನ್ನು ಕೇವಲ ವಿಷ
ಲಂಪಟನೆಂದೂ ಹೆಣ್ಣುಗಳ್ಳನವನೆಂದೂ ಅಂದುಕೊಳ್ಳಬಹುದು; ಆದರೆ ನೀವು ಹ
ನ್ನುವ ಮೊದಲು ತುಸ ವಿಚಾರಪೂರ್ವಕನಾಗಿ ನನ್ನ ವಿವರಣದ ಕಡೆಗೆ ಲಕ್ಷ್ಯ
ಡಿರಿ. ನಾನು ಸುಮಾರು ಐವತ್ತು ವರ್ಷಗಟ್ಟಲೆಯ ನನ್ನ ಆಯುಷ್ಯವನ್ನು
ಪ್ರಿಯ ಗೃಹಿಣಿಯ ಸಹವಾಸದಲ್ಲಿಯೇ ಕಳೆದುದರಿಂದ, ನನ್ನ ದೈಹಿಕ ಕ್ರಿಯೆ
ಎಲ್ಲ ಮೆಟ್ಟಿಲುಗಳೂ ಅವಳಿಗೆ ಸ್ಥಿರ ಪರಿಚಿತವಾಗಿದ್ದವು. ಆದರಿಂದ ನನಗೆ ನೆ
ಕೆಮ್ಮು ಆದಾಗಾಗಲಿ, ಜ್ವರ ಕಾಹಿಲೆ ಬಂದಾಗಾಗಲಿ ಅದು ಏತರಿಂದಾಯಿತೆಂ
ನನಗಿಂತಲೂ ಅವಳಿಗೆ ಬೇಗನೆ ತಿಳಿಯುತ್ತಿತ್ತು; ಹಾಗು ಆ ಕೂಡಲೆ ಅ
ಯೋಗ್ಯ ಉಪಚಾರಗಳಿಂದ ಅದನ್ನು ಸರಿಪಡಿಸುತ್ತಿದ್ದಳು. ಇತ್ತೀಚೆಗೆ ನನ್ನ ಶುಶ್ರೂ
ಯನ್ನು ನಮ್ಮ ಬಾಳ, ಬಾಳನ ಹೆಂಡತಿ, ಮಾಲತಿ ಹಾಗು ಚಿಕ್ಕ ಸೊಸೆ ಮೊದ
ವರೆಲ್ಲರೂ ಮನಮುಟ್ಟಿ ಮಾಡುತ್ತಿದ್ದರೂ, ಅವರ ಆ ಸೇವಾ--ಶುಶ್ರೂಷೆ
ಜೀವಾಳವೇ ಇಲ್ಲೆಂದು ನನ್ನ ಪ್ರಾಮಾಣಿಕವಾದ ಅಭಿಪ್ರಾಯವಾಗಿದೆ. ಯಾಕಂ
ನಾನು

**‘ಭಾರ್ಯಾ ಸಮಂ ನಾಸ್ತಿ ಶರೀರ ತೋಷಣಂ’**

ಎಂಬ ಮತಾವಲಂಬಿಯಾಗಿರುತ್ತೇನೆ.

ಇದರಿಂದ ನಾನು ನನ್ನ ಗೃಹಿಣಿಯನ್ನು ವಿಪರೀತವಾಗಿ ಹೊಗಳುತ್ತ
ನೆಂದು ಕೆಲವರು ಆಕ್ಷೇಪಿಸಬಹುದು; ನಿಜಸ್ಥಿತಿಯು ಕೆಲಮಟ್ಟಿಗೆ ಹಾಗೆಯೇ ಇದ್ದ
ಕ್ಷಣಕ್ಷಣಕ್ಕೆ ದಾಂಪತ್ಯ ವಿಚ್ಛೇದ ಬೇಡುವ ಈಗಿನ ಕಾಲದಲ್ಲ ಸುಗೃಹಿಣಿಯ
ವಾಸದಿಂದ ಜೀವನ ಕಲಹವು ಎಷ್ಟು ಸುಗಮವಾಗುತ್ತದೆಂದು ತಿಳಿದು ಪ್ರತಿಯೆ
ಸಂಸಾರಿಕನು ಅಂಥ ಸುಗೃಹಿಣಿಯ ನೆರವಿನಿಂದ ತನ್ನ ಸಂಸಾರಸಾಗರವನ್ನು
ರೂಪದಿಂದ ದಾಟಲೆಂದು ಇಚ್ಛಿಸಿ, ನಾನೀ ಸಂಗತಿಯನ್ನು ಬೇಕಂತ ಹೇಳಿರುತ್ತ
ಸೂಜ್ಞ ವಾಚಕರು ವಿಹಿತಾವಿಹಿತಗಳನ್ನು ತಿಳಿದು ಆಚರಿಸುವರೆಂದು ಭಾ
ನಾನಿನ್ನು ವಿರಾಮಗೊಳ್ಳುತ್ತೇನೆ.

---

**ಸಂಪೂರ್ಣಂ**

ಇದನ್ನು ಭಿ. ಪ. ಕಾಳೆ, ಇವರು ಆನಂದವನ-ಅಗಡಿಯೊಳಗಿನ ತಮ್ಮ
**ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಛಾಪಿಸಿದರು.**